# ನರ್ಸ್ ನಳಿನಿ




As. 10

# ನರ್ಸ್ ನಳಿನಿ

(ಪತ್ತೇದಾರಿ ಕಾದಂಬರಿ)





ಲೇಖಕ

ಬಿ. ಕೆ. ಸುಂದರರಾಜ್



ಬೆಲೆ ೦-೧೦-೦]     1955     [ Price 0-10-0

ಮೊದಲನೆಯ ಮುದ್ರಣ 1955



ಮುಖಚಿತ್ರದ ರಚನೆ:
ಎಸ್. ಆರ್. ಸ್ವಾಮಿ



ಪಡಿಯಚ್ಚು:
ಷಣ್ಮುಗಂ ಪ್ರೋಸೆಸ್ ಸ್ಟುಡಿಯೋ



ಮುಖಪತ್ರದ ಮುದ್ರಣ:
ಕೈಲಾಸ್ ಪ್ರಿಂಟರ್ಸ್, ಓ. ಟಿ. ಸಿ. ರೋಡ್, ಬೆಂಗಳೂರು 2

ಮುದ್ರಕರು :
ಎಚ್. ವೆಂಕಟೇಶಯ್ಯ.
ಶ್ರೀ ಶ್ರೀನಿವಾಸ ಪ್ರೆಸ್, ಬೆಂಗಳೂರು-2.

---

# ನನ್ನ ಮಾತು ..................................................

"ಲೋಕವು ಒಂದು ಜೂಜುಕೋರರ ಸಂತೆ! —ಲೋಕವು ನಯವಂಚಕರ ವಸತಿಗೃಹ! —ಲೋಕವು ವೀರಮಾತುಗಳನ್ನಾಡುವ ಹೀನರ ಸ್ಫೋಟನವಾಗುವ ಮದ್ದಿನ ಶಾಲೆ! —ಲೋಕವು ಹಣವಂತರೊಂದಿಗೂ ಬಿರುದಾಂಕಿತ ಪದವಿ ಹೊಂದಿರುವವರೊಂದಿಗೂ ಕೈಕುಲುಕಿಸುವ ಗೆಳೆಯ! —ಲೋಕವು ಬಡವರಿಗೆ ಮಾನದಿಂದ ಬಾಳಲು ಆಸ್ಪದ ಕೊಡದೆ ಅವರ ಮೇಲೆ ಶೂಲದಿಂದ ಚುಚ್ಚುವ ವಿರೋಧಿ! —ಲೋಕವು ಅಕ್ರಮ ಭೂತಗಳನ್ನು ಆದರಿಸಿ, ಅಮಾಯಕರನ್ನು ಅಪಮೃತ್ಯುವಿಗೀಡುಮಾಡುವ ದುರಹಂಕಾರಿ!! —ಹೌದು. ಅಂತಹ ಲೋಕದಲ್ಲೇ ನಾನೂ ಹುಟ್ಟಿದೆ! —ಅದೂ ಹೆಣ್ಣಾಗಿ......................! ಅದು ದೇವರ ತಪ್ಪಿರಬೇಕು ಅಥವಾ ನನ್ನನ್ನು ಹೆತ್ತ ತಾಯಿತಂದೆಯರ ತಪ್ಪಿರಬೇಕು!!

"ಹುಟ್ಟಿದ ದಿನ ಮೊದಲ್ಗೊಂಡು ನಾನು ಆತ್ಮಹತ್ಯೆ ಮಾಡಿಕೊಳ್ಳುವ ದಿನದ ವರೆಗೂ ನಾನು ಸುಖಪಟ್ಟದ್ದುಂಟೆ? ಹೆಚ್ಚಾಗಿ ವಿವರಿಸಲು ನನಗೆ ಈಗ ಸಮಯವಿಲ್ಲ. ಅಣು ಅಣುವಾಗಿ ಕ್ಷೀಣಿಸುತ್ತಿರುವ ಈ ಜೀವವು ಸಂಪೂರ್ಣ ಹೋಗುವವರೆಗೂ, ಲೋಕದಲ್ಲಿ ನನಗೆ ದುರ್ಬೋಧನೆ ಮಾಡಿ ಹಿಂಸೆಕೊಟ್ಟು ನನ್ನ ಪತಿಯನ್ನು ಸೆರೆಮನೆಯಲ್ಲಿರಿಸಿ, ನನ್ನ ಬಾಳನ್ನು ಹಾಳುಮಾಡಿದ ನಯವಂಚಕ ದುರ್ಮಾರ್ಗ ದುರಾತ್ಮರಿಗಾಗಿ ಅತ್ತು ಅತ್ತು ಬಾಯಾರಿಕೆ ಹಸಿವಿನಿಂದ ಸಾಯುತ್ತೇನೆ! ಅಂದು ಮಾಡಿದ ಪಾಪಕೃತ್ಯಕ್ಕಾಗಿ ತಾವು ಹೀನಾಯವಾಗಿ ನನ್ನನ್ನು ಅಲ್ಲಗೆಳೆಯಬಹುದು. —ಆದರೆ ಮುಂದೆ ಬಿದ್ದಿರುವ ನನ್ನ ಕಥೆಯನ್ನು ಓದಿದ ನಂತರ; ನನ್ನ ಜೀವನದಲ್ಲಿ ನಡೆದ ಆಗುಹೋಗುಗಳು ನಿಮಗೆ ಅರಿವಾದ ನಂತರ; ಕೇಳುತ್ತಿದ್ದೇನೆ ನಾಗರಿಕ ಯುವಕರೇ? ನನ್ನನ್ನು ರಾಜನ್ ಹಾಳು ಮಾಡಿದಂತೆ ನೀವು ಬೇರೆ ಆಸ್ಪತ್ರೆಯ ನರ್ಸ್‌ಗಳ ಬಾಳನ್ನೂ ಹಾಳುಮಾಡಲು ಪ್ರಯತ್ನಪಡುತ್ತೀರೇ? ನನ್ನಂತಹ ದಿಕ್ಕಿಲ್ಲದ ದುರ್ಭಾಗ್ಯ ನರ್ಸ್‌ಗಳನೇಕರು ಭಾರತದಲ್ಲಿ ಹೇರಳವಾಗಿ ಬಿದ್ದಿದ್ದಾರೆ. ಅವರಿಗೆ ಯಾವ ವಿಧವಾದ ಧಕ್ಕೆ ಬಾರದಂತೆ ನಿಮ್ಮಿಂದ ತಡೆಗಟ್ಟಲು ಸಾಧ್ಯವೇ?" ಎಂದು ಕೇಳುತ್ತಾಳೆ ನರ್ಸ್ ನಳಿನಿ.

ಪ್ರಕಾಶನದ ಹಿರಿಮೆ



ಟಿ. ನಾರಾಯಣಐಯ್ಯಂಗಾರ್

ಪ್ರಕಾಶನದ ಮೇಲ್ವಿಚಾರಣೆ



ಎನ್. ಸುಬ್ಬರಾವ್

ಆದರೆ ಆಕೆಯು ಹಾಕುತ್ತಿರುವ ಪ್ರಶ್ನೆಯು ಓದುಗರ ಮನಸ್ಸನ್ನು ವಿಪರೀತಕ್ಕೆ ಕೊಂಡುಹೋಗಬಹುದು. ಆಕೆಯ ಶೋಕ ಜೀವನದ ಸ್ವಾರಸ್ಯವನ್ನು ತಿಳಿದನಂತರ ನರ್ಸಳಮೇಲೆ ನೀವು ಅಂದುಕೊಂಡ ಕಹಿ ನೆನಪುಗಳು ಜಾರಬಹುದು.

ಈ ಪತ್ತೇದಾರಿ ಕಾದಂಬರಿಯೊಂದಿಗೆ ಆದಷ್ಟು ಪ್ರಗತಿ, ಪ್ರಣಯಗಳನ್ನು ಮಿಶ್ರಮಾಡಿ ಗೆರೆದಿದ್ದೇನೆ.

"ಇದೊಂದು ಆಸ್ಪತ್ರೆಯ ನರ್ಸಳ ಜೀವನದಲ್ಲಿನ ಒಂದು ಶೋಕಘಟ್ಟದ ಅಂತ್ಯ" ಎಂಬುದಾಗಿ ನನ್ನ ಊಹೆಯಿಂದ ವಾಚಕರ ಮುಂದಿಡುತ್ತಿದ್ದೇನೆ. ನಿಜದಲ್ಲಿ ಒಂದುವೇಳೆ ಹೀಗೆಯೇ ನಡೆದದ್ದೇ ಆದರೆ ಖಂಡಿತ ಅದಕ್ಕಾಗಿ ನಾನು ಮರುಗದೆ ಇರಲಾರೆ. !

ಈ ಬಗೆಯಾದ ಕಾದಂಬರಿಯನ್ನು ಬರೆಯಲು ಉತ್ಸಾಹಕೊಟ್ಟು ಕೆರಳಿಸಿದವರು ಚಲನಚಿತ್ರ ಹಿಂಬದಿ ಗಾಯಕರಾದ ಶ್ರೀ ಎನ್. ಸುಬ್ಬರಾವ್‌ರವರು. ಆದರದಿಂದ ಮುದ್ರಣ ಮಾಡಿಸಿ ನನ್ನ ಶ್ರೇಯೋಭಿಲಾಷೆಯನ್ನು ಕೋರಿ ವಾಚಕರ ಮುಂದಿಟ್ಟವರು ನಗರದ ಮುಖ್ಯ ಪತ್ತೇದಾರಿಯ ಪ್ರಕಾಶಕರಾದ ಶ್ರೀ ಟಿ. ನಾರಾಯಣ ಐಯ್ಯಂಗಾರರು. ಇವರಿಬ್ಬರು ನನಗಿತ್ತಿರುವ ಪ್ರೋತ್ಸಾಹ ಚಿರಸ್ಮರಣೀಯವಾದುದೆಂದೇ ನನ್ನ ಭಾವನೆ.

—ಲೇಖಕ.

---

# ನರ್ಸ್ ನಳಿನಿ

೧

"ಶಾಂತಾ, ಸ್ವಲ್ಪ ಬಿಸಿ ನೀರು ಮಾಡಿಕೊಡಮ್ಮಾ. ಬಹಳ ಬಾಯಾರಿಕೆಯಾಗಿದೆ. ಗಂಟಲೆಲ್ಲಾ ಒಣಗಿ ಹೋಗಿದೆ."

"ಡಾಕ್ಟರು ನೀರು ಕೊಡಕೂಡದೆಂದು ಹೇಳಿದ್ದಾರೆ ಮಾವ. ಬಾಯಾರಿಕೆಯೆಂದರೆ ಗ್ಲೂಕೋಸ್ ಸಕ್ಕರೆಯನ್ನು ಐಸ್ ವಾಟರ್‌ನಲ್ಲಿ ಹಾಕಿ ಕೊಡಬಹುದು ಎಂದಿದ್ದಾರೆ. ಕೊಡಲೇ ?"

"ಬೇಡಮ್ಮ. ಅದನ್ನು ಕುಡಿದರೆ ಕೆಮ್ಮಲು ಜಾಸ್ತಿಯಾಗುತ್ತೆ."

"ಇನ್ನು ಅರ್ಧ ಗಂಟೆ ಸ್ವಲ್ಪ ತಡೆದುಕೊಳ್ಳಿ. ಡಾಕ್ಟರು ಬರುತ್ತಾರೆ. ಅವರ ಬಳಿ ಕೇಳಿ ಬಿಸಿನೀರನ್ನೇ ಮಾಡಿಕೊಡುತ್ತೇನೆ."

"ಸುಮ್ಮನೆ ಮಾತನಾಡಬೇಡಿ ತಾತ. ಮೈ ಸುಸ್ತಾಗುತ್ತೆ. ಮಾತನಾಡಿಸಬೇಡಿ ಶಾಂತಮ್ಮನವರೆ."

"ನರ್ಸಮ್ಮ, ಮಾವನವರಿಗೆ ಗಂಟಲು ಬಾಡಿಹೋಗಿದೆಯಂತೆ. ಬಿಸಿ ನೀರು ಕೇಳುತ್ತಿದ್ದಾರೆ."

"ಬೇಡಮ್ಮ. ಡಾಕ್ಟರು ಬಂದನಂತರ ಬೇಕಾದರೆ ಅವರ ಬಳಿ ಕೇಳಿ ಕೊಡಿ. ನೀವಾಗಿ ನೀವು ಒಂದು ತೊಟ್ಟನ್ನೂ ಕೊಡಬೇಡಿ. ಜೋಕೆ ?"

"ಆಗಲಿ ನರ್ಸಮ್ಮ. ಹೇಗೋ ಒಂದೆರಡು ದಿನ ಕಷ್ಟವಾದರೂ ಸುಧಾರಿಸಿಕೊಂಡಿದ್ದು ಬಿಟ್ಟರೆ ಜಾಗ್ರತೆ ಗುಣವಾಗಿಬಿಡಬಹುದಲ್ಲವೇ ?"

"ಭಯವೇನಿದೆ ಶಾಂತ. ಇನ್ನು ಹದಿನೈದು ದಿನಗಳೊಳಗಾಗಿ ತಾತನವರು ಎದ್ದು ತಾವಾಗಿಯೇ ನಡೆಯುತ್ತಾರೆ. ಇದರಲ್ಲಿ ಸಂದೇಹ ಪಡಬೇಕಾದ್ದೇನಿದೆ !"

"ಹಾಗಲ್ಲ ನರ್ಸಮ್ಮ. ನಮ್ಮ ಕುಟುಂಬದಲ್ಲಿ ಇವರೇ ದೊಡ್ಡ ತಲೆ. ಪ್ರತಿಯೊಬ್ಬರೂ ಇವರನ್ನೇ ನಂಬಿಕೊಂಡಿದ್ದೇವೆ. ಇವರಿಗೇನಾದರೂ ಅಕಸ್ಮಾತ್ ಸಂಭವಿಸಿತೆಂದರೆ ನಾವು ಬದುಕಿ ಪ್ರಯೋಜನವಿರಲಾರದು."

"ಅದೇಕೆ ಹಾಗೆ ಹೇಳುತ್ತೀರಿ ?"

"ಮಾವನವರಿಗೆ ಇನ್ನೂ ಒಬ್ಬ ಹೆಣ್ಣುಮಗಳಿರುವಳು. ಆಕೆಗೆ ಮದುವೆಯಾಗಬೇಕು. ದೊಡ್ಡ ಮಗಳು ಅತ್ತೆ ಮನೆಯಲ್ಲಿ ನರಕಬಾಧೆ ಅನುಭವಿಸಿಬಿಡುತ್ತಿದ್ದಾಳೆ."

"ಶಾಂತಾ. ಅಯ್ಯೋ....ಬಾಯಾರಿಕೆ. ನಾಲಗೆ ಎಳೆಯುತ್ತೆ. ಸ್ವಲ್ಪ ನೀರು ಕುಡಿಸು. ಹಾಲಾದರೂ ಸರಿ. ದೇವರೇ! ನನ್ನನ್ನು ಜಾಗ್ರತೆ ಕರೆಯಿಸಿಕೊಳ್ಳಪ್ಪ!" ಪುನಃ ಕೆಮ್ಮಲು ಮೊದಲುಮಾಡಿದರು ರಾಮರಾಯರು.

"ಹೋಗಲಿ, ಸ್ವಲ್ಪ ಬಿಸಿ ನೀರೋ ತಣ್ಣೀರೋ ಯಾವುದಾದರೂ ಸರಿ, ಕೊಟ್ಟುಬಿಡಿ, ಶಾಂತ."

"ಡಾಕ್ಟರು ಏನಾದರೂ ಅನ್ನುತ್ತಾರೆಯೋ ಏನೋ?"

"ಏನಾದರೂ ಆಗಲಿ. ಸ್ವಲ್ಪ ನೀರನ್ನು ಬಿಸಿಮಾಡಿ ಕೊಡಿ."

ಶಾಂತ ನೀರನ್ನು ಬಿಸಿಮಾಡಲು ಪಾತ್ರೆಯೊಂದರಲ್ಲಿ ನೀರನ್ನು ತುಂಬಿ ವಾರ್ಡಿನ ಹಿಂಭಾಗದಲ್ಲಿದ್ದ ಕೋಣೆಗೆ ಹೋಗಿ ಹೀಟರಿನ ಸ್ವಿಚ್ಚನ್ನು ಹಾಕಿ ಹೀಟರಿನಮೇಲೆ ಪಾತ್ರೆಯನ್ನಿಟ್ಟಳು. ರಾಯರು ಉಸಿರು ಬಿಡದೆ ಕೆಮ್ಮುತ್ತಿರುವುದು ಶಾಂತಳಿಗೆ ಕೇಳಿಸುತ್ತಲೇ ಇತ್ತು. ಪಾತ್ರೆಯಲ್ಲಿರುವ ನೀರು ಯಾವಾಗ ಸ್ವಲ್ಪ ಬೆಚ್ಚಗಾಗುತ್ತದೋ ಎಂದು ಆತುರದಿಂದ ಕಾದಿದ್ದು, ಸ್ವಲ್ಪ ಬೆಚ್ಚಗಾದ ನಂತರ ಪಾತ್ರೆಯನ್ನು ಸೆರಗಿನಲ್ಲಿ ಹಿಡಿದು ಬೇಗನೆ ತಂದು ರಾಯರ ಬಾಯಲ್ಲಿ ಎರಡು ಗುಟುಕು ನೀರನ್ನು ಹಾಕಿದಳು.

"ಅಬ್ಬಾ, ಈಗ ನನಗೆ ಪ್ರಾಣ ಬಂದಿತಮ್ಮಾ. ಶಾಂತ! ಈ ನನ್ನ ಅಂತ್ಯಕಾಲದಲ್ಲಿ ನೀನೊಬ್ಬಳೇ ನನ್ನನ್ನು ತಾಯಿಯಂತೆ ಕಾಪಾಡುತ್ತಿದ್ದೀಯಮ್ಮ. ನಿನಗೆ ದೇವರು ಒಳ್ಳೆಯದನ್ನು ಮಾಡಲಿ" ಪುನಃ ಕೆಮ್ಮಲು ಅವರನ್ನು ಬಿಡಲಿಲ್ಲ, ಕಾಡುತ್ತಲೇ ಇತ್ತು.

ರಾಯರು ಆಡಿದ ಮಾತಿಗೆ ಶಾಂತ ಯಾವ ಬದುಲನ್ನೂ ಕೊಡಲಿಲ್ಲ. ಆಕೆಗೆ ಒಂದೇ ಚಿಂತೆ. ಮಾವನವರಿಗೆ ಗುಣವಾಗುತ್ತದೆಯೋ, ಇಲ್ಲವೋ? ಒಂದು ವೇಳೆ ಮಾವನವರಿಗೆ ತೀರ ಕೆಮ್ಮಲು ಜ್ವರ ಹೆಚ್ಚಾಗಿ ಜ್ವರ ಬಿಡದೆ ಅವರು ಕಣ್ಮುಚ್ಚಿದರೆ ನಮ್ಮ ಗತಿಯೇನು? ನಮ್ಮನ್ನು ಆದರಿಸುವವರ್ಯಾರು? ಬಂಗಲೆ, ತೋಟ, ಪೈರು ಇವುಗಳನ್ನೆಲ್ಲಾ ನೋಡಿ ಸುಧಾರಿಸುವವರ್ಯಾರು? ಹೆಸರಿಗೆ ಮಾತ್ರ ನನ್ನನ್ನು ಮದುವೆ ಮಾಡಿಕೊಂಡು ಜೀವನವೆಲ್ಲವನ್ನೂ ಆ

ಸೂಳೆಯ ಮನೆಯಲ್ಲಿಯೋ ಕಳೆದುಬಿಡುತ್ತಿದ್ದಾರೆ. ಅವರಿಗಂತೂ, ತಂದೆ, ತಾಯಿ, ಒಡಹುಟ್ಟಿದವರು, ಹೆಂಡತಿ ಯಾರೂ ಬೇಕಾಗಿಲ್ಲ. ಹಣ ಬೇಕಾಗಿದ್ದರೆ ಆಳಿನ ಕೈಯಲ್ಲಿ ಹೇಳಿಕಳುಹಿಸಿಯೋ, ಪೋಸ್ಟಿನ ಮೂಲಕವೋ ತರಿಸಿಕೊಳ್ಳುತ್ತಾರೆ. ಸಾಕಿದ ತಂದೆಯು ಮರಣೋನ್ಮುಖರಾಗಿ ಹಾಸಿಗೆಯಲ್ಲಿ ಮಲಗಿರುವುದನ್ನೂ ಲಕ್ಷ್ಯವಿಟ್ಟಿಲ್ಲ. ಒಂದು ವೇಳೆ ಮಾವನವರು ಸತ್ತು ಹೋದರೆ ನಂತರ ನನ್ನ ಗತಿ? ಮನೆಯಲ್ಲಿರುವ ಐದು ಜನ ಗಂಡು ಮಕ್ಕಳಿಗೂ ಆಸ್ತಿಯನ್ನು ಭಾಗ ಮಾಡಿಬಿಟ್ಟರೆ, ಆ ಭಾಗ ಬಂದ ಆಸ್ತಿಯನ್ನು ಯಜಮಾನರು ಜಾಗ್ರತೆ ಖರ್ಚು ಮಾಡಿ ಮುಗಿಸಿಬಿಟ್ಟರೆ ನನ್ನ ಗತಿ ಅಧೋಗತಿಯಲ್ಲವೆ? ಎಂದು ಶಾಂತ ತನ್ನಲ್ಲಿ ತಾನೇ ಪ್ರಶ್ನೆ ಹಾಕುತ್ತಿದ್ದಳು.

"ಇನ್ನೂ ರಾಜ್ ಬರಲಿಲ್ಲವೇನಮ್ಮ."

"ಈಗ ಬಂದು ಬಿಡುತ್ತಾರೆ ಮಾವ. ಬರುವ ಹೊತ್ತಾಯಿತು."

"ಅವನು ನಿಜವಾಗಿಯೂ ಬರುತ್ತಾನೆಯೋ ?"

ಶಾಂತ ಜವಾಬುಕೊಡಲಿಲ್ಲ. ಆಸ್ಪತ್ರೆಯ ಗಂಟೆಯು ಬಾರಿಸಿತು. ರೋಗಿಗಳನ್ನು ಕಾಣಲು ಹೋದವರು ಪ್ರತಿಯೊಬ್ಬರೂ ಮನೆಗಳಿಗೆ ಹಿಂದಿರುಗುತ್ತಿದ್ದರು. ಗಂಟೆ ಆರಾಯಿತು. ಅದು ಡಿಸೆಂಬರ್ ಮಾಸವಾದುದರಿಂದ ಬೇಗ ಕತ್ತಲಾಗುತ್ತಾ ಬಂದಿತ್ತು.

ನರ್ಸ್ ಬಂದು "ಶಾಂತಮ್ಮ, ಈಗ ಮನೆಗೆ ಹೋಗಿ. ತಾತಾವರನ್ನು ನಾನು ಗಮನಿಸಿಕೊಳ್ಳುತ್ತೇನೆ. ನಾನು ಒಂದು ವೇಳೆ ನನ್ನ ಡ್ಯೂಟಿ ಮುಗಿದು ಮನೆಗೆ ಹೋಗುವ ಹಾಗಿದ್ದರೆ ಖಂಡಿತ ನನ್ನ ಪತಿಯು ಬರುತ್ತಾರೆ. ಅವರೂ ಇದೇ ಆಸ್ಪತ್ರೆಯಲ್ಲೇ ನನ್ನ ಕೆಲಸವನ್ನೇ ಮಾಡುತ್ತಿದ್ದಾರೆ. ನನಗೆ ಹಗಲು ಡ್ಯೂಟಿಯಾದರೆ, ಅವರಿಗೆ ರಾತ್ರಿ ಡ್ಯೂಟಿ. ನಾನು ಅವರ ಬಳಿ ತಾತಾವರನ್ನು ಜಾಗರೂಕತೆಯಿಂದ ನೋಡಿಕೊಳ್ಳುವಂತೆ ಹೇಳುತ್ತೇನೆ. ನೀವು ಭಯಪಡಬೇಡಿ ಹೋಗಿ" ಎಂದುಧೈರ್ಯ ಹೇಳಿದಳು.

"ನರ್ಸಮ್ಮ. ನಮ್ಮ ಮಾವನವರ ಪ್ರಾಣ ನಿಮ್ಮ ಮಡಿಲಲ್ಲಿ ಹಾಕಿದ್ದೇವೆಂದುಕೊಳ್ಳಿ" ಎಂದಳು.

ಶಾಂತಳ ಕಣ್ಣುಗಳಲ್ಲಿ ಮುತ್ತುಗಳಂತೆ ಕಂಬನಿಯು ನಿಂತಿತ್ತು.

ಆರೂವರೆ ಗಂಟೆಯಾಯಿತು. ರಾಯರನ್ನು ಕಾಣಲು ಮತ್ತಾರೂ ಬರಲಿಲ್ಲ.

ರಾಜ್‌ ರಹಸ್ಯವಾಗಿ ಎಲ್ಲಿಯೋ ಇದ್ದುಬಿಟ್ಟದ್ದನೆಂದು ಕಾಣುತ್ತೆ. ಆಸ್ಪತ್ರೆಯ ಕಡೆ ಹೋಗಲಿಲ್ಲ. ಶಾಂತ ಆಸ್ಪತ್ರೆಯ ಬಳಿಯೇ ಪತಿಗಾಗಿ ಕಾದುಕಾದು ಮಾವನವರ ಬಳಿ ಉತ್ತರ ಪಡೆದು ಮನೆಗೆ ಕಾರಿನಲ್ಲಿ ಹಿಂದಿರುಗಿದಳು.

ಬೆಂಗಳೂರಿನ ಶೇಷಾದ್ರಿಪುರದ ರೋಡಿನ ಒಂದು ದೊಡ್ಡ ಬಂಗಲೆಯಲ್ಲಿ ವಾಸಮಾಡುತ್ತಿದ್ದರು ರಾಮುರಾಯರು. ದೊಡ್ಡ ಸ್ಥಿತಿವಂತರೇನೋ ಹೌದು. ಕೆಂಗೇರಿಯ ಪಕ್ಕದಲ್ಲಿ ಸುಮಾರು 50—60 ಎಕರೆ ಜಮೀನು ಅವರಿಗಿತ್ತು. ತಿಂಗಳಿಗೆ ಒಂದು ಸಾವಿರಕ್ಕೆ ಮೇಲೆ ಬಾಡಿಗೆ ಬೇರೆ ಬರುತ್ತಿತ್ತು.

ರಾಮುರಾಯರಿಗೆ ಇಬ್ಬರು ಪತ್ನಿಯರು. ಮೊದಲ ಹೆಂಡತಿ ಬೇಲೂರು ವೆಂಕಟಗಿರಿರಾಯರ ಮಗಳು ಸುಶೀಲಮ್ಮ. ಆಕೆಗೆ ಇಬ್ಬರು ಹೆಣ್ಣುಮಕ್ಕಳು ಹುಟ್ಟಿದ್ದರು. ಆಸ್ತಿಪಾಸ್ತಿಗಳನ್ನು ವೃಥಾ ಹೆಣ್ಣುಮಕ್ಕಳಿಗೆ ಕೊಟ್ಟು ಹಾಳು ಮಾಡಿಕೊಳ್ಳುವುದಲ್ಲದೆ ವಂಶದ ಕೀರ್ತಿಯನ್ನು ಬೆಳೆಸಲು ಗಂಡು ಮಗು ಒಂದಿದ್ದರೆ ಚೆನ್ನಾಗಿರುತ್ತಿತ್ತು ಎಂದು ಅಕ್ಕಪಕ್ಕದವರೂ ಬಂಧುಗಳೂ ರಾಮುರಾಯರಿಗೆ ಚುಚ್ಚುಮಾತುಗಳನ್ನಾಡುತ್ತಿದ್ದರು.

"ಅದಕ್ಕೆ ನಾನೇನು ಮಾಡಲಿ. ಭಗವಂತನ ಕರುಣೆ ಹೇಗಿದೆಯೋ ಹಾಗೆ ನಡೆಯುತ್ತೆ" ಎಂದುಬಿಡುತ್ತಿದ್ದರು ರಾಮುರಾಯರು.

"ನಾನೇನು ಮಾಡಲಿ ಎಂದು ಸುಮ್ಮನೆ ಬಾಯಲ್ಲಿ ಹೇಳಿ ಪ್ರಯೋಜನ ವೇನಿದೆ? ನೋಡಿ, ನಿಮಗೆ ಮನೆ, ಮಠ, ಆಸ್ತಿ ಸರ್ವಸ್ವವೂ ಇದೆ. ನೀವೇನು ಮುದುಕರಾಗಿಬಿಟ್ಟದ್ದೀರೆಂದು ಊಹಿಸಿಕೊಂಡಿರಬೇಕು. ಅದೆಲ್ಲ ನಿಮ್ಮ ಭ್ರಾಂತಿ. ಈಗತಾನೇ ನಲವತ್ತಕ್ಕೆ ಸಮೀಪಿಸುತ್ತಿದೆ. ಅರವತ್ತು ವಯಸ್ಸಿನವರು ಮದುವೆಗೆ ಮೊದಲ್ಹೆಜ್ಜೆ ಇಡುತ್ತಾರೆಂದರೆ ನೀವೇನೋ ದೊಡ್ಡ ವಯಸ್ಸಾದ ಎಪ್ಪತ್ತು ವರ್ಷದ ಮುದುಕರಂತಾಡುತ್ತೀರಲ್ಲ. ನನ್ನ ಮಾತು ಕೇಳಿ. ಹುಣಸೂರಿನಲ್ಲಿ ಒಬ್ಬ ವರ್ತಕರಿದ್ದಾರೆ. ಅವರಿಗೆ ಒಬ್ಬಳೇ ಮಗಳು. ಹೆಸರು ಲಕ್ಷಮ್ಮ. ಲಕ್ಷ್ಮಿಯಂತಿದ್ದಾಳೆ. ಆಕೆಗೆ ನಾಲ್ಕೈದು ಗಂಡುಮಕ್ಕಳು ಖಂಡಿತ ಆಗುತ್ತೆ. ನೀವು ಊಂ ಎಂದರೆ ಸಾಕು. ಲಗ್ನ

ಮಾಡಿಸಿಬಿಡುತ್ತೇನೆ. ನಿಮಗೆ ಖಂಡಿತ ಗಂಡುಮಗುವಾಗುತ್ತೆ. ನಿಮ್ಮ ವಂಶದ ಕೀರ್ತಿ ಬೆಳಗುತ್ತೆ. ನನ್ನ ಮಾತು ಕೇಳಿ" ಎಂದರು ಜೋಯಿಸರು.

"ಆಗಲಿ, ಜೋಯಿಸರೆ. ನನ್ನ ಪತ್ನಿಯ ಬಳಿ ನಿಮ್ಮ ಅಭಿಪ್ರಾಯ ವನ್ನು ತಿಳಿಸುತ್ತೇನೆ. ಆಕೆ ಸಮ್ಮತಿಸಿದಳೆಂದರೆ ನಿಮ್ಮ ಮಾತಿನಂತೆಯೇ ನಡೆದುಕೊಳ್ಳುತ್ತೇನೆ" ಎಂದು ಹೇಳಿದ್ದರು.

ರಾಯರ ಈ ಮಾತಿಗೆ ಸುಶೀಲಮ್ಮಳೂ ಸಹಾ ಲಗ್ನವಾಗುವುದೇ ಸರಿ ಯೆಂದು ಹೇಳಿದಳು. ಹುಣಸೂರಿನಲ್ಲಿಯೇ ಮದುವೆಯೂ ಆಯಿತು. ಜೊತೆಗೆ ಲಕ್ಷ್ಮಮ್ಮ ಅತ್ತೆಮನೆಗೆ ಒಂದು ಲಕ್ಷ ರೊಕ್ಕದೊಂದಿಗೆ ಕಾಲಿಟ್ಟಳು.

ಲಕ್ಷಮ್ಮ ರಾಯರ ಮನೆಗೆ ಕಾಲಿಟ್ಟದ್ದೇ ಸುಶೀಲಮ್ಮ ಗರ್ಭಿಣಿ ಯಾಗಿದ್ದು, ಒಂದು ಗಂಡು ಮಗುವನ್ನು ಹಡೆದಳು.

ಸುಶೀಲಮ್ಮಳ ಮಗುವನ್ನು ತನ್ನ ಮಗುವಂತೆಯೇ ಬಹಳ ಮುದ್ದಿ ನಿಂದ ಸಾಕುತ್ತಿದ್ದಳು ಲಕ್ಷಮ್ಮ.

ಕೆಲವು ವರ್ಷಗಳಲ್ಲಿ ಲಕ್ಷಮ್ಮ ಮೂರು ಗಂಡು ಮಕ್ಕಳ ತಾಯಿ ಯಾದಳು.

ಈಗ ರಾಮರಾಯರಿಗೆ ಎಪ್ಪತ್ತು ವರ್ಷ. ಹೊಟ್ಟೆಯುಬ್ಬರದಿಂದ ನರಳುತ್ತಿದ್ದಾರೆ. ಮಲಬದ್ಧತೆ ಅವರನ್ನು ಕಾಡಿಸುತ್ತಿದೆ. ಬಾಯಲ್ಲಿ ಒಂದು ತೊಟ್ಟು ನೀರೂ ಹೋಗಬಾರದು ಎಂದು ಡಾಕ್ಟರು ಕಟ್ಟಾಜ್ಞೆ ಮಾಡಿದ್ದಾರೆ. ಡಾಕ್ಟರಿಗೆ ತಿಳಿಯದಂತೆ ಸೊಸೆ ಶಾಂತ ಎರಡು ಮೂರು ಸಲ ಬಿಸಿ ನೀರನ್ನು ರಾಯರಿಗೆ ಕೊಟ್ಟಿದ್ದಾಳೆ.

ರಾಜ್ ರಾಮರಾಯರ ಮೊದಲ ಸಂಸಾರದ ಮಗ. ಮಿಕ್ಕ ರವಿ, ಗಿರಿ, ಹರಿ ಎರಡನೆಯ ಸಂಸಾರದ ಮಕ್ಕಳು. ಮೊದಲ ಸಂಸಾರದ ಸುಶೀಲಮ್ಮನ ಎರಡು ಹೆಣ್ಣು ಮಕ್ಕಳಲ್ಲಿ ಮೊದಲನೆ ಮಗಳು ಗಿರಿಜೆಗೆ ಮಲೆನಾಡಿನ ಸಮೀಪದ ಬೆಟ್ಟದಪುರದಲ್ಲಿ ಕೊಟ್ಟು ಮದುವೆ ಮಾಡಿದ್ದಾರೆ. ಎರಡನೆಯವಳಿಗೆ ಚನ್ನಪಟ್ಟಣದ ಹೊಟೇಲ್ ಮಾಲೀಕರ ಮಗನಿಗೊಬ್ಬನಿಗೆ ಮದುವೆ ಮಾಡಿಕೊಟ್ಟಿದ್ದಾರೆ. ಹೆಣ್ಣು ಮಕ್ಕಳಿಬ್ಬರಿಗೂ ಜೀವನಕ್ಕೇನೂ ತೊಂದರೆಯಿಲ್ಲ.

ರಾಮರಾಯರಿಗೆ ರಾಜ್ ಮೇಲೆ ಅಪಾರ ಪ್ರೇಮ. ವಂಶದಲ್ಲಿ ಮೊದಲು ಹುಟ್ಟಿದ ಗಂಡು ಮಗನೆಂಬ ತೀರದ ಆಸೆ. ಆತನು ಹುಟ್ಟಿದ ಮೇಲೆಯೇ ಮಿಕ್ಕ ಮಕ್ಕಳೆಲ್ಲರೂ ಹುಟ್ಟಿದರೆಂಬ ಭ್ರಾಂತಿ. ರಾಮರಾಯರು ರಾಜ್‌ನನ್ನು ಗಿಣಿಯಂತೆ ಸಾಕಿದ್ದರು.

ಈಗ ಈ ವೃದ್ಧಾಪ್ಯದಲ್ಲಿ ಮರಣದ ಹಾಸಿಗೆಯಲ್ಲಿ ಮಲಗಿ ತತ್ತಳಿಸಿ ಕೊಂಡಿರುವಾಗ ಹೆತ್ತ ಮಕ್ಕಳು ಹತ್ತಿರ ಬರುವುದಕ್ಕಿಲ್ಲ. ಕಾರಣ ಆಸ್ತಿಯ ಚಿಂತೆ.

ಸುಶೀಲಮ್ಮ ದಿವಂಗತಳಾಗಿ ಇನ್ನೂ ಒಂದು ವರ್ಷವೂ ಸರಿಯಾಗಿ ಪೂರೈಸಿಲ್ಲ. ಲಕ್ಷಮ್ಮ ಒಂದು ತಿಂಗಳು ಅತ್ತೆಮನೆಯಲ್ಲಿದ್ದರೆ ಹನ್ನೊಂದು ತಿಂಗಳು ತವರುಮನೆಯಲ್ಲಿಯೇ ಕಾಲ ಕಳೆದುಬಿಡುತ್ತಿದ್ದಳು. ಆಕೆಗೆ ಕ್ಷಯ ರೋಗ. ಆಕೆಯನ್ನು ನೋಡಿಕೊಳ್ಳಲು ಬೆಂಗಳೂರಲ್ಲಿ ಯಾರೂ ಇರಲಿಲ್ಲ.

ರಾಜ್‌ನಿಗೆ ಒಂದೇ ಚಿಂತೆ—"ಈ ಮನೆತನದಲ್ಲಿ ಮೊದಲನೆಯದಾಗಿ ಗಂಡುಹುಡುಗನಾಗಿ ಹುಟ್ಟಿದವನು ನಾನೇ. ನನಗೇ ಎಲ್ಲ ಆಸ್ತಿಪಾಸ್ತಿಗಳೂ ಸೇರಬೇಕು. ಇರುವ ಆಸ್ತಿಯಲ್ಲಿ ನಾಲ್ಕೈದು ಭಾಗ ಮಾಡಿಬಿಟ್ಟರೆ ನನಗೆ ಬರುವುದೇನಿದೆ ?

"ನನಗೆ ಎರಡು ಸಂಸಾರ. ಒಂದು ಸುಶೀಲೆ. ಮತ್ತೊಂದು ಬೀಬೀ ಜಾನ್. ಇಬ್ಬರ ಸಂಸಾರವೂ ನಡೆಯಬೇಕು.

"ಈ ಹಾಳಾದ ಮುದುಕ ನಾಲ್ವರಿಗೂ ಸಮಭಾಗ ಮಾಡಿಬಿಡಬೇಕೆಂದು ನೆನೆದಿದ್ದಾನೆ. ಜೊತೆಗೆ ಹೆಣ್ಣುಮಕ್ಕಳಿಗೆ ಒಂದೊಂದು ಮನೆ, ಹತ್ತು ಸಾವಿರ ರೊಕ್ಕ ಜೋರಿ ಕೊಡಬೇಕೆಂದು ನಿರ್ಧರಿಸಿದ್ದಾನೆ. ಆ ಮುದುಕನ ಬಳಿ ನನ್ನ ಬೇಡಿಕೆಯೊಂದೂ ನಡೆಯದಾಗಿದೆ.

"ಪಾಪ-ಪುಣ್ಯಗಳೆರಡನ್ನೂ ಪರಿಗಣಿಸಿ ನೋಡುವ ಸಮಯ ಈಗ ಇಲ್ಲ ದಂತಾಗಿದೆ. ಮಾಡುವುದನ್ನು ಮಾಡಿಬಿಡುವುದೇ ಲೇಸು, ಎಂಬ ಭ್ರಾಂತಿ ಅವನಲ್ಲಿ ಮೂಡಿತ್ತು.

ರಾತ್ರಿ ಎರಡು ಗಂಟೆಗೆ ಸರಿಯಾಗಿ ರಾಜ್ ಗೇಟಿನ ಬಾಗಿಲನ್ನು ತೆಗೆದು ಕೊಂಡು ಬಂಗಲೆಯ ಮುಂಬಾಗಿಲನ್ನು ತಟ್ಟಿದ. ಎಚ್ಚರಗೊಂಡೇ ಹಾಸಿ

ಗೆಯ ಮೇಲೆಯೇ ಯಾವುದೋ ಯೋಚನೆಗಳನ್ನು ಮುಳುಗಿ ತೇಲಿಸಿಬಿಡುತ್ತ ಮಲಗಿದ್ದ ಶಾಂತ ಎದ್ದು ಬಂದು ಬಾಗಿಲು ತೆಗೆದಳು.

ರಾಜ ಮನೆಯೊಳಗೆ ಪ್ರವೇಶಿಸಿ ಕೊಠಡಿಗೆ ಹೋಗಿ ಬಟ್ಟೆ ಕಳಚಿಟ್ಟು ಮಲಗಲು ಹಾಸಿಗೆಯ ಬಳಿ ಹೋದ.

"ಊಟ ಮಾಡದೆ ಮಲಗುತ್ತೀರೇನು ?"

"ಹೊಟ್ಟೆ ಹಸಿವಿಲ್ಲ."

"ಹಾಲನ್ನಾದರೂ ಕೊಡಲೇ ?"

"ನನಗೆ ಒಂದೂ ಬೇಡ."

"ನೆನ್ನೆ ಮಾವನವರು ನಿಮ್ಮನ್ನು ಕಾಣದೆ ಹಂಬಲಿಸುತ್ತಿದ್ದರು. ನೆನ್ನೆ ಮಾವನವರನ್ನು ಕಾಣಲು ಆಸ್ಪತ್ರೆಗೆ ಹೋಗಿದ್ದಿರೇನು ?"

"ಥತ್. ಶುದ್ಧ ತಿಳಿವಳಿಕೆಯಿಲ್ಲದವಳೇ ನೀನು. ಮನೆಗೆ ಕಾಲಿಟ್ಟರೆ ಸಾಕು, ಇನಿದಾದ ಮಾತುಗಳೆರಡು ಯಾವಾಗಲಾದರೂ ಆಡಿದ್ದುಂಟೆ? ಮಾವನವರಿಗೆ ಸ್ವಲ್ಪ ಹುಷಾರಿಲ್ಲ, ನನಗೆ ತಲೆನೋವು, ಗಂಟಲು ನೋವು, ಬಾಡಿಗೆ ತಂದುಕೊಡುವವರು ಇನ್ನೂ ತಂದುಕೊಟ್ಟಿಲ್ಲ—ಇಂಥಾ ಕರುಳು ಕೊಯ್ಯುವ ಮಾತುಗಳೇ ನಿನ್ನ ಪ್ರಥಮ ಪ್ರಯೋಗ."

"ನೀವೇನಾದರೂ ತಿಳಿದುಕೊಳ್ಳಿ. ನೆನ್ನೆ ಮಾವನವರಿಗೆ ತುಂಬಾ ಕಷ್ಟವಾಗಿತ್ತು. ರವಿ, ಗಿರಿ, ಹರಿ ಮೂವರೂ ಅವರ ಬಳಿ ಪೇಚಾಡುತ್ತಿದ್ದರು. ಮಗನಾಗಿ ಹುಟ್ಟಿದ ನೀವು ಅವರನ್ನು ಉಪಚರಿಸುವುದು ಧರ್ಮ. ಎಷ್ಟಾದರೂ ತಂದೆ. ಅವರು ನಿಮಗೆ ಮಾಡಿದ ಅನ್ಯಾಯವೇನು ?"

"ಅನ್ಯಾಯ. ಹೌದು—ಅನ್ಯಾಯವೇ! ಇರುವ ಆಸ್ತಿಯಲ್ಲಿ ನಾಲ್ವರಿಗೆ ಸಮಭಾಗ ಹಂಚುವುದಂತೆ. ಕೊನೆಗೆ ನಾವು ಭಿಕ್ಷೆ ಬೇಡುವ ಸಂಭವ ಒದಗಿದರೂ ಒದಗೀತು."

"ಅಂತಹ ಮಾತುಗಳನ್ನಾಡಬೇಡಿ. ದೇವರು ಕೊಟ್ಟಂತೆ ನಮಗೆ ಬೇಕಾದಷ್ಟು ಜಮೀನಿದೆ. ಅನ್ನ ಆಹಾರಕ್ಕೇನೂ ತೊಂದರೆ ಇರಲಾರದು. ನನಗಿರುವ ಒಂದೂವರೆ ಲಕ್ಷವೂ ಬೇಕಾದರೆ ನಿಮ್ಮ ಹೆಸರಿಗೇ ಮಾಡಿಸಿಬಿಡುತ್ತೇನೆ."

"ನಿನ್ನ ಲಕ್ಷದ ಮೇಲೆ ನನಗೆ ಲಕ್ಷ್ಯವಿಲ್ಲ. ಮನೆಗೆ ದೊಡ್ಡ ಮಗನಾಗಿ ಹುಟ್ಟಿದೆ. ಮನೆಯ ಆಸ್ತಿಯನ್ನು ಭಾಗಮಾಡಿಕೊಟ್ಟು ತಲೆಗೊಬ್ಬರು ದಿಕ್ಕಾಪಾಲಾಗಿ ಹೊರಟು ಮನೆಯ ಮರ್ಯಾದೆಯನ್ನು ಕೆಡಿಸಲು ನನಗೆ ಇಷ್ಟವಿಲ್ಲ."

"ಅದಕ್ಕಾಗಿ ತಂದೆಯವರನ್ನು ನೋಡಲೇಬಾರದೆಂದು ಹಠ ತೊಟ್ಟಿರುವಿರೇನು ?"

"ಸುಮ್ಮನೆ ಮಾತನಾಡಿಸಬೇಡ. ಹೋಗಿ ಮಲಗು."

"ನೀವೇನಾದರೂ ತಿಳಿದುಕೊಳ್ಳಿ. ನೀವು ಅನ್ನ ಊಟಮಾಡದೇ ಮಲಗುವುದು ನನಗೆ ಸಂಕಟವಾಗುತ್ತೆ."

"ನಿನಗ್ಯಾಕೆ ಆ ಚಿಂತೆ. ನಿಮ್ಮ ಮಾವ ಗುಣವಾಗಿಬಿಟ್ಟರೆ ಸಾಕು. ನಿನಗೆ ಹಿಮಾಲಯ ಕಂಡುಹಿಡಿದಂತೆ. ನನ್ನ ಕಷ್ಟ ನಷ್ಟದ ಬಗ್ಗೆ ನೀನು ಚಿಂತಿಸಬೇಡ. ಬೇಕಾದರೆ ಆಸ್ಪತ್ರೆಯಲ್ಲಿ ಸ್ಪೆಷಲ್ ವಾರ್ಡ್ ತೆಗೆಸಿಕೊಡುತ್ತೇನೆ. ನೀನೂ ಆತನ ಪಕ್ಕದಲ್ಲೇ ಕೂತು ಉಪಚರಿಸುತ್ತಾ ಇರು."

"ಸುಮ್ಮನೆ ನನ್ನನ್ನು ಪರಿಹಾಸ್ಯ ಮಾಡಬೇಡಿ, ಬನ್ನಿ. ಕೈಕಾಲು ತೊಳೆದುಕೊಂಡು ಸ್ವಲ್ಪ ಊಟ ಮಾಡಿ ಮಲಗುವಿರಂತೆ."

"ಥತ್. ನನ್ನನ್ನು ಮುಟ್ಟಬೇಡ. ದೂರದಲ್ಲಿ ನಿಂತೇ ಮಾತನಾಡು. ನಿನ್ನನ್ನು ಮುಟ್ಟಿಕೊಂಡರೆ ನಿನ್ನ ಗುಣರೋಗಗಳೆಲ್ಲಾ ನನಗೂ ಅಂಟಿಕೊಂಡೀತು."

"ಮತ್ತೇಕೆ ನನ್ನನ್ನು ಮದುವೆ ಮಾಡಿಕೊಂಡಿರಿ ?"

"ಅದಕ್ಕೆ....ನೀನು ನನ್ನ ಮಾತು ಎಷ್ಟು ಚೆನ್ನಾಗಿ ಕೇಳುತ್ತಿದ್ದಿ."

"ನಿಮ್ಮ ಮಾತನ್ನು ಮೀರಿ ಎಂದಾದರೂ ನಡೆದಿದ್ದೇನೆಯೇ ?"

"ಮತ್ತೇನು. ಎಷ್ಟೋ ಸಲ ನಿನಗೆ ಹೇಳಿ ಹೇಳಿ ಬೇಸರವಾಗಿಬಿಟ್ಟಿದೆ."

"ಹಾಗೆಲ್ಲಾ ಒಂದೂ ತಿಳಿದುಕೊಳ್ಳಬೇಡಿ. ನಾನು ನಿಮ್ಮ ಚರಣ ದಾಸಿ."

"ಹಾಗಾದರೆ ಒಂದು ಕೆಲಸ ಮಾಡಿಕೊಡುತ್ತೀಯೇನು ?"

"ಓಹೋ, ಅದಕ್ಕೇನಂತೆ. ಈಗಲೇ ಹಾಜರಾಗಿದ್ದೇನೆ."

"ಖಂಡಿತವಾಗಿಯೂ ?"

"ಖಂಡಿತ."

"ಪುನಃ ನಾನು ಹೇಳುವ ಮಾತಿಗೆ ಪ್ರತ್ಯುತ್ತರ ಕೊಡಬಾರದು."

"ಸತ್ಯವಾಗಿಯೂ ಹೇಳುತ್ತೇನೆ. ನನ್ನ ಪ್ರಾಣವನ್ನಾದರೂ ಕೊಟ್ಟು ಬಿಡುತ್ತೇನೆ."

"ಹತ್ತಿರ ಬಾ. ತೆಗೆದುಕೋ ಈ ಕಾಗದದ ಪೊಟ್ಟಣವನ್ನು. ಇದರಲ್ಲಿ ಬಿಳೀ ಬಣ್ಣದ ಪುಡಿಯಿದೆ. ಇದನ್ನು ಹಾಲಿಗೆ ಹಾಕಿ ಮಿಶ್ರಮಾಡಿ ಚೆನ್ನಾಗಿ ಕಲಸಿ ನಿನ್ನ ಮಾವನಿಗೆ ಕುಡಿಸಿಬಿಡು."

"ಅದೇನು ಈ ಪುಡಿಯನ್ನೇ ಮಾವನವರಿಗೆ ಕೊಡಬೇಕೆ? ಆಸ್ಪತ್ರೆ ಯಲ್ಲಿ ಔಷಧಿ ಕೊಡುತ್ತಲೇ ಇದ್ದಾರೆ."

"ಆಸ್ಪತ್ರೆಯಲ್ಲಿ ಕೊಡುವ ಔಷಧಿಗೂ ಇದಕ್ಕೂ ತುಂಬಾ ವ್ಯತ್ಯಾಸ ವಿದೆ."

"ಏನಾದರೂ ಸರಿ. ಡಾಕ್ಟರು ನನಗೆ ಹೇಳದೆ ಕೇಳದೆ ಒಂದು ತೊಟು ನೀರನ್ನೂ ಕೊಡಕೂಡದೆಂದು ಕಟ್ಟಾಜ್ಞೆ ಮಾಡಿದ್ದಾರೆ."

"ನನ್ನ ಮಾತು ಕೇಳು. ಈ ಔಷಧವು ವಿಲಾಯಿತಿಯಿಂದ ತರಿಸಿದ್ದು. ನನ್ನ ಸ್ನೇಹಿತ ಇಂದು ನನ್ನ ಕೈಗೆ ಕೊಟ್ಟ. ಆತನಿಂದ ಈ ಔಷಧವನ್ನು ತರಲು ನಾನು ಪಟ್ಟ ಪಾಡು ವರ್ಣಿಸಲಸಾಧ್ಯ."

"ಈ ಔಷಧಿಯನ್ನು ಡಾಕ್ಟರಿಗೆ ತೋರಿಸಿ, ಅವರು ಕೊಡು ಎಂದರೆ ನಿಮ್ಮ ಮಾತಿನಂತೆಯೇ ಕೊಡುತ್ತೇನೆ."

"ಎಲ್ಲಾದರೂ ಹಾಳಾಗಿ ಹೋಗು ಮಹಾದೇವಿ. ನಾನೊಂದಾಡಿದರೆ ನೀನೇ ಒಂದನ್ನು ಹೇಳಿ ನನಗೆ ಕಿರುಕುಳ ಕೊಡುತ್ತೀಯೆ. ನಿನ್ನ ಮಾವನಿಗೆ ಜಾಗ್ರತೆ ಗುಣವಾಗಲಿ ಎಂದು ಹೇಳಿದರೆ, ಈ ತರಹ ಘಾತಕಿಯಂತೆ ನಟಿಸು ತ್ತಿದ್ದೀಯಲ್ಲ. ನಿನ್ನ ಮನಸ್ಸಿನಲ್ಲಿ ಒಳಗೊಂದು, ಹೊರಗೊಂದ."

"ಹಾಗೆಲ್ಲಾ ನನ್ನನ್ನು ಸುಮ್ಮನೆ ನಿಂದಿಸಬೇಡಿ. ನಾನು ಅವರನ್ನು ಹೇಗಾದರೂ ಮಾಡಿ ಗುಣಪಡಿಸಿಬಿಡಬೇಕೆಂದೇ ಹಗಲಿರುಳು ದೇವರನ್ನು ಸ್ಮರಿಸುತ್ತಿದ್ದೇನೆ."

"ನೀನು ಹೋಗದಿದ್ದರೆ ಹೋಗಲಿ. ನಾನೇ, ಈಗಲೇ ಹೋಗಿ ಕೊಟ್ಟು ಬರುತ್ತೇನೆ."

"ಈಗ ರಾತ್ರಿ ಎರಡೂವರೆ ಘಂಟೆಗೆ ಮೀರಿದೆ. ಬೆಳಗಾದನಂತರ ಹೋಗಿ ಕೊಟ್ಟು ಬರುವಿರಂತೆ."

"ತಂದೆಯ ಉಸಿರನ್ನು ಕಾಪಾಡಲು ರಾತ್ರಿಯಾದರೇನು, ಹಗಲಾದರೇನು ? ನಾನು ಈಗಲೇ ಹೋಗಿ ತಂದೆಯವರನ್ನು ನೋಡಿಕೊಂಡು ಬಂದು ಬಿಡುತ್ತೇನೆ" ಎಂದು ಹೇಳಿ ಮಫ್ಲರನ್ನು ತಲೆಗೆ ಸುತ್ತಿಕೊಂಡು ನಡೆದುಕೊಂಡೇ ಹೊರಟನು.

ರಾಜ್‌ನೊಂದಿಗೆ ಇಬ್ಬರು ಸೇವಕರು ಜೊತೆಗೆ ಹೋಗುತ್ತಿದ್ದರು. ಶಾಂತ ಹೋಗಬೇಡವೆಂದು ಎಷ್ಟು ತಡೆದರೂ ಕೇಳಲಿಲ್ಲ.

ಆಸ್ಪತ್ರೆಯು ಸಮೀಪಿಸಿತು. ಆಸ್ಪತ್ರೆಯೊಳಗಡೆ ಹೋಗಿ ಮೊದಲನೆ ವಾರ್ಡನ್ನು ಪ್ರವೇಶಿಸಲು ಹೊರಟರು. ಕಾವಲಿದ್ದ ವಾರ್ಡ್‌ಬಾಯ್ ಭಾಷಾ 'ಯಾರು ?' ಎಂದು ಕೇಳಿದ.

ರಾಜ್ ತನ್ನ ತಂದೆಯನ್ನು ನೋಡಲು ಯಾವಾಗಲಾದರೂ ಹೋಗಿ ನೋಡಿಕೊಂಡು ಬರುವಂತೆಯೂ, ಸಮಯ ಬಿದ್ದರೆ ಅಲ್ಲೇ ಉಳಿಯುವಂತೆಯೂ ದೊಡ್ಡ ಡಾಕ್ಟರಿಂದ ಪಾಸ್ ಬರೆಸಿಕೊಂಡಿದ್ದ.

ಪಾಸನ್ನು ನೋಡಿದ ವಾರ್ಡ್‌ಬಾಯ್ ಸುಮ್ಮನಿದ್ದು ಬಿಟ್ಟ.

"ನರ್ಸ್ ಇದ್ದಾರೆಯೇ ?"

"ಯಾವ ನರ್ಸ್."

"ಅದೇ ಡ್ಯೂಟಿಗೆ ಬರುತ್ತಾರಲ್ಲ ಅವರೇ."

"ಅಂದರೆ, ನನಗೆ ಅರ್ಥವಾಗಲಿಲ್ಲ ಸ್ವಾಮಿ. ಈಗ ರಾತ್ರಿಯ ಸಮಯದಲ್ಲಿ ಡ್ಯೂಟಿಗೆ ಬರುವವರು ಗಂಡಸು ನರ್ಸ್. ಬೆಳಗ್ಗೆಯಿಂದ ಸಂಜೆಯವರೆಗೆ ಹೆಂಗಸು ನರ್ಸ್. ನೀವು ಕೇಳುವ ನರ್ಸ್ ಇವರಿಬ್ಬರಲ್ಲಿ ಯಾರೆಂದು ಹೇಳಲಿ."

"ಅದೇನಯ್ಯ, ಹೆಂಗಸು ನರ್ಸ್. ಅವರೆಲ್ಲಿ ?"

"ಹೇಳಿದನಲ್ಲಾ ಸ್ವಾಮಿ. ಬೆಳಿಗ್ಗೆ ಆರು ಘಂಟೆಗೆ ಅವರು ಇಲ್ಲಿ ಹಾಜರಾಗುತ್ತಾರೆ. ಈಗ ಇಲ್ಲಿ ಡ್ಯೂಟಿ ನೋಡಿಕೊಳ್ಳುತ್ತಿರುವವರೇ ಗಂಡಸು ನರ್ಸ್. ಅಂದರೆ ಆ ನರ್ಸ್‌ಳ ಗಂಡ."

"ಓಹೋ! ಗಂಡ ಹೆಂಡತಿಯರು ಆಸ್ಪತ್ರೆಯನ್ನು ಅರೆಕ್ಷಣ ಬಿಟ್ಟು ಕದಲುವಂತಿಲ್ಲ. ಒಬ್ಬರಾದ ನಂತರ ಒಬ್ಬರು ಕಾವಲು ಕಾಯುತ್ತಲೇ ಇರುತ್ತಾರೆ."

"ಏನ್ಮಾಡ್ತಾರೆ ಸ್ವಾಮಿ ಪಾಪ! ಹೊಟ್ಟೇಪಾಡು."

"ನಮ್ಮಪ್ಪ ಹೇಗಿದ್ದಾರೆ?"

"ಈಗತಾನೆ ಸ್ವಲ್ಪ ಮಲಗಿದ್ದಾರೆ. ಕೆಮ್ಮಲು ಸ್ವಲ್ಪ ಕಡಿಮೆ ಯಿದೆ. ನೆನ್ನೆಯ ದಿನ ದೊಡ್ಡ ಡಾಕ್ಟರು ಎಷ್ಟೋ ಪ್ರಯಾಸಪಟ್ಟು ಚಿಕಿತ್ಸೆಮಾಡಿ ನೋಡಿ ಕೊನೆಗೆ ಗ್ಲುಕೋಸ್‌ನ ಬಾಟಲನ್ನು ಇಂಜಕ್ಷನ್ ಮೂಲಕ ಮೈಗೆ ತುಂಬಿದರು. ಅವರು ಆ ಬಾಟಲನ್ನು ಕೊಡದಿದ್ದರೆ ಇಂದು ನೀವು ಅವರ ಮುಖವನ್ನು ನೋಡುವುದೇ ಕಷ್ಟವಾಗುತ್ತಿತ್ತು."

"ಸರಿ, ನಾನು ತಂದೆಯವರನ್ನು ನೋಡಿ ಬರುತ್ತೇನೆ. ಒಂದು ಮಾತನ್ನು ಜ್ಞಾಪಕದಲ್ಲಿಡು. ಬೆಳಗ್ಗೆ ಆರು ಘಂಟೆಗೆ ನರ್ಸ್ ಬರುವಾಗ ನನ್ನನ್ನು ಕಾಣುವಂತೆ ಹೇಳು" ಎಂದು ಹೇಳಿ ರಾಜ್ ಹೊರಡುವುದರಲ್ಲಿ ದ್ದನು."

ತಲೆ ಕೆರೆಯುತ್ತಾ ಕೈಚಾಚಿದನು ವಾರ್ಡ್‌ಬಾಯ್. ಆತನ ಕೈಗೆ ಒಂದು ರೂಪಾಯಿಯ ಬಿಲ್ಲೆ ಬಿದ್ದದ್ದೇ ಸಂತೋಷಭರಿತನಾಗಿ ಕೆಂಪು ಕಂಬಳಿಯನ್ನು ಹೊದ್ದು ಮಲಗಲು ಪ್ರಯತ್ನಪಟ್ಟನು.

ತಂದೆಯ ಸಮೀಪಕ್ಕೆ ಹೋದನು ರಾಜ್. ತಂದೆಯನ್ನು ನೋಡಿದ್ದೇ ಆತನ ಕರುಳು ಕೊರೆಯಿತು. ಮುಖವೆಲ್ಲಾ ಊದಿಕೊಂಡಿದೆ. ಮೈ ಕೈಕಾಲುಗಳೆಲ್ಲವೂ ಮೊದಲಿಗಿಂತಲೂ ಅದೆಷ್ಟೋ ಆಕಾರದಲ್ಲಿ ಕಾಣುತ್ತಿದೆ. ಬಾಯಿಂದ ಒಂದು ಕಡೆ ಜೊಲ್ಲು ಸುರಿಯುತ್ತಿದೆ. ಮುಖವು ಬಹಳ ಸಪ್ಪ ಗಾಗಿದೆ. ಕಣ್ಣುಗಳು ಮುಚ್ಚಲ್ಪಟ್ಟಿದ್ದರೂ ಆಳದಲ್ಲಿ ಅಡಗಿಕೊಂಡಿವೆ. ಮೂಗು ಉಸಿರು ಬಿಡಲು ಆಗುತ್ತಿರಲಿಲ್ಲವೆಂಬಂತೆ ಬಾಯಲ್ಲಿ ಎಳೆದುಬಿಡು ತ್ತಿರುವ ಉಸಿರು ಹೇಳುತ್ತಿದೆ.

ಮೆಲ್ಲನೆ ಹೊದಿಸಿದ್ದ ಶಾಲಿನ ಒಳಗಡೆಯಿದ್ದ ಕಾಲನ್ನು ಮುಟ್ಟಿನೋಡಿ ದನು. ತಣ್ಣಗಾಗಿದೆಯೋ ಏನೋ ಎಂದು ಕುದಿಯುತ್ತಿತ್ತು ಆತನ ಮನಸ್ಸು. ಆದರೆ ಕಾಲು ಬೆಚ್ಚಗೆಯೇ ಇತ್ತು.

ತಂದೆಯು ಲೋಕವನ್ನು ಮರೆತು ಹಾಗೆಯೇ ಮಲಗಿರುವುದನ್ನು ಕಂಡ ರಾರ್ಜ ಕಂಬನಿಯನ್ನು ಸುರಿಸಿದ. ತಂದೆಯ ಪಾದಗಳನ್ನು ಮುಟ್ಟಿ ಕಣ್ಣಿಗೆ ಒತ್ತಿಕೊಂಡ. ನಾನು ಮಾಡಿರುವ, ಮಾಡಲಿರುವ, ಮಾಡುವ ಪಾಪಗಳನ್ನು ಕ್ಷಮಿಸಬೇಕೆಂದು ಬೇಡಿಕೊಂಡ. ತಂದೆಯ ಮುಖವನ್ನೇ ಮನಸ್ಸು ಚಂಚಲವಾಗುವವರೆಗೂ ನೋಡುತ್ತಲೇ ಇದ್ದ.

ತಲೆಯನ್ನು ಮುಟ್ಟಿ ನೋಡಿದ. ಪಕ್ಕದ ಕಿಟಕಿಯಿಂದ ಬೀಸುತ್ತಿದ್ದ ಗಾಳಿಯಿಂದ ಹಣೆಯು ಸ್ವಲ್ಪ ತಣ್ಣಗಾಗಿತ್ತು. ಕಣ್ಣು ಬಿಟ್ಟು ನೋಡಿದರು ರಾಮರಾಯರು.

"ಯಾರಪ್ಪಾ ಅದು ?" ಮೆಲ್ಲನೆ ಪಕ್ಕದವರ ಕಿವಿಗೆ ಕೇಳಿಸದಂತಿತ್ತು ಆ ಧ್ವನಿ.

"ನಾನೇನಪ್ಪಾ. ರಾರ್ಜ."—

"ಈಗ ನೋಡಲು ಮನಸ್ಸು ಬಂದಿತೇನಪ್ಪ." ರಾಮರಾಯರ ಕಣ್ಣುಗಳಲ್ಲಿ ಅಶ್ರುಗಳು ಧಾರಾಕಾರವಾಗಿ ಹರಿದು ತಲೆ ದಿಂಬನ್ನು ಒದ್ದೆ ಮಾಡುತ್ತಿತ್ತು. ರಾರ್ಜನ ಎರಡು ಕೈಗಳನ್ನೂ ತೆಗೆದು ಎದೆಗೆ ಒತ್ತಿಕೊಂಡರು.

"ಯಾವುದೋ ಸ್ವಲ್ಪ ಕೆಲಸವಿತ್ತಪ್ಪ. ಅದಕ್ಕೆ ಬರಲಾಗಲಿಲ್ಲ. ಇನ್ನು ನಿನ್ನನ್ನು ಬಿಟು ಕದಲಲಾರೆ" ಎಂದು ಸ್ವಲ್ಪ ಜೋರಾಗಿಯೇ ಅಂದನು ರಾರ್ಜ.

"ನನ್ನ ರಾರ್ಜ. ನಿನ್ನ ತಾಯಿ ಇದ್ದಿದ್ದರೆ ನೀನು ಇಷ್ಟು ಹಾಳಾಗುತ್ತಿರಲಿಲ್ಲ. ನಾನು ಎರಡನೆಯ ಮದುವೆ ಮಾಡಿಕೊಳ್ಳದಿದ್ದರೆ ನೀನು ಇಷ್ಟು ದೂರ ನನ್ನ ಮೇಲೆ ದ್ವೇಷವಿಡುತ್ತಿರಲಿಲ್ಲ."

"ಅದೆಲ್ಲಾ ಈಗ ಯೋಚಿಸಬೇಡಿ. ನಾನು ಕೆಟ್ಟದ್ದು ನನ್ನಿಂದಲೇ. ನಾನು ಈಗ ನನ್ನ ಅಯೋಗ್ಯತನವನ್ನೆಲ್ಲಾ ಬಿಟ್ಟುಬಿಟ್ಟೆನಪ್ಪಾ. ನನ್ನ ನಡತೆಯನ್ನು ಒಳ್ಳೆಯ ದಾರಿಗೆ ಪರಿವರ್ತಿಸಿಕೊಂಡಿದ್ದೇನೆ. ಇನ್ನು ನೀವು ಹೇಳಿದಂತೆ ಕೇಳಿಕೊಂಡಿರುತ್ತೇನೆ. ಶಾಂತಳನ್ನು ಬಿಟ್ಟು ಎಲ್ಲಿಗೂ ಹೋಗಲಾರೆ. ಬೀಬಿಜಾನಳನ್ನು ನೆನೆಯಲಾರೆ. ಇನ್ನು ನಿಮ್ಮ ಸೇವೆಯೇ ನನ್ನ

ಮುಖ್ಯ ಕರ್ತವ್ಯ" ತಂದೆಯ ಕಾಲುಗಳನ್ನು ಗಟ್ಟಿಯಾಗಿ ಹಿಡಿದು ಕೊಂಡನು ರಾಜ.

ರಾಮರಾಯರ ಮುಖ ಅರಳಿತು. ರಾರ್ಜನ ಮನಸ್ಸು ಸೂರ್ಪಾಡಾಯಿತು.

"ಅಪ್ಪಾ, ನಾನು ಪ್ರಾತಃಕಾಲ ಬರುತ್ತೇನಪ್ಪ. ಬರಲೇ ?" ಎಂದು ತಂದೆಯ ಉತ್ತರವನ್ನು ಪಡೆದು ವಾರ್ಡಿನ ವರಾಂಡಾದಲ್ಲಿ ಬಂದು ವಾರ್ಡ್ ಬಾಯ್ ಜೊತೆಯಲ್ಲಿಯೇ ಕುಳಿತುಕೊಂಡನು. ಜೊತೆಗೆ ಬಂದಿದ್ದ ಇಬ್ಬರು ಸೇವಕರು ಮೈದಾನದ ಮರದ ಕೆಳಗೆ ಛಳಿಗಾಗಿ ನಡುಗುತ್ತಾ ಕುಳಿತಿದ್ದರು. ಪ್ರಾತಃಕಾಲ ಐದು ಘಂಟೆಯ ಸಮಯ. ರಾರ್ಜ ತನ್ನ ಮನಸ್ಸನ್ನು ತಾನೇ ಪ್ರಶ್ನಿಸತೊಡಗಿದ.

'ಇನ್ನು ಹೆಚ್ಚು ಕಾಲ ವೃಥಾ ಕಳೆಯುತ್ತಲೇ ಇರಬಾರದು. ಮುಂದೆ ಇಟ್ಟ ಹೆಜ್ಜೆ ಹಿಂದೆಗೆಯುವುದು ಸರಿಯಲ್ಲ. ನಾನು ಹೇಳುವ ಮಾತು ನರ್ಸ್ ಕೇಳುತ್ತಾಳೆಯೋ ಇಲ್ಲವೋ? ನಿನ್ನೆಯ ದಿವಸವೇ ಆಕೆಗೆ ಪ್ರತಿಯೊಂದು ವಿಷಯವನ್ನೂ ತಿಳಿಸಿದ್ದೇನೆ. ಆಕೆ ಹಣದ ಆಸೆಗಾಗಿಯೂ ತನ್ನ ಜೀವನವು ಸ್ವರ್ಗ ಜೀವನವಾದೀತೆಂಬ ಹಂಬಲದಿಂದಲೂ ಒಂದು ವೇಳೆ ಮಾಡಿದರೂ ಮಾಡಿಯಾಳು.

'ಅವಳನ್ನು ಏತಕ್ಕೆ ನಾನು ಕಾಯುತ್ತಿರಬೇಕು. ನಾನೇ ಆ ಕೆಲಸವನ್ನು ಮಾಡಿ ಮುಗಿಸಿಬಿಟ್ಟರೆ ? ಅಯ್ಯೋ....ತಂದೆಗೆ ವಿಷಕೊಟ್ಟು ಕೊಂದನೆಂಬ ಅಪರಾಧವು ನನ್ನನ್ನು ತಲೆಮರೆಸುವವರೆಗೂ ಬಿಡಲಾರದು. ಹೆತ್ತ ತಂದೆಗೆ ನನ್ನ ಕೈಯಿಂದಲೇ ವಿಷವನ್ನು ಕೊಡುವುದೇ ?

'ನಾನಾಗಿ ನಾನೇ ಈ ಕೆಲಸವನ್ನು ಮಾಡಬಾರದು. ನರ್ಸ್ ಕೈಗೆ ಈ ಪೊಟ್ಟಣದ ಜೊತೆಗೆ ಒಂದು ಸಾವಿರದ ನೋಟಿನ ಕಂತೆಯನ್ನು ಕೈಯಲ್ಲಿ ಇಟ್ಟುಬಿಟ್ಟರೆ ತೀರಿತು. ಆಕೆ ಕುಡಿಸಿಯೇ ಬಿಡುತ್ತಾಳೆ. ಕುಡಿಸಿದ ಒಂದು ಘಂಟೆಯಲ್ಲಿ ಅದರ ಕೆಲಸ ತೋರಿಸಿಬಿಡುತ್ತೆ.

'ಆಗಲಿ, ಅವಳು ಬರಲಿ. ಬೇಕಾದರೆ ಅವಳನ್ನೂ ನನ್ನ ಶಯ್ಯಾಗೃಹದ ಸುಂದರಿಯನ್ನಾಗಿ ಮಾಡಿಕೊಳ್ಳುತ್ತೇನೆ. ಅವಳ ಉಪಕಾರ ಮರೆಯುವುದಿಲ್ಲ. ರಾರ್ಜನ ಮನಸ್ಸು ವಿಮಾನದ ವೇಗದಲ್ಲಿ ಓಡತೊಡಗಿತು.

ಅವನ ಆಲೋಚನೆ, ಆವೇಶ, ಆಕ್ರೋಶ, ದುರಾಸೆ ಇವುಗಳೆಲ್ಲವೂ ಒಂದು ಗಂಟೆಯನ್ನು ನುಂಗಿತು. ಗಂಟೆ ಆರಾಯಿತು. ಆಗ ತಾನೆ ನರ್ಸ್ ಆಸ್ಪತ್ರೆಯ ಗೇಟಿನ ಒಳಗಡೆ ಪ್ರವೇಶಿಸುತ್ತಿದ್ದಳು.

ಅಗಸನ ಅಂಗಡಿಯಿಂದ ಆಗತಾನೆ ತಂದುಕೊಟ್ಟಿದ್ದ ಬಿಳೀ ಖಟಾವ್ ವಾಯಿಲ್ ಸೀರೆ ಮತ್ತು ಜಾಕೆಟ್, ಬಿಳೀ ಚರ್ಮದ ಮೆತ್ತನೆಯ ಏರ್ ಕುರ್ಷ ಷೂ. ಎಡಕ್ಕೈಗೊಂದು ಸಣ್ಣ ಬಂಗಾರದ ರಿಸ್ಟ್‌ವಾಚ್. ಕೊರಳಲ್ಲಿ ನೈಸಾದ ಚೈನು. ದುಂಡನೆಯ ಮುಖ. ಮುಖಕ್ಕೆ ಬಳಿದಿದ್ದ ಸ್ನೋ ಪೌಡರ್ ಆಕೆಗೆ ಮತ್ತಷ್ಟು ಅಂದವನ್ನು ಕೊಡುತ್ತಿದ್ದಿತು.

ದೂರದಿಂದಲೇ ನರ್ಸ್ ಬರುತ್ತಿದ್ದುದನ್ನು ನೋಡಿದನು ರಾಜ್ಞ. ಎದ್ದು ನಿಂತು ಷರಟಿನ ಕಾಲರನ್ನು ಸರಿಪಡಿಸಿಕೊಂಡನು. ತಲೆಗೆ ಸುತ್ತಿದ್ದ ಮಫ್ಲರನ್ನು ತೆಗೆದೂ ಕುತ್ತಿಗೆಗೆ ಹಾಕಿಕೊಂಡನು. ನರ್ಸ್ ವಾರ್ಡಿನ ಬಳಿಗೆ ಬಂದಳು. ರಾಜ್ಞ ನರ್ಸನ್ನು ನೋಡಿ,

"ಗುಡ್ ಮಾರ್ನಿಂಗ್ ಸಿಸ್ಟರ್" ಎಂದ ವಿನಯವನ್ನು ತೋರ್ಪಡಿಸುತ್ತಾ.

ನರ್ಸ್ ರಾಜ್ಞನನ್ನು ಕಂಡೊಡನೆ ಪ್ರತಿಯಾಗಿ,

"ಗುಡ್ ಮಾರ್ನಿಂಗ್" ಎಂದಳು.

"ನರ್ಸ್, ಒಂದೆರಡು ನಿಮಿಷ ಈ ಕಡೆ ಬರಲು ಸಾಧ್ಯವಿದೆಯೇ ?"

"ಸ್ವಲ್ಪ ತಾಳಿ. ನನ್ನ ಪತಿಯು ಕಾದುಕೊಂಡಿರುತ್ತಾರೆ. ಇನ್ನೊಂದು ಅರ್ಧ ಗಂಟೆಯಲ್ಲಿ ಬಂದು ಬಿಡುತ್ತೇನೆ. ಅವರು ಮನೆಗೆ ಹೋದದ್ದೇ ನಾನು ನಿಮ್ಮನ್ನು ಖಂಡಿತ ಬಂದು ನೋಡುತ್ತೇನೆ. ತಾವು ಇಲ್ಲೇ ಇರಿ." ಎಂದು ಹೇಳುತ್ತಾ ವಾರ್ಡಿನ ಒಳಗೆ ಹೋದಳು ನರ್ಸ್.

ಹೊರಗಡೆ ಆಗತಾನೆ ರವಿ, ಗಿರಿ, ಹರಿ ಮೂವರೂ ಕಾಫಿ, ಟಿಫನ್ ತೆಗೆದುಕೊಂಡು ರಾಮರಾಯರನ್ನು ನೋಡಲು ಜೇಗಬೇಗನೆ ಬರುತ್ತಿದ್ದರು. ಅವರನ್ನು ವಾರ್ಡಿನ ಬಳಿಗೆ ಬರಗೊಳಿಸದೆ ನೆಪ ಹೇಳಿ ಅವರು ಹಾಗೆಯೇ ಮನೆಗೆ ಹಿಂತಿರುಗುವಂತೆ ರಾಜ್ಞ ಹೇಳಿದ. ಅವರು ಪುನಃ ಬಂದ ದಾರಿಯಲ್ಲೇ ಹಿಂತಿರುಗಿದರು.

ಅರ್ಧ ಗಂಟೆ ಕಳೆಯಿತು. ಗಂಟೆ ಆರೂವರೆ ಆಯಿತು. ನರ್ಸಳ ಗಂಡನು ಡ್ಯೂಟಿ ಮುಗಿಸಿಕೊಂಡು ಮನೆಗೆ ಹೋದನು. ನರ್ಸ್ ರಾಜ್ ಇದ್ದ ಸ್ಥಳಕ್ಕೆ ಬಂದಳು.

"ಇಷ್ಟೊತ್ತು ಏನು ಮಾಡುತ್ತಿದ್ದಿರಿ ಸಿಸ್ಟರ್" ಎಂದನು ರಾಜ್.

"ನೆನ್ನೆಯ ರಾತ್ರಿ ಯಾವ ಯಾವ ರೋಗಿಗಳ ಸ್ಥಿತಿ ಹೇಗಿತ್ತು ಎಂಬ ರಿಪೋರ್ಟನ್ನು ತಿಳಿದುಕೊಂಡು ಅದನ್ನೆಲ್ಲವನ್ನೂ ರಿಪೋರ್ಟ್ ಬುಕ್ಕಿನಲ್ಲಿ ಬರೆದಿಟ್ಟು ಇಂಜಕ್ಷನ್ ಹಾಕುವ ಸಾಮಗ್ರಿಗಳನ್ನು ಸರಿಪಡಿಸಿಟ್ಟು ಬೇಗನೆ ಬಂದೆ. ಇನ್ನೂ ಉಳಿದಿರುವ ಕೆಲಸ ಎಷ್ಟೋ ಇದೆ. ಬೇಗ ಹೇಳಿ. ನನ್ನಿಂದ ನಿಮಗೇನಾಗಬೇಕು ?"

"ನೆನ್ನೆ ಸಂಜೆ ನಿಮಗೆ ತಿಳಿಸಿದ ವಿಷಯ."

"ಬೇಡಿ ಮಿಸ್ಟರ್ ರಾಜ್. ತಂದೆಗೆ ತಾವೇ ವಿಷಕೊಟ್ಟು ಕೊಲ್ಲುವುದೆಂದರೆ ನನಗೆ ಇಷ್ಟವಿಲ್ಲ. ನಾನು ಇಂತಹ ಕೆಲಸಕ್ಕೆ ಕೈ ಹಾಕಲಾರೆ. ರೋಗದಿಂದ ನರಳಿ ಗೋಳಾಡುತ್ತಿರುವವರನ್ನು ಆದರಿಸಿ, ಅವರಿಗೆ ಸಮಾಧಾನ ಹೇಳಿ ಅನುಕೂಲವಾಗಿರಿಸುವುದೇ ನಮ್ಮಂತಹ ನರ್ಸ್‌ಗಳ ಧ್ಯೇಯ."

"ಸುಮ್ಮನೆ ರಾಮಾಯಣ, ಮಹಾಭಾರತಗಳನ್ನು ಹೇಳುತ್ತಿರಬೇಡಿ. ದಯವಿಟ್ಟು ತಕ್ಷಣ ಈಗ ಆಗಬೇಕಾದುದನ್ನು ತಿಳಿಸಿ. ನಿಮ್ಮ ಜೀವನಕ್ಕೆ ನೀವೇ ಶತ್ರುಗಳಾಗಬೇಡಿ. ಈ ಕೆಲಸವನ್ನು ನೀವು ಮಾಡಿ ಮುಗಿಸಿ ಜಯ ಸ್ವಂತವಾಗಿ ಒಂದು ಆಸ್ಪತ್ರೆಯನ್ನು ನಡೆಸಲೂ ಸಾಧ್ಯವಾಗುತ್ತೆ. ನೀವೇ ಕಂಡದ್ದೇ ಆದರೆ ನೀವೇ ಆಸ್ಪತ್ರೆಯ ದೊಡ್ಡ ಲೇಡಿ ಡಾಕ್ಟರಾಗಬಹುದು. ಮಿಕ್ಕ ಎಲ್ಲಾ ಕೆಲಸಗಾರರೂ ನಿಮ್ಮ ಕೈಕೆಳಗೆ ಕೆಲಸಮಾಡುವವರೇ ! ಈಗ ಜಾಗ್ರತೆ ಈ ಕೆಲಸವನ್ನು ಮುಗಿಸಿಬಿಡಿ."

"ಅಯ್ಯೋ........ಇದೇನು ಅನ್ಯಾಯ........ನಾನು ನಿಮಗೇಕೆ ಮಾತು ಕೊಟ್ಟೆ........ಈಗ ನಿಮ್ಮ ತಂದೆಯವರು ಎಷ್ಟೋ ಗುಣವಾಗಿಬಿಡುತ್ತಿದ್ದಾರೆ. ಇನ್ನೆರಡು ಮೂರು ದಿನಗಳು ಇಲ್ಲೇ ಇದ್ದುಬಿಟ್ಟರೆ ಪೂರ್ಣ ಗುಣವಾಗಿ ಬಿಡುತ್ತಾರೆ. ಅಂತಹವರನ್ನು......."

"ಅಂತಹವರು ಈಗ ಉಳಿದುಕೊಂಡರೂ ಇನ್ನೆರಡು ಮೂರು ತಿಂಗಳಲ್ಲಿ ಇಹಲೋಕದಿಂದ ಪರಲೋಕಕ್ಕೆ ಹಾರುವುದರಲ್ಲಿ ಸಂದೇಹವಿಲ್ಲ. ಈಗ ಒಂದು

ವೇಳೆ ಗುಣಹೊಂದಿ ಮನೆಗೆ ಹಿಂತಿರುಗಿದರೆಂದರೆ ನನ್ನ ಗತಿ ಅಧೋಗತಿ. ಆಸ್ತಿಯ ಭಾಗಗಳು ಬೇರೇ ಆಗುತ್ತೆ. ನನ್ನ ಜೀವವು ವ್ಯರ್ಥವಾಗುತ್ತೆ. ನಂತರ ನಾನು ಸತ್ತರೂ ಬದುಕಿದರೂ ಎರಡೂ ಒಂದೇ. ಈಗ ಒಳ್ಳೆಯ ಸಮಯ ಆಸ್ಪತ್ರೆಯಲ್ಲೇ ಇದು ನಡೆಯಿತೆಂದರೆ ನಮಗೆ ಯಾವ ತೊಂದರೆಯೂ ಇರುವುದಿಲ್ಲ. ಇದೇ ಸುಸಮಯ. ನಿನಗೂ ಅದೃಷ್ಟದೇವತೆಯ ಕೃಪಾ ಕಟಾಕ್ಷ ಬೀಳುತ್ತಿದೆ. ಇಲ್ಲಸಲ್ಲದ ಯೋಚನೆಗಳನ್ನು ಮಾಡಿ ಅದನ್ನು ತುಳಿಯಬೇಡ. ಯೋಚಿಸಿ ನೋಡಿ ಸಿಸ್ಟರ್...."

"ಹಾಗಾದರೆ ಅದನ್ನು ಜೊತೆಯಲ್ಲೇ ತಂದಿದ್ದೀರೇನು?"

"ಹೌದು. ಅದನ್ನು ತರಲು ನೆನ್ನೆ ನಾನು ಬಹಳ ಕಷ್ಟಪಟ್ಟೆ."

"ಹಾಗಾದರೆ ಅದನ್ನು ಈಕಡೆ ಕೊಡಿ."

ಜೋಬಿನಲ್ಲಿಟ್ಟಿದ್ದ ಪೊಟ್ಟಣವನ್ನು ನರ್ಸ್ ಕೈಗೆ ತೆಗೆದುಕೊಟ್ಟನು. ರಾಜ್. ನರ್ಸ್ ಕೈಗಳು ನಡುಗುತ್ತಲೇ ಇತ್ತು. ಎದೆಯು ಧಗ್ ಧಗ್ ಎಂದು ಹೊಡೆಯುತ್ತಿತ್ತು. ಆಗ ಅಕೆಗೆ ಪ್ರತಿಯೊಂದೂ ಅಪಾಯವಾಗಿಯೇ ಕಾಣುತ್ತಿತ್ತು.

"ಇದನ್ನು ಪ್ರಯೋಗಿಸಿಬಿಡಲೇ?"

"ಜಾಗ್ರತೆ ಪ್ರಯೋಗಿಸಿಬಿಡಿ."

"ಸಿಕ್ಕಿಹೋದರೆ ನಂತರ ನನ್ನ ಪಾಡು."

"ಇಗೋ ಸತ್ಯಮಾಡಿಕೊಡುತ್ತೇನೆ. ಇನ್ನುಮೇಲೆ ನಿಮ್ಮ ಸುಖ ದುಃಖ ನನಗೆ ಸೇರಿದ್ದು."

"ಒಂದು ವೇಳೆ ಹೆಣವನ್ನು ಪರೀಕ್ಷೆಗೆ ಕಳುಹಿಸಿದರೆ ನಾನು ಸಿಕ್ಕಿಕೊಳ್ಳುತ್ತೇನಲ್ಲಾ."

"ಈಗ ನೀವು ಈ ಪೊಟ್ಟಣದಲ್ಲಿರುವ ಪುಡಿಯನ್ನು ಪ್ರಯೋಗ ಮಾಡಿದರೆ ಒಂದರ್ಧಗಂಟೆಯಲ್ಲಿ ಪ್ರಯೋಗಿಸಿಕೊಂಡವನ ಋಣ ಲೋಕದಿಂದ ದೂರವಾಗುತ್ತೆ. ನೀವು ಒಂದು ಕೆಲಸ ಮಾಡಬಹುದು. 'ಈ ವಿಷ ಪ್ರಯೋಗ ನನಗೆ ತಿಳಿಯದು. ರಾತ್ರಿಡ್ಯೂಟೀಗೆ ಬಂದಿದ್ದ ನಿಮ್ಮ ಪತಿ ಶಣ್ಮುಗಂ ಮಾಡಿರಬೇಕೆಂದು' ಹೇಳಿಬಿಟ್ಟರೆ ತೀರಿತು. ನಿಮ್ಮ ಮೇಲಿನ ಭಾರ ಕೆಳಗಿಳಿಯುತ್ತೆ."

"ಹ್ಞಾಂ. ನಿಮ್ಮ ಕೆಲಸ ಪೂರೈಸಲು ನನ್ನ ಪತಿಯನ್ನು ಆಹುತಿ ಕೊಡಲೇ ? ನಾನು ತಪ್ಪು ಮಾಡಿ ನನ್ನ ಗಂಡನಿಗೆ ಗಲ್ಲುಗಂಭಕ್ಕೆ ಕೊರಳು ಚಾಚಲು ಬಿಡಲೇ ?"

"ಜಾಗ್ರತೆ ಹೇಳಿ ನರ್ಸ್. ನಿಮ್ಮ ಕೈಲಿ ಇದು ಸಾಧ್ಯವೇ ಅಸಾಧ್ಯವೇ ? ಈ ಕೆಲಸ ಮಾಡುವುದರಿಂದ ನಿಮಗೇನೂ ತೊಂದರೆಯಿಲ್ಲ ಎಂದು ನಾನು ಹೇಳಲಾರೆ. ನಿಮಗೆ ಇದರಲ್ಲಿ ಎಷ್ಟು ಭಯ ಭಕ್ತಿಯಿದೆಯೋ ಅಷ್ಟು ಶಾಶ್ವತ ಸಂತೋಷ, ಭೋಗ, ಸ್ವರ್ಗವೂ ಇದೆ. ಈ ಕಾರ್ಯದಲ್ಲಿ ಜಯ ಕಂಡುಬಿಟ್ಟರೆ ನಿಮಗೆ ಯಾವ ಚಿಂತೆಯೂ ಇರುವುದಿಲ್ಲ."

"ಸಿಕ್ಕಿಬಿದ್ದರೆ ನನ್ನಂತಹವಳ ಜೀವನದ ನರಕಯಾತನೆ, ಅವಮಾನ ಮತ್ಯಾರಿಗೂ ಇರುವುದಿಲ್ಲ. ಅದೂ ಅಲ್ಲದೆ ಪತಿಯಮೇಲೆ ಅಪನಿಂದೆಯನ್ನು ಹೊರಿಸಿದ ರಾಕ್ಷಸಿ ಎಂದರೂ ನಾನು ಒಪ್ಪಿಕೊಳ್ಳಲೇಬೇಕಾಗುತ್ತೆ."

"ನರ್ಸ್, ಈಗ ನೀವು ಪತಿಯೆಂದು ಕರೆಯುತ್ತಿರುವವರನ್ನು ನೀವು ಶಾಸ್ತ್ರಸಂಪ್ರದಾಯಪ್ರಕಾರ ಮದುವೆ ಮಾಡಿಕೊಂಡಿಲ್ಲ ಎಂಬುದಾಗಿ ಹೇಳಿದ್ದೀರಿ. ಅದು ಜ್ಞಾಪಕವಿರಬೇಕು. ಅಂತಹದರಲ್ಲಿ ಪತಿ-ಪತಿಯೆಂದು ಪತಿವ್ರತೆಯರ ಗೊಡ್ಡು ಪುರಾಣಗಳಿಗೆ ಕಿವಿಗೊಡಬೇಡಿ."

"ನೀವು ಒಂದುವೇಳೆ ನಾನು ನನ್ನ ಪತಿಯನ್ನು ಸಿಕ್ಕಿಸಿಬಿಟ್ಟು ನಿರ್ಗತಿಕಳಾದರೆ ನನ್ನನ್ನು ಖಂಡಿತ ಸಲಹುತ್ತೀರೇ ? ಇದು ಸತ್ಯವೇ ? ನನಗೇಕೋ ಸಂಶಯವಾಗುತ್ತಿದೆ."

"ದೇವರಮೇಲೆ ಆಣೆಯಿಟ್ಟು ಹೇಳುತ್ತೇನೆ. ಸತ್ಯವಾಗಿಯೂ ನಾನು ನಿಮ್ಮನ್ನು ಕೈಬಿಡುವುದಿಲ್ಲ. ಕಾಲವು ಮೀರುತ್ತಿದೆ. ಈಗ ಗಂಟೆ ಆರೂ ಮೂವತ್ತೈದು. ಜಾಗ್ರತೆ ತೆಗೆದುಕೊಂಡುಹೋಗಿ ಯಾರಿಗೂ ತಿಳಿಯದಂತೆ ಇದನ್ನು ರೋಗಿಯ ಬಾಯಲ್ಲಿ ಸುರಿದುಬಿಡಿ. ಈ ಪುಡಿಯು ನಾಲಿಗೆಗೆ ತಾಕಿದರೆ ಸಾಕು, ನಾರಾಯಣನ ಪಾದಾರವಿಂದಕ್ಕೆ ಸೇರಿಹೋಗುತ್ತೆ ಜೀವ" ಎಂದು ನರ್ಸಳಿಗೆ ಹುರಿದುಂಬಿಸಿ, ಅವಳು ಪೊಟ್ಟಣದಲ್ಲಿದ್ದ ಪುಡಿಯನ್ನು ಖಂಡಿತ ಪ್ರಯೋಗಿಸಲು ಸಮರ್ಥಳಾಗುವಂತೆ ಹೇಳಿ ಕಳುಹಿಸಿದನು ರಾಜ್.

ನರ್ಸಳು ಆ ಪುಡಿಯ ಪೊಟ್ಟಣವನ್ನು ಕೈಯಲ್ಲಿ ತೆಗೆದುಕೊಳ್ಳುವಾಗ

ಆಕೆಗೆ ನಿಂತಕಡೆಯಲ್ಲೇ ಸಹಸ್ರಾರು ಆಲೋಚನೆಯ ದೃಶ್ಯಗಳು ಮರೆತು ಮರೆತು ಎದುರಿಗೆ ನಿಂತು ಮರೆಯಾಗುತ್ತಿತ್ತು. ಕೈ ಅದುರುತ್ತಿತ್ತು. ಎದೆಯಲ್ಲಿ ಧಗ್ ಧಗ್ ಎಂದು ಉರಿ ಹತ್ತಿತು. ಹೊಟ್ಟೆ ಧಗಧಗಿಸಲಾರಂಭಿಸಿತು.

ಹೇಗೋ ಪುಡಿಯನ್ನು ತೆಗೆದುಕೊಂಡು ವಾರ್ಡಿನ ಒಳಗಡೆ ಪ್ರವೇಶಿಸಿದಳು. ವಾರ್ಡ್‌ಬಾಯ್ ಮತ್ತು ತೋಟಿ ಇವರುಗಳು ವಾರ್ಡನ್ನು ಗುಡಿಸಿ ಶುದ್ಧಗೊಳಿಸುತ್ತಿದ್ದರು. ವಾರ್ಡ್ ಡಾಕ್ಟರ್ ಆಗತಾನೆ ಬಂದು ವಾರ್ಡ್ ಗುಡಿಸುತ್ತಿರುವುದನ್ನು ಕಂಡು ಹೊರಗೆ ನಿಂತಿದ್ದರು.

ಮೆಡಿಕಲ್ ಆಫೀಸರರು ರೋಗಿಗಳನ್ನು ಪರಿಶೋಧಿಸಿ ನೋಡಿಕೊಂಡು ಹೋಗಲು ಬರುವ ಹೊತ್ತು ಸಮೀಪಿಸುತ್ತಿದೆ. ಬಂದರೂ ಬರುತ್ತಿರಬಹುದು ಎಂದುಕೊಂಡು ವಾರ್ಡ್‌ಬಾಯ್‌ಗಳು ಬೇಗಬೇಗನೆ ವಾರ್ಡನ್ನು ಶುದ್ಧಗೊಳಿಸುತ್ತಿದ್ದರು.

ನರ್ಸಳು ಒಂದು ಗ್ಲಾಸಿನಲ್ಲಿ ಸ್ವಲ್ಪ ತಣ್ಣೀರನ್ನು ತೆಗೆದುಕೊಂಡು ಅದಕ್ಕೆ ಸಕ್ಕರೆ ಬೆರಸಿ ಪೊಟ್ಟಣದಲ್ಲಿದ್ದ ಪುಡಿಯನ್ನು ಹಾಕಿ ಕುಲುಕಿಸಿ ಬೇಗನೆ ಯಾರೂ ನೋಡದ ಹಾಗೆ ರಾಮರಾಯರ ಮಂಚದ ಬಳಿ ಹೊರಟು ಎಚ್ಚರಗೊಳಿಸಿ ಪ್ರತಿದಿನ ಕೊಡುವ ಔಷಧಿಯಂತೆ ಕುಡಿಸಿಬಿಟ್ಟಳು.

ಬಾಯಾರಿಕೆಯಿಂದ ತತ್ತ್ರಳಿಸುತ್ತಿದ್ದ ರಾಮರಾಯರು ಅದನ್ನು ಅಮೃತದಂತೆ ಗುಟುಕ್ಕನೆ ನುಂಗಿಕೊಂಡರು. ನುಂಗಿದ ತಕ್ಷಣವೇ ನರ್ಸಳು ಆ ಗ್ಲಾಸನ್ನು ಎಲ್ಲಾದರೂ ದೂರದಲ್ಲಿ ಬಿಸಾಡಿಬಿಡಬೇಕೆಂದು ನೆನೆದು ಹಿತ್ತಿಲ ಬಾಗಿಲಲ್ಲಿದ್ದ ಕಕ್ಕಸಿನಲ್ಲಿ ತುರುಕಿದಳು.

ಸರ್ರನೆ ರಾಜ ನಿಂತಿದ್ದ ಜಾಗಕ್ಕೆ ಬಂದು "ನನ್ನನ್ನು ನೀವೇ ಕಾಪಾಡಬೇಕು. ನಿಮ್ಮ ಆಜ್ಞೆಯಂತೆ ನಾನು ನಿಮ್ಮ ಕೆಲಸವನ್ನು ನೆರವೇರಿಸಿದೆ. ಇನ್ನರ್ಧ ಗಂಟೆಯಲ್ಲಿ ಅವರ ಸ್ಥಿತಿ ಏನಾಗುತ್ತೆಂಬುದು ನನಗೆ ಚೆನ್ನಾಗಿ ಗೊತ್ತಿದೆ. ಇನ್ನು ನನ್ನ ಜೀವ, ಮಾನ ಇವೆಲ್ಲವೂ ನಿಮ್ಮ ಕೈಯಲ್ಲಿದೆ" ಎಂದು ಗದ್ಗದ ಸ್ವರದಲ್ಲಿ ನುಡಿದಳು.

ನರ್ಸಳು ಹೇಳಿದ ಮಾತುಗಳನ್ನು ಕೇಳಿ ರಾಜಗೆ ಒಂದು ಕಡೆ ಸಂತೋಷ ಮತ್ತೊಂದು ಕಡೆ ತಡೆಯಲಾರದ ದುಃಖ. "ನಾನು ಇಲ್ಲಿಗೆ ಬಂದು ಹೋದಂತೆ ಯಾರಲ್ಲಿಯೂ ಹೇಳಬೇಡ" ಎಂದು ವಾರ್ಡ್‌ಬಾಯ್

ಕೈಗೆ ಹತ್ತು ರೂಪಾಯಿನ ನೋಟೊಂದನ್ನಿಟ್ಟು ಆ ಜಾಗವನ್ನು ಬಿಟ್ಟು ಕದಲಿದ.

ನರ್ಸಳು ಭಯದಿಂದಲೇ ವಾರ್ಡಿನೊಳಗೆ ಹೋದಳು. ಆರನೆಯ ಹಾಸಿಗೆಯ ಕಡೆ ನರ್ಸಳು ಕಣ್ಣೆತ್ತಿಯೂ ನೋಡುತ್ತಿರಲಿಲ್ಲ.

ರಾಮರಾಯರು ಪ್ರಜ್ಞೆತಪ್ಪಿ ಬಿದ್ದಿದ್ದರು. ಮೈಯೆಲ್ಲಾ ತಣ್ಣಗಾಗುತ್ತಿತ್ತು. ಆದರೆ ಕುಡಿದಿದ್ದ ಆ ಔಷಧವು ಅವರನ್ನು ಯಾವ ವಿಧದಲ್ಲಿಯೂ ನೋಯಿಸುತ್ತಿರಲಿಲ್ಲ. ಹೆಂಡ ಕುಡಿದು ಮತ್ತೇರಿದವರಂತಿತ್ತು ಅವರ ಸ್ಥಿತಿ. ರೋಗಪೀಡಿತರಾಗಿ ಕೃಷಿ ಹೊಂದಿದ್ದ ಅವರ ದೇಹವು ಕೇವಲ ಹತ್ತು ನಿಮಿಷಗಳಲ್ಲಿಯೇ ಇಹಲೋಕದಿಂದ ಹಾರಿತು. ರಾಮರಾಯರು ಮೃತಿ ಹೊಂದಿದರು.

ರೋಗಿಗಳನ್ನು ನೋಡಿಕೊಂಡು ಹೋಗಲು ಬರುತ್ತಿದ್ದ ಮೆಡಿಕಲ್ ಆಫೀಸರು ವಾರ್ಡಿನೊಳಗೆ ಪ್ರವೇಶಿಸಿದರು. ರೋಗಿಗಳನ್ನು ಒಬ್ಬೊಬ್ಬರನ್ನಾಗಿ ಸಮೀಪಕ್ಕೆ ಹೋಗಿ ವಿಚಾರಿಸಿಕೊಂಡು ಬರುತ್ತಿದ್ದರು.

ರಾಮರಾಯರ ಮಂಚದ ಬಳಿ ಬಂದು, "ಹೇಗಿದ್ದೀರಿ ? ರಾಮರಾಯರೆ ?" ಎಂದರು. ರಾಮರಾಯರ ಕಣ್ಣುಗಳು ತೆರೆದು ಎದುರು ಗೋಡೆಯನ್ನು ನೋಡುತ್ತಿತ್ತು. ಕೈಕಾಲು ಅಲುಗಾಡುತ್ತಿರಲಿಲ್ಲ. ಶ್ವಾಸವು ನಿಂತುಹೋಗಿತ್ತು. ಡಾಕ್ಟರು ನಾಡಿಯನ್ನು ಹಿಡಿದು ನೋಡಿದರು. ನಾಡಿಯು ನಿಂತು ಐದು ನಿಮಿಷಗಳ ಮೇಲಾಗಿರಬೇಕೆಂದು ಊಹಿಸಿದರು. ಅವರಿಗೆ ಹೆದರಿಕೆಯಾಯಿತು.

ಕಳೆದ ಎರಡು ತಿಂಗಳಿಂದ ನಾನು ಪಟ್ಟ ಪ್ರಯತ್ನ ವಿಫಲವಾಯಿತಲ್ಲಾ ಎಂದು ನೊಂದುಕೊಂಡರು.

ವಾರ್ಡ್‌ಬಾಯ್, ನರ್ಸ್, ವಾರ್ಡ್ ಡಾಕ್ಟರ್ ಎಲ್ಲರ ಮೇಲೂ ಚೀರಿಬಿದ್ದರು. "ಸತ್ತುಬಿದ್ದಿರುವ ಹೆಣವನ್ನು ಗಮನಿಸಲು ನಿಮಗಾಗಲಿಲ್ಲವೆಂದು ಕಾಣುತ್ತೆ. ಸರ್ಕಾರದ ಹಣವು ನಿಮ್ಮನ್ನು ಕೊಬ್ಬೇರಿಸಿಬಿಟ್ಟಿದೆ. ನೆನ್ನೆಯ ದಿನ ನಾನು ನೋಡಿದಾಗ ರಾಮರಾಯರು ಎಷ್ಟೋ ಗುಣವಾಗಿದ್ದರೆಂದು ಕಂಡುಬಂದರು. ಒಂದು ದಿನದೊಳಗಾಗಿ ಇವರು ಸಾವಿಗೆ ತುತ್ತಾಗಬೇಕೆಂದರೆ ಕಾರಣ ?" ಎಂದು ಆರ್ಭಟಿಸಿದರು.

ನಂತರ ಹೆಣವನ್ನು ಪರಿಶೋಧಿಸಿ ನೋಡಲು ತೆಗೆದುಕೊಂಡು ಹೋದರು. ಹೆಣವನ್ನು ಟೆಸ್ಟ್ ರೂಮಿಗೆ ಕಳುಹಿಸಿದ ನಂತರ ವಾರ್ಡ್ ಡಾಕ್ಟರೂ ಹೋದರು.

ನರ್ಸ್ ಬಾಯಿ ತೆರೆಯಲಿಲ್ಲ. ಆಕೆಗೆ ಅಳು ಬರುತ್ತಿತ್ತು.

೨

ರಾಮರಾಯರು ಮೃತರಾದರೆಂಬ ಸುದ್ಧಿಯು ಅವರ ಕುಟುಂಬದವರ, ಬಂಧುಮಿತ್ರರ, ಸ್ನೇಹಿತರ ಮನಸ್ಸನ್ನು ಶೋಕಸಾಗರದಲ್ಲಿ ಮುಳುಗಿಸಿತು. ಪ್ರತಿಯೊಬ್ಬರೂ ರೋದನೆಮಾಡಿದರು.

ಶಾಂತ, ಹರಿ, ಗಿರಿ, ರವಿ ಮತ್ತು ಬಂಗಲೆಯ ಕೆಲಸಗಾರರೆಲ್ಲರೂ ಗೋಳಿಟ್ಟುಕೊಂಡೇ ಆಸ್ಪತ್ರೆಗೆ ತೆರಳಿದರು.

ಮೃತದೇಹವನ್ನು ಪರಿಶೋಧಿಸಲು ತೆಗೆದುಕೊಂಡು ಹೋಗಿದ್ದು ಒಂದು ಗಂಟೆಯಾದರೂ ಹೊರಗೆ ತರಲಿಲ್ಲ.

ಮೃತದೇಹವನ್ನು ಕಾಣಲು ನೂರಾರು ಜನರು ಆತುರಾತುರದಿಂದ ಒಂದೇ ಸಮನೆ ಹೆಣದ ಪರಿಶೋಧನೆಯ ಕೋಣೆಯ ಬಾಗಿಲ ಕಡೆ ನೋಡುತ್ತಿದ್ದರು.

ಮೆಡಿಕಲ್ ಆಫೀಸರು ಎರಡು ಗಂಟೆಗಳ ಕಾಲ ಹೆಣವನ್ನು ಶೋಧನೆ ಮಾಡಿ ಕೊನೆಗೆ 'ವಿಷ ಹಾಕಿ ಕೊಂದಿದ್ದಾರೆ' ಎಂದು ತೀರ್ಮಾನಮಾಡಿದರು.

ಅಕ್ಕಪಕ್ಕದಲ್ಲಿ ಮೆಡಿಕಲ್ ಆಫೀಸರು ಚಿಕಿತ್ಸೆ ಮಾಡುವಾಗ ಅವರಿಗೆ ನೆರವಾಗಿ ನಿಂತಿದ್ದವರೆಲ್ಲಾ ಸ್ತಬ್ಧರಾಗಿಬಿಟ್ಟರು, ದಿಗ್ಭ್ರಾಂತರಾದರು, ತಬ್ಬಿಬ್ಬಾದರು.

ಮೆಡಿಕಲ್ ಆಫೀಸರು ಪಕ್ಕದಲ್ಲಿ ನಿಂತಿದ್ದ ಡಾಕ್ಟರರ ಮೇಲೆಲ್ಲಾ ರೇಗಿ ಬಿದ್ದರು. ನರ್ಸ್‌ಗಳನ್ನು ನಿಂದಿಸಿದರು. ವಾರ್ಡ್ ಬಾಯ್‌ಗಳನ್ನು ಒಂದೆರಡೇಟು ಹೊಡೆದೂ ಬಿಟ್ಟರು. ನಂತರ ಹೆಣವನ್ನು ಅಲ್ಲೇ ಇರಿಸಿ ರಾಮರಾಯರು ಮಲಗಿದ್ದ ಫಸ್ಟ್ ವಾರ್ಡಿಗೆ ಬಂದು ವಾರ್ಡ್ ಡಾಕ್ಟರ್ ಪುಟ್ಟೇಗೌಡರನ್ನು ವಿಚಾರಿಸಿದರು.

ಪುಟ್ಟೇಗೌಡರು "ನಾನು ನಿನ್ನೆಯ ದಿನ ಮನೆಗೆ ಹೋಗುವಾಗ ರಾಮ

ರಾಯರ ಸ್ಥಿತಿಯು ಸ್ವಲ್ಪ ಸುಧಾರಣೆಗೆ ಬಂದಿತ್ತು. ಇಂದು ಬೆಳಗ್ಗೆ ಆರೂವರೆ ಗಂಟೆಯ ಹೊತ್ತಿಗೆ ಅವರು ಮೃತರಾಗುವುದೆಂದರೆ ನನಗೂ ತುಂಬಾ ಆಶ್ಚರ್ಯ ವಾಗಿದೆ. ಇವರ ವಿಷಯವಾಗಿ ನನಗೊಂದೂ ತಿಳಿಯದೆಂದು ವಿಷಾದಿಸು ತ್ತೇನೆ" ಎಂದುಬಿಟ್ಟರು.

ನರ್ಸನ್ನು ಕೇಳಿದರು.

"ನಾನು ನೆನ್ನೆಯ ದಿನ ಸಂಜೆ ಏಳು ಗಂಟೆಗೆ ನನ್ನ ಡ್ಯೂಟಿ ಮುಗಿಸಿ ಕೊಂಡು ರಾತ್ರಿ ಡ್ಯೂಟಿಗೆ ಬಂದಿದ್ದ ನನ್ನ ಪತಿ ಷಣ್ಮುಗಂರವರ ಬಳಿ ರೋಗಿ ಗಳ ಸ್ಥಿತಿಗತಿಗಳ ಪಟ್ಟಿಯನ್ನು ಕೊಟ್ಟು ನಾನು ಮನೆಗೆ ಹಿಂತಿರುಗುವಾಗಲೂ ರಾಮರಾಯರು ಚೆನ್ನಾಗಿದ್ದರೆಂದು ಊಹಿಸುತ್ತೇನೆ. ಮೂವತ್ತು ಜನ ರೋಗಿಗಳಿರುವ ಈ ವಾರ್ಡಿನಲ್ಲಿ ರಾಮರಾಯರನ್ನೇ ಪ್ರತ್ಯೇಕವಾಗಿ ನಾನು ಗಮನಿಸಲಿಲ್ಲ. ಅದಲ್ಲದೆ ಅವರು ಗುಣಹೊಂದುತ್ತಿದ್ದರು. ಅವರ ಮೇಲೆ ನನಗೆ ಮರಣಹೊಂದುವರೆಂಬ ಸಂಶಯ ಎಳ್ಳಷ್ಟೂ ಇರಲಿಲ್ಲ. ಬೆಳಿಗ್ಗೆ ನಾನು ಬರುವುದರೊರಳಗಾಗಿ ಇವರು ಹೆಣವಾಗಿಬಿಟ್ಟಿರುವುದು ಬಹಳ ಆಶ್ಚರ್ಯವಾಗಿದೆ" ಎಂದಳು ನರ್ಸ್.

"ನಿಮ್ಮ ಪತಿ ಷಣ್ಮುಗಂ ಡ್ಯೂಟಿ ನಿಮಗೆ ಒಪ್ಪಿಸುವಾಗ ರಾಮರಾಯರು ಜೀವದಿಂದಿದ್ದರೇ ?" ಅಂದರು ಚಕ್ರಪಾಣಿ.

"ಅದನ್ನು ನಾನು ಗಮನಿಸಲಿಲ್ಲ."

"ಗಮನಿಸದೆಯೇ ನೀನು ರೋಗಿಗಳು ಸಜೀವವಾಗಿದ್ದಾರೆಂಬ ನಿನ್ನ ಗಂಡ ಕೊಟ್ಟ ರಿಪೋರ್ಟನ್ನು ಹೇಗೆ ಒಪ್ಪಿಕೊಂಡೆ ?"

"ಪ್ರತಿದಿನವೂ ಹೇಗೆ ಒಪ್ಪಿಕೊಳ್ಳುತ್ತಿದ್ದೆನೋ ಹಾಗೆಯೇ ಇಂದೂ ಒಪ್ಪಿಕೊಂಡೆ. ಆದರೆ ಹೀಗೆ ಸಂಭವಿಸವುದು ಎಂದು ತಿಳಿದಿದ್ದರೆ ನೀವು ಹೇಳಿದಂತೆ ಒಬ್ಬೊಬ್ಬ ರೋಗಿಯನ್ನೂ ನೋಡಿ, ನಂತರ ಡ್ಯೂಟಿಯನ್ನು ಒಪ್ಪಿಕೊಳ್ಳುತ್ತಿದ್ದೆ."

"ಒಂದು ವೇಳೆ ನಿನ್ನ ಪತಿಯೇ ರಾಮರಾಯರಿಗೆ ಏತಕ್ಕೆ ವಿಷಕೊಟ್ಟಿರ ಬಾರದು ?"

"ಅವರೇ ವಿಷಕೊಟ್ಟರೆಂದು ನಾನು ಹೇಗೆ ತೀರ್ಮಾನಿಸಲಿ ? ಅವ ರನ್ನು ವಿಚಾರಿಸಿ ನೋಡಬೇಕು."

ವಾರ್ಡ್‌ಬಾಯ್‌ಗಳು "ನಮಗೆ ಗೊತ್ತಿಲ್ಲ. ನಾವು ನಿರಪರಾಧಿಗಳು" ಎಂದರು.

"ರಾಮರಾಯರು ಸತ್ತುಹೋದರಲ್ಲಾ ! ಎಂತಹ ಒಳ್ಳೆಯವರು. ಈ ವಾರ್ಡಿನಲ್ಲಿ ಮೂರು ವರ್ಷಗಳಿಂದಲೂ ಕೆಲಸಮಾಡುತ್ತಿದ್ದೇನೆ. ಆದರೆ ಇಂತಹ ಸದ್ಗುಣವುಳ್ಳ ರೋಗಸ್ಥರು ಯಾರೂ ಬಂದಿರಲಿಲ್ಲ. ಯಾರೋ ಅನ್ಯಾಯ ಮಾಡಿಬಿಟ್ಟರು" ಎಂದು ಅಳುವುದಕ್ಕೆ ಪ್ರಾರಂಭಿಸಿದ ವಾರ್ಡ್ ಬಾಯ್ ಬಾಷಾ.

ಚಕ್ರಪಾಣಿಯವರಿಗೆ ಒಂದೂ ಹೊಳೆಯಲಿಲ್ಲ. ಇದನ್ನು ಹೇಗಾದರೂ ಮಾಡಿ ಪತ್ತೆ ಮಾಡಲೇಬೇಕು. ಇಲ್ಲದಿದ್ದರೆ ಇಂತಹ ನೂರಾರು ಕೊಲೆಗಳು ನಡೆಯುವುದರಲ್ಲಿ ಸಂದೇಹವಿಲ್ಲ ಎಂದುಕೊಂಡರು.

"ಇಲ್ಲಿ ನೆರೆದಿರುವ ಪ್ರತಿಯೊಬ್ಬರೂ ನಿರಪರಾಧಿಗಳೆಂದೇ ಹೇಳುತ್ತಾರೆ. ನಾನು ಯಾರನ್ನು ದೂಷಿಸಲಿ. ಯಾರಮೇಲೆ ತಪ್ಪನ್ನು ಹೊರಿಸಲಿ" ಎಂದು ಕೊಂಡರು. ಸುಮ್ಮನೆ ಮೌನವಾಗಿಯೇ ಐದು ನಿಮಿಷ ಹಾಗೆಯೇ ವಾರ್ಡಿನ ಹೊರಗಡೆ ನಿಂತಿದ್ದು ಆಫೀಸು ರೂಮಿಗೆ ಹೋಗಿ ಫೋನನ್ನು ಕೈಗೆ ತೆಗೆದುಕೊಂಡು ಸೆಂಟ್ರಲ್ ಪೋಲೀಸ್ ಸ್ಟೇಷನ್ನಿಗೆ ಕಾಲ್ ಮಾಡಿದರು.

"ಯಾರು ಮಾತಾಡುತ್ತಿರುವುದು" ಪೋಲೀಸ್ ಸ್ಟೇಷನ್ನಿನಿಂದ ಮಾತ ನಾಡುವ ಧ್ವನಿ ಕೇಳಿಸಿತು.

"ನಾನು ವಿನ್ಸೆಂಟ್ ಆಸ್ಪತ್ರೆಯ ಮೆಡಿಕಲ್ ಆಫೀಸರ್ ಚಕ್ರಪಾಣಿ ಮಾತಾಡುತ್ತಿರುವುದು. ತಾವು ...."

"ನಾನು ಇನ್ಸ್‌ಪೆಕ್ಟರ್ ಬಜ್ಜಯ್ಯ. ಏನಾಗಬೇಕು ?

"ತಾವು ತಕ್ಷಣ ಇಲ್ಲಿಗೆ ಬರಬೇಕು. ನಮ್ಮ ಆಸ್ಪತ್ರೆಯ ಫಸ್ಟ್ ವಾರ್ಡಿ ನಲ್ಲಿ ಇಂದು ಬೆಳಿಗ್ಗೆ ಯಾರೋ ವಿಷಕೊಟ್ಟು ಒಬ್ಬ ರೋಗಿಯನ್ನು ಕೊಂದು ಹಾಕಿದ್ದಾರೆ. ಮೃತಹೊಂದಿದ ರೋಗಿಯು ಮಲ್ಲೇಶ್ವರದ ನಿವಾಸಿ ರಾಮ ರಾಯರು. ಶ್ರೀಮಂತರು. ಅವರು ಇಂದು ಮರಣಹೊಂದುತ್ತಾರೆಂದು ನಾವು ಊಹಿಸಿರಲಿಲ್ಲ. ಮುಂದಿನ ವಿಷಯ ತಾವು ಬಂದ ನಂತರ ಮುಖತಃ ತಿಳಿಸುತ್ತೇನೆ. ತಕ್ಷಣ ಬನ್ನಿ."

"ಈಗಲೇ ಬರುತ್ತಿದ್ದೇನೆ" ಎಂದು ಬಜ್ಜಯ್ಯ ಕೈಯಲ್ಲಿದ್ದ ರಿಸೀವರನ್ನು ಕೆಳಗಿಟ್ಟು ತನ್ನ ಸಹ ನೌಕರರನ್ನು ಜೊತೆಗೆ ಕರೆದುಕೊಂಡು ಹೊರಟರು.

ಅಷ್ಟರಲ್ಲಿ ರಾರ್ಜ ಒಬ್ಬನೇ ಜಟಕಾದಲ್ಲಿ ಕುಳಿತು ಏನೂ ತಿಳಿಯದವನಂತೆ ಆಸ್ಪತ್ರೆಯ ಫಸ್ಟ್ ವಾರ್ಡಿನ ಮುಂದೆ ಬಂದಿಳಿದ. ವಾರ್ಡಿನ ಬಳಿ ಶಾಂತ, ತಮ್ಮಂದಿರು, ಬಂಗಲೆಯ ಸೇವಕರು, ಡಾಕ್ಟರು, ನರ್ಸ್ ಪ್ರತಿಯೊಬ್ಬರೂ ಗುಂಪಾಗಿ ನಿಂತಿದ್ದರು.

ನರ್ಸನ್ನು ನೋಡಿದ ರಾರ್ಜ. ಅವಳ ಮುಖವು ಭಯದಿಂದ ಜೋತುಬಿದ್ದಿತ್ತು. ಮುಖದಲ್ಲಿ ಯಾವಾಗಲೂ ಇರುತ್ತಿದ್ದ ತೇಜಸ್ಸು ಕಾಣಿಸುತ್ತಿರಲಿಲ್ಲ. ನರ್ಸ್ ಒಂದು ವೇಳೆ ಸಿಕ್ಕಿಬಿಟ್ಟಿದ್ದಾಳೋ ಏನೋ ಎಂಬ ಭಯವು ರಾರ್ಜನನ್ನು ಚಂಚಲಗೊಳಿಸಿತು. ರಾರ್ಜನನ್ನು ಕಂಡ ಚಕ್ರಪಾಣಿ ಮಾತಾಡಿಸದೆ ತಲೆತಗ್ಗಿಸಿ ನಿಂತಿದ್ದರು.

ರಾರ್ಜ "ಗುಡ್‌ಮಾರ್ನಿಂಗ್ ಡಾಕ್ಟರ್" ಎಂದ.

ಚಕ್ರಪಾಣಿಯವರು ಒಪ್ಪಿಗೆಯೆನ್ನುವಂತೆ ತಲೆಯಲ್ಲಾಡಿಸಿದರು.

ಶಾಂತ ಕಲ್ಲಿನ ಕಂಭಕ್ಕೆ ತಲೆಯಿಟ್ಟು ಬಿಕ್ಕಿಬಿಕ್ಕಿ ಅಳುತ್ತಿದ್ದಳು. ರಾರ್ಜ ಅವಳನ್ನು ಮಾತಾಡಿಸಲಿಲ್ಲ.

ಚಕ್ರಪಾಣಿಯವರನ್ನು ಕುರಿತು,

"ನಮ್ಮ ತಂದೆಯವರ ಸ್ಥಿತಿ ಹೇಗಿದೆ ಡಾಕ್ಟರ್ !" ಎಂದು ಕೇಳಿದ.

ಚಕ್ರಪಾಣಿಯವರು ಉತ್ತರ ಕೊಡಲಿಲ್ಲ. ಪಕ್ಕದಲ್ಲಿದ್ದವರ್‍ಯಾರೂ ಯಾವ ಉತ್ತರವನ್ನೂ ಕೊಡಲಿಲ್ಲ.

"ಏಕೆ ಮೌನವಾಗಿದ್ದೀರಿ ಡಾಕ್ಟರ್. ನಿಜವನ್ನು ತಿಳಿಸಿ."

ಅದಕ್ಕೂ ಉತ್ತರ ಸಿಗಲಿಲ್ಲ.

ರಾರ್ಜ ಏನೂ ಅರಿಯುವದವನಂತೆ ಶಾಂತಳ ಬಳಿ ಬಂದು,

"ಏಕೆ ಅಳುತ್ತೀಯೆ ಶಾಂತ. ವಿಷಯವೇನು—ತಿಳಿಸು."

ಅಳುತ್ತಿದ್ದ ಶಾಂತ ಸ್ವಲ್ಪ ಸುಧಾರಿಸಿಕೊಂಡು "ಮಾವನವರು ಸತ್ತುಹೋದರು" ಎಂದು ಹೇಳಿ ಇನ್ನೂ ಹೆಚ್ಚಾಗಿ ಅಳಲು ಮೊದಲಾದಳು.

ಶಾಂತ ಹೇಳಿದ ಮಾತನ್ನು ಕೇಳಿ ರಾರ್ಜ "ಹ್ಞಾಂ.... ನನ್ನ ತಂದೆ ಸತ್ತುಹೋದರೇ....,ಅಯ್ಯೋ....ಅಪ್ಪಾ" ಎಂದು ರೋಧಿಸುತ್ತಾ ಕಣ್ಣೀರ್ಗರೆ

ಯಲು ಮೊದಲಾದ. ಎದುರಿಗಿದ್ದ ಕಲ್ಲುಕಂಬಕ್ಕೆ ತಲೆಯನ್ನು ತಗುಲಿಸಿದ. ಆದರೆ ಅದು ನೋಡುವವರಿಗೆ ಕಂಭಕ್ಕೆ ಡಿಕ್ಕಿ ಹೊಡೆದ ಎಂದೇ ತಿಳಿಯಬೇಕು.

ಕಂಭಕ್ಕೆ ತಗುಲಿದ ಕಾರಣ ತಲೆಯಲ್ಲಿ ಸ್ವಲ್ಪ ಚರ್ಮ ಸುಲಿದು ರಕ್ತ ಕಂಡಿತು.

ನಿಂತಿದ್ದವರೆಲ್ಲರೂ ರಾಜ್‌ನನ್ನು ಮೆಚ್ಚಿಕೊಂಡರು. ತಂದೆಯ ಮೇಲೆ ಮಗನಿಗೆ ಎಂತಹ ಮಮತೆ. "ಅಯ್ಯೋ ಪಾಪ! ಮನೆಗೆ ದೊಡ್ಡ ಮಗ. ತಂದೆಯ ಮೇಲೆ ಎಷ್ಟು ಅಭಿಮಾನ" ಎಂದುಕೊಳ್ಳುತ್ತಿದ್ದರು.

ಡ್ಯೂಟಿ ಡಾಕ್ಟರೊಬ್ಬರು ಸ್ಟೋರಿನ ಬಳಿ ಓಡಿಹೋಗಿ ಟಿಂಚರನ್ನು ತಂದು ಗಾಯವಾಗಿದ್ದ ತಲೆಗೆ ಹಚ್ಚಿ ಹತ್ತಿಯನ್ನಿಟ್ಟರು.

ಪಕ್ಕದಲ್ಲಿದ್ದವರು ರಾಜ್‌ಗೆ ಸಮಾಧಾನ ಹೇಳಿದರು.

"ಎಲ್ಲಿ ನನ್ನ ತಂದೆ ? ಅವರ ಮೃತವಾದ ಮುಖವನ್ನಾದರೂ ನೋಡುತ್ತೇನೆ" ಎಂದು ಡಾಕ್ಟರ್ ಬಳಿ ಅಂಗಲಾಚಿದ ರಾಜ್.

ಅದಕ್ಕೆ ಚಕ್ರಪಾಣಿಯವರು "ನಿಮ್ಮ ತಂದೆ ಯಾರೋ ದುಷ್ಟರ ಕೈಯಿಂದ ವಿಷ ಕುಡಿದು ಪ್ರಾಣ ಕಳೆದುಕೊಂಡಿದ್ದಾರೆ. ವಿಷ ಕೊಟ್ಟವರು ಯಾರೆಂಬುದು ಇನ್ನೂ ನಿರ್ಧಾರವಾಗಿಲ್ಲ. ಪೋಲೀಸರಿಗೆ ನಿಮ್ಮ ತಂದೆಯ ಮರಣದ ವಿಷಯ ಫೋನ್ ಮೂಲಕ ತಿಳಿಸಿದ್ದೇನೆ. ಇನ್ನೆರಡು ನಿಮಿಷಗಳಲ್ಲಿ ಪೋಲೀಸ್ ಇನ್ಸ್‌ಪೆಕ್ಟರ್ ಬಜ್ಜಯ್ಯನವರು ಇಲ್ಲಿಗೆ ಬರುತ್ತಾರೆ. ಅವರು ಇಲ್ಲಿಗೆ ಬಂದು ಕಳೇಬರವನ್ನು ನೋಡಿ, ಅವರು ಪೋಲೀಸ್ ರಿಪೋರ್ಟ್ ಬುಕ್ಕಿನಲ್ಲಿ ಬರೆದುಕೊಳ್ಳುವವರೆಗೂ ಹೆಣವನ್ನು ಯಾರಿಗೂ ತೋರಿಸುವುದಿಲ್ಲ. ಹೊರಗೆ ತಂದುಕೊಡುವುದೂ ಇಲ್ಲ" ಎಂದರು.

"ಅಯ್ಯೋ, ನನ್ನ ತಂದೆಗೆ ವಿಷ ಹಾಕಿ ಕೊಂದಿದ್ದಾರೆಯೇ ? ಅವರು ಮಾಡಿದ ತಪ್ಪಾದರೂ ಏನು? ಪ್ರತಿಯೊಬ್ಬರೂ ಅವರನ್ನು ಕಂಡು ದೇವರೆಂದು ಪೂಜಿಸುತ್ತಿದ್ದರಲ್ಲಾ ! ಅವರು ಯಾರಿಗೆ ದ್ರೋಹ ಮಾಡಿದ್ದರು ? ಯಾರೊಂದಿಗೆ ವಿರೋಧ ಬೆಳೆಸಿದ್ದರು........ನನ್ನ ಮತ್ತು ನನ್ನ ಕುಟುಂಬದವರ ಬಾಯಲ್ಲಿ ಯಾವನೋ ವಿಷ ಸುರಿದುಬಿಟ್ಟನಲ್ಲಾ. ಇನ್ನು ಮುಂದೆ

ನನ್ನ ತಂದೆಯನ್ನು ಜೀವಸಹಿತ ಯಾವಾಗ ನೋಡಲಿ? ಅವರೊಂದಿಗೆ ಯಾವಾಗ ಮಾತನಾಡಲಿ?" ಎಂದು ರಾಜ್ಞ ಗೋಳಿಟ್ಟ.

ಪೋಲೀಸ್ ವ್ಯಾನ್ ಆಸ್ಪತ್ರೆಯ ಗೇಟಿನೊಳಗೆ ಪ್ರವೇಶಿಸಿತು. ಚಕ್ರಪಾಣಿಯವರ ಪಕ್ಕದಲ್ಲಿ ನಿಂತಿದ್ದ ನರ್ಸಳು ಪೋಲೀಸರು ಬರುತ್ತಿದ್ದಾರೆ ಎಂದು ಸಂಜ್ಞೆ ಮಾಡಿದಳು. ಆಕೆ ಸಂಜ್ಞೆ ಮಾಡಿದ್ದು ಮತ್ತಾರೂ ತಿಳಿದು ಕೊಳ್ಳುವಂತಿರಲಿಲ್ಲ.

ಪೋಲೀಸ್ ವ್ಯಾನ್ ಫಸ್ಟ್ ವಾರ್ಡಿನ ಬಳಿ ಬಂದು ನಿಂತಿತು. ವ್ಯಾನಿಂದ ಇನ್ಸ್ಪೆಕ್ಟರ್ ಬಜ್ಜಯ್ಯನವರು ಕೆಳಗಿಳಿದು ಎದುರಿಗಿದ್ದ ಚಕ್ರಪಾಣಿಯವರಿಗೆ ನಮಸ್ಕಾರ ಮಾಡಿದರು. ಚಕ್ರಪಾಣಿಯವರು ಬಜ್ಜಯ್ಯನವರನ್ನು ಕರೆದುಕೊಂಡು ಹೆಣದ ಕೊಠಡಿಗೆ ಹೋದರು.

ಇನ್ಸ್ಪೆಕ್ಟರ್ ಬಜ್ಜಯ್ಯನವರು ಪೋಲೀಸ್ ವ್ಯಾನಿನಲ್ಲಿ ಬಂದದ್ದೇ ರಾಜ್ಞನ ಮನಸ್ಸಿನಲ್ಲಿ ನಡುಕ ಹುಟ್ಟಿತು. ಮೈ ಬೆವರಿತು. ಆದರೂ ಆ ಸಮಯದಲ್ಲಿ ಅವನು ಗಡಗಡನೆ ನಡುಗಿದರೂ ಸಹಾ ಅವನ ಮೇಲೆ ಯಾರೂಸಂಶಯಪಡುವುದಿಲ್ಲವೆಂದು ಅವನ ಭಾವನೆಯಾಗಿತ್ತು.

ನರ್ಸಳು ಎಲ್ಲಿಗಾದರೂ ಹೋಗಿಬಿಡೋಣವೇ ಎಂದುಕೊಳ್ಳುತ್ತಿದ್ದಳು. ಆದರೆ ಹೋಗುವುದೆಲ್ಲಿಗೆ? ಈಗ ಆಕೆ ಎಲ್ಲಿಗಾದರೂ ಹೋದರೆ ಸಂದೇಹ ತನ್ನ ಮೇಲೆ ಖಂಡಿತ ಬಂದುಬಿಡಬಹುದು ಎಂದುಕೊಂಡು ಅಲ್ಲಿಯೇ ನಿಂತಳು. ಅಲ್ಲಿಂದ ಕದಲಲಿಲ್ಲ.

ರಾಜ್ಞ ಕರ್ಚೀಫನ್ನು ಬಾಯಿಗೆ ತುರುಕಿಕೊಂಡು ಅಳುತ್ತಾ ಇರುವವನಂತೆ ನಟಿಸುತ್ತಿದ್ದ.

ಇನ್ಸ್ಪೆಕ್ಟರು ಹೆಣವನ್ನು ನೋಡಿದರು. ವಿಷವನ್ನು ಹಾಕಿರುವುದು ನಿಜವೇ ಎಂಬುವಂತೆ ವಿಷ ಬೆರೆತಿದ್ದ ಒಂದೆರಡು ಅಂಗಗಳನ್ನು ಇನ್ಸ್ಪೆಕ್ಟರಿಗೆ ಅರ್ಥವಾಗುವಂತೆ ಚಕ್ರಪಾಣಿ ವಿವರಿಸಿ ಹೇಳಿದರು.

ಮೆಡಿಕಲ್ ಆಫೀಸರೂ, ಮೇಧಾವಿಗಳೂ, ಡಾಕ್ಟರ್ ಉದ್ಯೋಗದಲ್ಲಿ ನಿಪುಣರೂ ಆದ ಚಕ್ರಪಾಣಿಯವರ ಮಾತುಗಳನ್ನು ನಂಬಿ, ಅದರ ಬಗ್ಗೆ ಮುಂದೆ ತನಿಖೆ ನಡೆಸಿ ಕಂಡುಹಿಡಿಯುತ್ತೇನೆ ಎಂಬುದಾಗಿ ಇನ್ಸ್ಪೆಕ್ಟರು ಚಕ್ರಪಾಣಿಯವರಿಗೆ ಭರವಸೆ ಕೊಟ್ಟರು.

"ಈಗ ಹೆಣವನ್ನು ದರ್ಶ ಮಾಡಲು ಕಳುಹಿಸಿಕೊಡಬಹುದಲ್ಲವೇ ?" ಎಂದರು ಚಕ್ರಪಾಣಿ.

"ಓಹೋ. ಹಾಗೆಯೇ ಮಾಡಿ. ಕಳುಹಿಸಿಕೊಟ್ಟುಬಿಡಿ" ಎಂದರು ಇನ್ಸ್ಪೆಕ್ಟರ್ ಬಜ್ಜಯ್ಯ.

ಅಷ್ಟರಲ್ಲಿ ಒಬ್ಬ ವಾರ್ಡ್‌ಬಾಯ್ ಒಂದು ಚೀಟಿಯನ್ನು ತೆಗೆದುಕೊಂಡು ಬಂದು ಚಕ್ರಪಾಣಿಯವರ ಕೈಗೆ ತಂದುಕೊಟ್ಟನು.

ಅದನ್ನು ಓದಿ ಇನ್ಸ್ಪೆಕ್ಟರ ಕೈಗೆ ಕೊಟ್ಟರು ಚಕ್ರಪಾಣಿ.

"ಓಹೋ. ಥಾಮಸ್ ! ಅವರನ್ನು ಬರಹೇಳು" ಎಂದು ವಾರ್ಡ್ ಬಾಯ್ ಕೈಲಿ ಹೇಳಿ ಕಳುಹಿಸಿದರು ಇನ್ಸ್ಪೆಕ್ಟರ್.

"ಥಾಮಸ್ ಎಂದರೆ ಯಾರು ? ಇಂತಹ ವಿಷಯದಲ್ಲಿ ಯಾವ ಸ್ನೇಹಿತರಾದರೂ ಸ್ವಲ್ಪ ದೂರ ಇರಿಸುವುದೇ ಒಳ್ಳೆಯದು."

"ಹಾಗೆ ಬೇರೆ ವೃಥಾ ಸ್ನೇಹಿತರಲ್ಲ. ಈತ ಹೆಸರಾಂತ ಪತ್ತೇದಾರ ಥಾಮಸ್ ಎಂದು. ಇವರ ತಂದೆತಾಯಿಯರು ಇನ್ನೂ ಪಾಶ್ಚಾತ್ಯದೇಶದಲ್ಲಿಯೇ ವಾಸ ಮಾಡುತ್ತಿದ್ದಾರೆ. ಇವರ ತಾಯಿ ಇಂಡಿಯಾ ದೇಶಕ್ಕೆ ಬಂದಿದ್ದಾಗ ಹಿಂದೂ ಶ್ರೀಮಂತ ಯುವಕನನ್ನು ಪ್ರೇಮಿಸಿ ಇವರನ್ನು ಹಡೆದಳು. ಈಗ ಇವರು ಇಲ್ಲಿಯೇ ಇದ್ದಾರೆ. ಒಂದೆರಡು ಬಾರಿ ಅವರ ಸ್ವಂತ ಊರಿಗೂ ಹೋಗಿ ಬಂದಿದ್ದಾರೆ. ಅವರು ಬರಲಿ" ಎಂದರು.

"ಹಾಗಾದರೆ ಬರಲಿ" ಎಂದರು ಇನ್ಸ್ಪೆಕ್ಟರ ಮಾತಿಗೆ ಪ್ರತ್ಯುತ್ತರವಾಗಿ ಚಕ್ರಪಾಣಿ.

ಥಾಮಸ್ ಹೆಣದ ಕೊಠಡಿಯೊಳಗೆ ಪ್ರವೇಶಿಸಿದರು.. ಇನ್ಸ್ಪೆಕ್ಟರನ್ನು ಕುರಿತು,

"ನಮಸ್ಕಾರ ಬಜ್ಜಯ್ಯನವರೇ. ತಾವು ಇಲ್ಲಿಗೆ ಬಂದಿದ್ದೀರೆಂಬುದಾಗಿ ಸ್ಟೇಷನ್ನಿನಲ್ಲಿ ಹೇಳಿದರು. ಕೂಡಲೇ ಹೊರಟುಬಂದೆ. ಈ ಹೆಣದ ಕೇಸಿನ ಅರ್ಥವೇನು ?"

"ಈಗ ಹೆಣವಾಗಿ ಬಿದ್ದಿರುವವರು ಮಲ್ಲೇಶ್ವರದ ಒಬ್ಬ ಶ್ರೀಮಂತರು. ರೋಗಗ್ರಸ್ತರಾಗಿ ಆಸ್ಪತ್ರೆಗೆ ಬಂದಿದ್ದರು. ಎರಡು ತಿಂಗಳುಗಳಿಂದಲೂ ರೋಗವು ವಾಸಿಯಾಗದೆ ಈಗ ಒಂದು ಹದಿನೈದು ದಿನದಿಂದ ಸ್ವಲ್ಪ ಹುಷಾ

ರಾಗುತ್ತಾ ಬಂದಿದ್ದರು. ಇದ್ದಕ್ಕಿದ್ದಂತೆ ಇಂದು ಬೆಳಗ್ಗೆ ಆರು ಗಂಟೆ ಹೊತ್ತಿಗೆ ಹೆಣವಾಗಿ ಬಿದ್ದಿದ್ದಾರೆ. (ಚಕ್ರಪಾಣಿಯವರನ್ನು ತೋರಿಸಿ) ಈ ನಮ್ಮ ಮೆಡಿಕಲ್ ಆಫೀಸರ್ ಚಕ್ರಪಾಣಿಯವರು ಬೆಳಗಿನ ಪರಿಶೋಧನೆಗಾಗಿ ಬಂದಾಗ ರೋಗಿಯು ಮಂಚದಮೇಲೆ ಹೆಣವಾಗಿಬಿಟ್ಟದ್ದರಂತೆ. ಯಾರನ್ನು ಕೇಳಿದರೂ ಪ್ರತಿಯೊಬ್ಬರೂ 'ನನಗೆ ತಿಳಿಯದು' 'ನನಗೆ ತಿಳಿಯದು' ಎಂದು ಹೇಳುತ್ತಿದ್ದಾರೆ. ಹೆಣವನ್ನು ಪರೀಕ್ಷಿಸಿ ನೋಡಿದ ನಂತರ ವಿಷ ಹಾಕಿ ಕೊಂದಿದ್ದಾರೆಂದು ತಿಳಿದಿದೆ. ವಿಷ ಕೊಟ್ಟವರು ಯಾರೆಂಬುದು ಇನ್ನೂ ತಿಳಿದಿಲ್ಲ. ಇದಕ್ಕೊಂದು ಉಪಾಯ ನೀವೇ ಹುಡುಕಬೇಕು" ಎಂದರು.

ಥಾಮಸ್ ಚಕ್ರಪಾಣಿಯನ್ನು ಕುರಿತು,

"ನೀವು ಹೆಣವನ್ನು ಪರೀಕ್ಷೆಮಾಡಿ ನೋಡಿದಾಗ ಈ ಮನುಷ್ಯ ಸತ್ತು ಎಷ್ಟು ಹೊತ್ತಾಗಿರಬೇಕೆಂಬುದನ್ನು ತಿಳಿದುಕೊಂಡಿರಾ ?"

"ಕೇವಲ ಒಂದು ಗಂಟೆಯನ್ನು ಮೀರಿರಲಾರದು."

"ಹಾಗಾದರೆ ಒಂದು ಗಂಟೆಯೊಳಗೆ ಈತನಿಗೆ ವಿಷ ಕೊಟ್ಟಿರಬೇಕಾದರೆ ಈ ಮನುಷ್ಯನ ಸಂಬಂಧೀಕರಲ್ಲಿ ಯಾರಾದರೂ ತಂದು ಕುಡಿಸಿ ಹೊರಟು ಹೋಗಿರಬಹುದು."

"ನಾನು ವಾರ್ಡ್‌ಬಾಯನ್ನು ವಿಚಾರಿಸಿದೆ. ಆತನು ಯಾರೂ ಇಲ್ಲಿಗೆ ಬರಲಿಲ್ಲ. ನಾನು ಗಮನಿಸುತ್ತಲೇ ಇದ್ದೆ" ಎಂದನು.

"ನಿಜವಾಗಿಯೂ ವಿಷಹಾಕಿದ್ದಾರೆಂದು ತೀರ್ಮಾನಿಸುತ್ತೀರೇನು ಡಾಕ್ಟರೇ ? ಮತ್ತೊಮ್ಮೆ ಪರೀಕ್ಷಿಸಿ ನೋಡಿ. ಒಂದುವೇಳೆ ಎರಡು ತಿಂಗಳಿಂದ ರೋಗದಿಂದ ನರಳಿ ನರಳಿ ರೋಗ ಹೆಚ್ಚಾಗಿ ಸತ್ತಿರಬೇಕು. ಸಾವು—ಹುಟ್ಟು ಯಾರನ್ನೂ ಲಕ್ಷದಲ್ಲಿಡುವುದಿಲ್ಲ. ಸ್ವಲ್ಪ ಮುತುವರ್ಜಿಯಿಂದ ಪ್ರಯತ್ನಿಸಿ ನೋಡಿ."

ಪುನಃ ಚಕ್ರಪಾಣಿಯವರು ಶವವನ್ನು ಮುಟ್ಟಿ ಪರೀಕ್ಷಿಸಿದರು.

"ಖಂಡಿತ ಹೇಳುತ್ತೇನೆ ಮಿಸ್ಟರ್ ಥಾಮಸ್. ವಿಷ ಹಾಕಿ ಕೊಂದಿರುವುದು ನೂರಕ್ಕೆ ನೂರು ನಿಜ" ಎಂದರು.

ರಾಜ್ ತನ್ನ ತಂದೆಯ ಮುಖವನ್ನು ನೋಡಲು ಆತುರಪಟ್ಟ, ಹಂಬಲಿಸಿದ. ಶವದ ಕೊಠಡಿಯ ಮುಂದೆ ಅಲೆದಾಡಿದ.

ಕೊನೆಗೆ ಶವವನ್ನು ರಾರ್ಜನ ಅಧೀನಕ್ಕೆ ಕೊಟ್ಟುಬಿಟ್ಟರು.

ರಾರ್ಜ ಆದಷ್ಟು ಜಾಗ್ರತೆ ಆ ಶವವನ್ನು ಅಗ್ನಿಗೆ ಕೊಡಲು ಪ್ರಯತ್ನಿಸಿದ. ಊರಿಗೆ ಹೋಗಿರುವ ರಾಮರಾಯರ ಎರಡನೆ ಹೆಂಡತಿ ಲಕ್ಷ್ಮಮ್ಮ ಬಂದ ನಂತರ ಶವ ಸಂಸ್ಕಾರ ನಡೆಯಬೇಕೆಂದು ಸಲಹೆಕೊಟ್ಟರು. ಲಕ್ಷ್ಮಮ್ಮನ ಮಕ್ಕಳು ಮೂವರೂ ಹಾಗೆಯೇ ಬೇಡಿಕೊಂಡರು. ಆದರೆ ರಾರ್ಜ ತನ್ನ ಇಷ್ಟದಂತೆ ಯಾರ ಮಾತನ್ನೂ ಲಕ್ಷಿಸದೆ ರಾಮರಾಯರ ಭೌತಿಕ ಶರೀರವನ್ನು ಅಗ್ನಿಗೆ ಆಹುತಿಕೊಟ್ಟ. ಅಕ್ಕಪಕ್ಕದ ಜನರು, ಮಕ್ಕಳು, ಬಂಧುಗಳು ಗೋಳಿಟ್ಟರು.

೩

ಇನ್ಸ್‌ಪೆಕ್ಟರ್ ಬಜ್ಜಯ್ಯ, ಪತ್ತೇದಾರ್ ಥಾಮಸ್ ಇಬ್ಬರೂ ಸಂಜೆ ಆರು ಗಂಟೆಯ ಹೊತ್ತಿಗೆ ಪಾರ್ಕಿನ ಕಡೆ ನಡೆದರು. ಥಾಮಸ್‌ರವರ ಮನಸ್ಸಿನಲ್ಲಿ ವಿಷಹಾಕಿದವರು ಯಾರೆಂಬ ಒಂದೇ ಚಿಂತೆ. ಬಜ್ಜಯ್ಯನವರು ಮಾತ್ರ ಆ ವಿಷಯದ ಬಗ್ಗೆ ಹೆಚ್ಚು ಗಮನವನ್ನು ಕೊಡುತ್ತಿರಲಿಲ್ಲ.

"ಆಸ್ಪತ್ರೆಯಲ್ಲಿ ದಿನ ಸಾಯುವವರೆಷ್ಟೋ? ಬದುಕುವವರೆಷ್ಟೋ! ಈ ಡಾಕ್ಟರು ಸಂದೇಹಪಟ್ಟುಬಿಟ್ಟರೆ ನಾವು ಅದಕ್ಕಾಗಿ ಪತ್ತೆಹಚ್ಚಬೇಕೆ? ಇದೆಲ್ಲ ಯಾರಿಂದ ಸಾಧ್ಯ. ಈಗ ಬಿದ್ದಿರುವ ಕೇಸುಗಳನ್ನು ಕಂಡುಹಿಡಿಯುವುದೇ ಕಷ್ಟವಾಗಿದೆ. ಇಂತಹದರಲ್ಲಿ ಈ ಕೇಸುಗಳು ಯಾರಿಗೆ ಬೇಕು ಥಾಮಸ್. ನಮಗೆ ಈ ದರಿದ್ರ ಚಿಂತೆಗಳೆಲ್ಲಾ ಬೇಡ. ಅದೂ ವಯಸ್ಸಾಗಿತ್ತು ರಾಮರಾಯರಿಗೆ. ಇನ್ನು ಎಷ್ಟು ದಿನತಾನೆ ಬದುಕಬೇಕು. ಅದರ ಬಗ್ಗೆ ಹೆಚ್ಚು ಯೋಚಿಸಿ ತಲೆಕೆಡಿಸಿಕೊಳ್ಳಬೇಡಿ." ಎಂದರು ಬಜ್ಜಯ್ಯ.

"ಹಾಗಲ್ಲ ಇನ್ಸ್‌ಪೆಕ್ಟರೇ, ಒಬ್ಬ ಘನ ಶ್ರೀಮಂತರು ಆಸ್ಪತ್ರೆಯಲ್ಲಿ ಎರಡು ತಿಂಗಳಿಂದ ಕಾಯಿಲೆಯಿಂದಿದ್ದು, ಗುಣವಾಗುತ್ತಾ ಬಂದು ಈಗ ಇದ್ದಕ್ಕಿದ್ದಂತೆ ಬೆಳಗ್ಗೆ ಆರು ಗಂಟೆ ಹೊತ್ತಿನಲ್ಲಿ ಸಾಯಬೇಕೆಂದರೆ ಇದರಲ್ಲಿ ಏನೋ ಸಂಶಯವಿದ್ದೇ ಇದೆ. ಅದಲ್ಲದೆ ರಾತ್ರಿ ಡ್ಯೂಟಿ ಮುಗಿಸಿಕೊಂಡು ಹೋದ ಷಣ್ಮುಗಂ ಒಂದು ವೇಳೆ ದುಡ್ಡಿನ ಆಸೆಗಾಗಿ ರಾಮರಾಯರಿಗೆ ವಿಷ ಕುಡಿಸಿಬಿಟ್ಟಿದ್ದರೆ?"

"ಅವನೇಕೆ ಕುಡಿಸಲು ಹೋಗುತ್ತಾನೆ ಥಾಮಸ್. ನಿಮಗೊಂದು ಹುಚ್ಚು. ನೂರಾರು ಜನರಿರುವ ಆಸ್ಪತ್ರೆಯಲ್ಲಿ ರಾಮರಾಯರಿಗೆ ಮಾತ್ರ ವಿಷಕೊಟ್ಟು ಕೊಲ್ಲಬೇಕೆಂದರೆ ಆತನಿಗೆ ರಾಮರಾಯರ ಮೇಲೆ ದ್ವೇಷವಾದರೂ ಏನಿದೆ?"

"ದ್ವೇಷವೋ, ಪ್ರೇಮವೋ,! ನಾನು ಬರಹೇಳಿ ಕಳುಹಿಸಿದಾಗ ಅವನು ಮನೆಯಲ್ಲಿರಲಿಲ್ಲ. ಎಲ್ಲಿಗೋ ಹೋಗಿದ್ದ. ಇದುವರೆವಿಗೂ ಬಂದಿಲ್ಲ. ಒಂದು ವೇಳೆ ಅವನೇ ಈ ಕೆಲಸ ಮಾಡಿರಬೇಕು. ಅವನನ್ನು ಮೊದಲು ಹಿಡಿದು ವಿಚಾರಣೆಗೆ ತೆಗೆದುಕೊಂಡರೆ ನಂತರ ಎಲ್ಲ ವಿಷಯವೂ ಹೊರ ಬೀಳುತ್ತೆ."

"ಸರಿ ನಿಮ್ಮಿಷ್ಟದಂತೆ ಮಾಡಿ" ಎಂದರು ಇನ್ಸ್ಪೆಕ್ಟರ್.

ದೂರದಲ್ಲಿ ಒಂದು ಬ್ಯೂಕ್ ಕಾರ್ ಮೆಲ್ಲಗೆ ಬರುತ್ತಿದ್ದುದು ಕಾಣಿಸಿತು. ಕಾರಿನಲ್ಲಿ ಓರ್ವ ತರುಣ. ಸುಮಾರು ಮೂವತ್ತು ವಯಸ್ಸಿರಬಹುದು. ದುಂಡು ಮುಖ. ಹಸುರು ಬಣ್ಣದ ಬುಷ್‌ಕೋಟ್, ಬಿಳೀ ಪ್ಯಾಂಟ್, ಬಾಯಲ್ಲಿ ಸಿಗರೇಟನ್ನು ಕಚ್ಚಿಕೊಂಡು ತಾನೇ ಸ್ವಂತ ಡ್ರೈವ್‌ಮಾಡಿಕೊಂಡು ಬರುದ್ದಾನೆ.

ಕಾರು ಸಮೀಪಿಸಿತು. ಕಾರನ್ನು ಡ್ರೈವ್ ಮಾಡಿಕೊಂಡು ಬರುತ್ತಿದ್ದವರನ್ನು ದೃಷ್ಟಿಸಿ ನೋಡಿದರು ಪತ್ತೇದಾರರು. ಇನ್ಸ್ಪೆಕ್ಟರ್ ಬಜ್ಜಯ್ಯನವರೂ ಸಹ ನೋಡಿದರು. ನಂತರ ಬಜ್ಜಯ್ಯ ಥಾಮಸ್ ಒಬ್ಬರಿಗೊಬ್ಬರು ತಮ್ಮ ತಮ್ಮ ಮುಖಗಳನ್ನು ನೋಡಿಕೊಂಡರು.

ಕಾರಿನಲ್ಲಿ ಕುಳಿತು ಡ್ರೈವ್‌ಮಾಡಿಕೊಂಡು ಬರುತ್ತಿದ್ದವನು ಥಾಮಸ್‌ರವರ ಮುಖವನ್ನು ಕಂಡದ್ದೇ ಕೈಯಲ್ಲಿ ಹಿಡಿದಿದ್ದ ಸ್ಟೇರಿಂಗ್‌ನ ಮಧ್ಯೆ ತಲೆ ಮರೆಮಾಡಿಕೊಂಡು ವೇಗವಾಗಿ ಹೊರಟುಹೋದ. ಥಾಮಸ್ ಪುನಃ ಪುನಃ ಕಾರು ಹೋದಕಡೆ ದೃಷ್ಟಿಯಿಟ್ಟು ನೋಡುತ್ತಲೇ ಇದ್ದರು. ಇನ್ಸ್ಪೆಕ್ಟರ್ ಬಜ್ಜಯ್ಯನವರೂ ಸ್ವಲ್ಪ ಬೆದರಿದರು.

"ಇಲ್ಲಿಗೂ ಬಂದಿದ್ದಾನಲ್ಲ ಥಾಮಸ್."

"ಬರಲಿ, ಅವನಿಗೆ ಕೇಡುಗಾಲ ಸಮೀಪಿಸುತ್ತಿದೆಯೆಂದು ಕಾಣುತ್ತೆ."

"ಹೇಗಾದರೂ ಇವನನ್ನು ಪತ್ತೆ ಮಾಡಲೇಬೇಕು. ಇವನು ಇಲ್ಲಿಗೆ

ಸುಮ್ಮನೆ ಬಂದಿರಲಾರ. ಯಾವುದೋ ಕಾರ್ಯೋನ್ಮುಖನಾಗಿಯೇ ಬಂದಿರುತ್ತಾನೆ. ಈ ಊರಿನಲ್ಲಿರುವ ಯಾರಿಗೆ ಏನು ಸಂಕಟ ಕಾದಿದೆಯೋ ದೇವರೇ ಬಲ್ಲ."

"ಹಾಳಾಗಿಹೋಗಲಿ ಸುಮ್ಮನಿರಿ ಇನ್ಸ್ಪೆಕ್ಟರೇ. ಅವನ ಬಾಲ ಇಲ್ಲಿ ಆಡಿಸಲು ಆಗದಂತೆ ನಾನು ತಕ್ಕ ಏರ್ಪಾಡು ಮಾಡುತ್ತೇನೆ" ಎಂದು ಹೇಳುತ್ತಾ ರೈಲ್ವೆ ಸ್ಟೇಷನ್ನಿನ ಕಡೆಗೆ ನಡೆದರು ಥಾಮಸ್.

ದಾರಿಯಲ್ಲಿ ಒಬ್ಬ ಪೋಲೀಸ್ ಕಾನ್ಸ್ಟೇಬಲ್ ಬಂದು "ವಿನ್ಸೆಂಟ್ ಆಸ್ಪತ್ರೆಯ ನರ್ಸ್ ಷಣ್ಮುಗಂನನ್ನು ಕರೆದುಕೊಂಡು ಬಂದಿದ್ದಾರೆ" ಎಂದು ಇನ್ಸ್ಪೆಕ್ಟರ ಬಳಿ ತಿಳಿಸಿದ.

ಪತ್ತೇದಾರ ಥಾಮಸ್‌ರವರು ತಾವು ರೈಲ್ವೆ ಸ್ಟೇಷನ್ನಿನ ಬಳಿಗೆ ಹೋಗಿ ಯಾರೋ ಸ್ನೇಹಿತರನ್ನು ನೋಡಿಕೊಂಡು ಬರುವಂತೆ ಹೇಳಿ ಹೊರಟು ಹೋದರು.

ಇನ್ಸ್ಪೆಕ್ಟರು ಪೋಲೀಸ್ ಕಾನ್ಸ್ಟೇಬಲ್‌ನೊಂದಿಗೆ ಪೋಲೀಸ್ ಸ್ಟೇಷನ್ನಿಗೆ ತೆರಳಿದರು.

ಸ್ಟೇಷನ್ನಿನಲ್ಲಿ ಷಣ್ಮುಗಂನನ್ನು ಬೆಂಚಿನಮೇಲೆ ಕೂಡಿಸಿದ್ದರು. ಇನ್ಸ್ಪೆಕ್ಟರನ್ನು ಕಂಡೊಡನೆಯೇ ಷಣ್ಮುಗಂನಿಗೆ ದಿಗಿಲಾಯಿತು. "ನನ್ನನ್ನು ಇಲ್ಲಿಗೆ ಕರೆತಂದಿರುವುದು ಏತಕ್ಕಾಗಿ ? ಒಂದು ವೇಳೆ ತಪ್ಪು ನನ್ನ ಮೇಲೆ ಹೊರಿಸಿದರೆ ನನ್ನ ಗತಿ ಏನಾಗಬೇಕು ?" ಎಂದು ಕುದಿಯುತ್ತಿತ್ತು ಅವನ ಮನಸ್ಸು.

ಇನ್ಸ್ಪೆಕ್ಟರು ಷಣ್ಮುಗಂನನ್ನು ದುರದುರನೆ ನೋಡಿದರು. ಷಣ್ಮುಗಂ ತಲೆ ತಗ್ಗಿಸದೆ ಇನ್ಸ್ಪೆಕ್ಟರನ್ನು ನೋಡುತ್ತಲೇ ಇದ್ದ. ಇನ್ಸ್ಪೆಕ್ಟರ್ ಆರಾಮ ಕುರ್ಚಿಯ ಮೇಲೆ ಕುಳಿತುಕೊಂಡರು. ಪೋಲೀಸ್ ಕಾನ್ಸ್ಟೇಬಲ್ ನೊಬ್ಬನು ಷಣ್ಮುಗಂನನ್ನು ಇನ್ಸ್ಪೆಕ್ಟರ ಬಳಿ ನಿಲ್ಲಿಸಿದನು.

"ಇವರೇ ಸಾರ್, ವಿನ್ಸೆಂಟ್ ಆಸ್ಪತ್ರೆಯ ಫಸ್ಟ್ ವಾರ್ಡಿನ ರಾತ್ರಿ ಡ್ಯೂಟಿ ನರ್ಸ್ ಷಣ್ಮುಗಂ" ಎಂದನು ಕಾನ್ಸ್ಟೇಬಲ್.

ಆಗಲೂ ಇನ್ಸ್ಪೆಕ್ಟರು ಷಣ್ಮುಗಂನನ್ನು ನೋಡುತ್ತಲೇ ಇದ್ದರು. ಷಣ್ಮುಗಂ ತಲೆ ತಗ್ಗಿಸಿ ನಿಂತಿದ್ದ.

"ಯಾರಯ್ಯಾ ನೀನು ? ನಿನ್ನ ಹೆಸರೇನು ?" ಎಂದು ಜೋರಾಗಿ ಆರ್ಭಟಿಸಿದರು ಕೈಯಲ್ಲಿದ್ದ ರೂಲುದೊಣ್ಣೆಯನ್ನು ತಿರುಗಿಸುತ್ತಾ.

"ನನ್ನ ಹೆಸರು ಷಣ್ಮುಗಂ. ವಿನ್ಸೆಂಟ್ ಆಸ್ಪತ್ರೆಯಲ್ಲಿ ಮೇಲ್ ನರ್ಸ್."

"ಶೇಷಾದ್ರಿಪುರದ ರಾಮರಾಯರು ನೀನು ನೋಡಿಕೊಳ್ಳುತ್ತಿದ್ದ ಫಸ್ಟ್ ವಾರ್ಡಿನಲ್ಲಿದ್ದರಲ್ಲವೇ ?"

"ಹೌದು. ಇದ್ದರು."

"ಅವರ ಮೇಲೆ ನಿನಗೇನಾದರೂ ದ್ವೇಷವಿದ್ದಿತೇ ?"

"ರೋಗಿಗಳ ಮೇಲೆ ನನಗೇನು ದ್ವೇಷ ಸಾರ್. ದ್ವೇಷವೊಂದೂ ಇಲ್ಲ."

"ಹಾಗಾದರೆ ಅವರು ಸಾಯಲು ಕಾರಣ ?"

"ಅವರ ಹೃದಯ ಬೇನೆಯ ತೀರದ ಬಾಧೆಯು ಅವರನ್ನು ಇಹ ಲೋಕದಿಂದ ತೊರೆದಿರಬಹುದು."

"ಥತ್....ಕೇಳಿದ್ದಕ್ಕೆ ಬದಲು ಕೊಡು. ಅವರು ವಿಷವನ್ನು ಕುಡಿದು ಸತ್ತಿರಬೇಕಾದರೆ ಕಾರಣ ?"

"ಹ್ಞಾಂ. ಅವರು ವಿಷಪಾನಗ್ರಸ್ತರಾಗಿ ಸತ್ತಿದ್ದಾರೆಯೇ !" ಆ ಮಾತನ್ನು ಕೇಳಿ ಅವಕ್ಕಾದನು ಷಣ್ಮುಗಂ.

"ಓಹೋ. ಬಹಳ ಹೊಸ ಸಮಾಚಾರವನ್ನು ಈಗ ತಾನೇ ಕೇಳಿದವನಂತೆ ನಟಿಸುತ್ತಿದ್ದೀಯಲ್ಲ ಮಿಸ್ಟರ್ ಷಣ್ಮುಗಂ. ನಿಜ ಹೇಳು. ವಿಷಪಾನದಿಂದ ರಾಮರಾಯರು ಸತ್ತು ಸಂಜೆಯಾಗುತ್ತಾ ಬಂತು. ಬೆಳಗ್ಗೆ ನೀನು ನಿನ್ನ ಪತ್ನಿಗೆ ಡ್ಯೂಟಿ ಒಪ್ಪಿಸಿಹೋಗುವಾಗಲೂ ರಾಮರಾಯರು ಜೀವಂತರಾಗಿದ್ದಾರೆಂದು ರೋಗಿಗಳ ರಿಪೋರ್ಟ್ ಬುಕ್ಕಿನಲ್ಲಿ ಬರೆದಿದ್ದೀಯಂತೆ. ನೀನು ಹೋದತಕ್ಷಣ ಮೆಡಿಕಲ್ ಆಫೀಸರ್ ಚಕ್ರಪಾಣಿ ರೋಗಿಗಳ ಶೋಧನೆಗೆ ಬಂದಾಗ ರಾಮರಾಯರು ಸತ್ತುಬಿದ್ದಿರಲು ಕಾರಣ ? ಅಲ್ಲ, ಮಿಸ್ಟರ್ ಷಣ್ಮುಗಂ, ಒಟ್ಟಿನಲ್ಲಿ ಬೆಳಗ್ಗೆ ಸತ್ತುಹೋದ ರಾಮರಾಯರ ಸುದ್ದಿಯು ತಮಗೆ ತಿಳಿಯಲೇ ಇಲ್ಲ ಎಂಬ ಭಾವನೆಯು ಪ್ರತಿಯೊಬ್ಬರಲ್ಲಿ ನೆಲೆಸಲಿ ಎಂಬುದಾಗಿ ಒಂದೇ ಉಸುರಿಗೆ ರಾಮರಾಯರು ಸತ್ತುಹೋದರೇ ! ಎಂದು

ಆಶ್ಚರ್ಯಪಡುತ್ತೀರೇ! ಅವರು ಸಾಯಲು ವಿಷ ಕೊಟ್ಟವರು ಯಾರು? ವಿಷ ಕೊಡಲು ಹೇಳಿದವರು ನಿನಗೆ ಕೊಟ್ಟ ಬಹುಮಾನವೆಷ್ಟು?"

ಷಣ್ಮುಗಂ ನಗಲಾರಂಭಿಸಿದ. "ಇಲ್ಲಸಲ್ಲದ ಮಾತುಗಳನ್ನು ಪ್ರಯೋಗಿಸಿ ನನ್ನನ್ನು ಹುಚ್ಚನಂತೆ ಮಾಡುತ್ತಿದ್ದಾರಲ್ಲಾ ಸಾರ್. ಈ ವಿಷಯದಲ್ಲಿ ನಿಜವಾಗಿಯೂ ನನಗೊಂದೂ ತಿಳಿಯದು. ನಾನು ಎಂದಿನಂತೆಯೇ ರೋಗಿಗಳನ್ನು ಪರೀಕ್ಷಿಸಿ ಎಲ್ಲರೂ ಸಜೀವರಾಗಿರುವಂತೆಯೇ ನಾನು ನನ್ನ ಡ್ಯೂಟಿಯನ್ನು ನನ್ನ ಹೆಂಡತಿಯ ಕೈಗೆ ಒಪ್ಪಿಸಿ ಬಂದೆ. ಆಕೆಯನ್ನು ವಿಚಾರಿಸಿದ್ದರೆ....?"

"ಆಕೆ ನಿನ್ನ ಹೆಂಡತಿಯೇ?"

"ಹೌದು."

"ನಿನಗೆ ಮದುವೆಯಾದದ್ದು ಯಾವಾಗ?"

"ನನಗೆ ಮದುವೆಯಾದದ್ದು....ಮ....ದು....ವೆ....ಯಾ....ದ....ದ್ದು" ಷಣ್ಮುಗಂ ಮಾತನ್ನು ತೊದಲಲು ಮೊದಲಾದ. ಆತನಿಗೆ ಮದುವೆಯಾದ ವಿಷಯ ಹೇಳಲು ಬಾಯಿ ಬರಲಿಲ್ಲ.

"ಹೇಳು ಮಿಸ್ಟರ್ ಷಣ್ಮುಗಂ. ನಿನಗೆ ಮದುವೆಯಾದದ್ದು ಯಾವಾಗ? ಮದುವೆಯಾಗಿ ಎಷ್ಟು ವರ್ಷಗಳಾಯಿತು?"

"ಸಾರ್. ಅದನ್ನು ಹೇಳಲು ನನಗೆ ಸಂಕೋಚವಾಗಿದೆ. ತಾವು ಏನೂ ತಿಳಿದುಕೊಳ್ಳದೇ ಇದ್ದರೆ ಅದನ್ನು ತಿಳಿಸಲು ಪ್ರಯತ್ನಪಡುತ್ತೇನೆ."

"ನಾನು ತಿಳಿದುಕೊಳ್ಳುವುದೇನಿದೆ ಮಿಸ್ಟರ್ ಷಣ್ಮುಗಂ. ಲೋಕದಲ್ಲಿ ನಾನಾರೀತಿಯ ಮದುವೆಯಾಗುತ್ತಿರುತ್ತೆ. ಶ್ರೀಮಂತರು ಶೃಂಗಾರ ಸೊಬಗುಗಳಿಂದ ಬಹಿರಾಡಂಬರವಾಗಿ ಸಹಸ್ರಾರು ರೂಪಾಯಿಗಳ ಖರ್ಚಿನಿಂದ ಮದುವೆ ಮಾಡುತ್ತಾರೆ. ಕೆಲವರು ಕೇವಲ ಸ್ವಲ್ಪ ಹಣದ ವೆಚ್ಚದಿಂದಲೇ ತಮ್ಮ ಯೋಗ್ಯತಾನುಸಾರ ಅಲ್ಪ ಬೆಲೆಯ ಒಡವೆ ವಸ್ತುಗಳನ್ನು ತೆಗೆದುಕೊಂಡು ಮದುವೆ ಮುಗಿಸುತ್ತಾರೆ. ಮತ್ತೆ ಕೆಲವರು ಕೇವಲ ಎರಡು ಹೂಮಾಲೆ, ಒಂದು ಅಮೂಲ್ಯವಾದ ಆಶೀರ್ವಾದ ಇವುಗಳಿಂದಲೇ ಮದುವೆ ಮಾಡಿಕೊಳ್ಳುತ್ತಾರೆ. ಅಂತಹದರಲ್ಲಿ ನಿನ್ನದು ಯಾವ ರಖಮ್ಮಿಗೆ ಸೇರಿದ್ದು ಎಂಬುದನ್ನು ತಿಳಿಸು."

"ಸಾರ್, ನನಗೇಕೋ ನಾಚಿಕೆಯಾಗುತ್ತಿದೆ. ಆದರೂ ಹೇಳುತ್ತೇನೆ, ಸಾರ್" ಷಣ್ಮುಗಂ ಹೇಳಲು ಸ್ವಲ್ಪ ನಾಚಿಕೆಗೊಂಡವನಂತೆ ತೋರಿತು. ಇನ್ಸ್‌ಪೆಕ್ಟರ ಪಕ್ಕದಲ್ಲಿ ಕೂತಿದ್ದ ಮತ್ತು ನೆರೆದಿದ್ದ ಕಾನ್ಸ್‌ಟೇಬಲ್‌ಗಳನ್ನು ಹೊರಗೆ ಹೋಗಿ ನಿಲ್ಲುವಂತೆ ಹೇಳಿದರು ಇನ್ಸ್‌ಪೆಕ್ಟರು.

ಎಲ್ಲರೂ ಹೊರಗೆ ಹೊರಟರು. ಇನ್ಸ್‌ಪೆಕ್ಟರೊಬ್ಬರೇ ಕೋಣೆಯಲ್ಲಿದ್ದರು.

"ಈಗ ಹೇಳು ಮಿಸ್ಟರ್ ಷಣ್ಮುಗಂ. ನಿನಗೆ ಮದುವೆಯಾದದ್ದು ಹೇಗೆ? ಎಷ್ಟು ದಿನವಾಯಿತು?"

"ನಾನು ಇಲ್ಲಿ ಮೆಡಿಕಲ್ ಕಾಲೇಜಿಗೆ ವಿದ್ಯಾಭ್ಯಾಸಕ್ಕೆಂದು ಬಂದೆ. ಎರಡು ವರ್ಷ ಮೆಡಿಕಲ್ ಕಾಲೇಜಿನಲ್ಲಿ ವಿದ್ಯಾಭ್ಯಾಸವನ್ನು ಮುಂದುವರಿಸಿದೆ. ನನ್ನ ಸ್ವಂತ ಊರು ತಮಿಳು ದೇಶದ ವೇಲೂರು. ನನ್ನ ತಂದೆತಾಯಿಯರು ಯಾರೂ ನನಗೆ ಮುಂದಿನ ವಿದ್ಯಾಭ್ಯಾಸಕ್ಕೆ ಸಹಾಯ ಮಾಡಲು ಸಮ್ಮತಿಸ ಲಿಲ್ಲ. ನನ್ನ ವಿದ್ಯಾಭ್ಯಾಸವನ್ನು ಮುಂದುವರಿಸಲು ಆಗಲಿಲ್ಲ. ಆದ್ದರಿಂದ ನಾನು ಎಲ್ಲಾದರೂ ಕೆಲಸ ಮಾಡಿ ದುಡ್ಡನ್ನು ಕೂಡಿಟ್ಟುಕೊಂಡು ನಂತರ ಇನ್ನೆರಡು ವರ್ಷ ಓದಿ ಡಾಕ್ಟರ್ ಪದವಿಯನ್ನು ಪಡೆಯಬಹುದು ಎಂದು ಕೊಂಡು ಈ ಕೆಲಸಕ್ಕೆ ಸೇರಿದೆ.

"ನಾನು ಕೆಲಸಕ್ಕೆ ಸೇರಿದ ಒಂದು ವಾರದೊಳಗಾಗಿ ನನ್ನ ಹೆಂಡತಿಯೂ ಅಲ್ಲೇ ಕೆಲಸಕ್ಕೆ ಸೇರಿದಳು. ಆಕೆಯ ಸ್ಥಿತಿಯೂ ನನ್ನಂತೆಯೇ ಇತ್ತು. ಆಕೆ ಜಾತಿಯಲ್ಲಿ ಅಯ್ಯಂಗಾರ್. ನಾನು ನಾಯ್ಡು ಜಾತಿಯವನು. ಆಕೆಗೂ ನನಗೂ ಬೆಂಗಳೂರಿನಲ್ಲಿ ಯಾರೂ ಇರಲಿಲ್ಲ.

"ನನಗೂ ಆಕೆಗೂ ಸ್ನೇಹ ಬೆಳೆಯಿತು. ಅದೂ ಒಂದೇ ಆಸ್ಪತ್ರೆಯ ಒಂದೇ ವಾರ್ಡಿನಲ್ಲಿ ಕೆಲಸ ಮಾಡುತ್ತಿದ್ದೆವು. ನಾನೂ ಆಕೆಯೂ ಕೆಲಸ ಮಾಡುವುದು ಬೇರೆ ಬೇರೆ ಸಮಯವಾಗಿದ್ದರೂ ಇಬ್ಬರಿಗೂ ಅನ್ಯೋನ್ಯ ಸ್ನೇಹ ಬೆಳೆಯಿತು. ಆಕೆ ತನ್ನ ಕಷ್ಟವನ್ನು ನನ್ನಲ್ಲಿ ತಿಳಿಸುತ್ತಿದ್ದಳು. ನಾನು ನನ್ನ ಕಷ್ಟಸುಖಗಳನ್ನು ಆಕೆಯ ಮುಂದಿಡುತ್ತಿದ್ದೆ. ಹೇಗೆಯೋ ಕೆಲವು ದಿನಗಳು ಕಳೆದ ನಂತರ ನಾವಿಬ್ಬರೂ ಪ್ರೇಮಿಗಳಾದೆವು. ಪ್ರೇಮಿಸಿ ಕೊಂಡೆವು. ನಾವಿಬ್ಬರೂ ಪೌರ್ಣಮಿಯ ದಿನ ಚಂದ್ರನೆದುರು ನಿಂತು

ನಮಸ್ಕರಿಸಿ ಸತಿ-ಪತಿಗಳಾದೆವು. ನನಗೂ ಆಕೆಗೂ ಶಾಸ್ತ್ರಸಂಪ್ರದಾಯದಂತೆ ಮದುವೆಯಾಗಿಲ್ಲ. ಮನಸ್ಸೇ ಮದುವೆ ಮಾಡಿಸಿತು."

"ಬಲು ಸೊಗಸಾಗಿದೆ ನಿಮ್ಮ ಈ ವಿಚಿತ್ರದ ಮದುವೆ। ಆಕೆಯ ಹೆಸರು ?"

"ನ....ಳಿ....ನಿ !"

"ಓಹೋ. ಸರಿ ಷಣ್ಮುಗಂ. ಅದಿರಲಿ. ಈಗ ಆಗಿರುವ ರಹಸ್ಯ ಪಾಷಾಣಪ್ರಯೋಗದ ಕೊಲೆಯ ಪತ್ತೆ ಹಚ್ಚೋಣ. ನೀವು ಖಂಡಿತ ಕೊಲೆ ಮಾಡಿಲ್ಲ ಅನ್ನುತ್ತೀರಿ. ಒಂದು ವೇಳೆ ವಾರ್ಡ್ ಡಾಕ್ಟರ್ ಕೊಲೆ ಮಾಡಿರಬಹುದೇ ?"

"ಛೆ ಛೆ, ಪಾಪ. ವಾರ್ಡ್ ಡಾಕ್ಟರ್ ಚಿನ್ನದಂತಹ ಮನುಷ್ಯ. ಅವರು ಆ ತರಹ ಕೊಲೆಪಾತಕ ಕೆಲಸಕ್ಕೆ ಕೈಹಾಕಲಾರರು. ಅವರನ್ನು ಕ್ಷಮಿಸಿ."

"ವಾರ್ಡ್‌ಬಾಯ್‌ಗಳೂ ಸಹಾ ಹಾಗೆಯೇ ಹೇಳುತ್ತಾರೆ. ಅವರೂ ಕೊಲೆ ಮಾಡಿಲ್ಲವೆಂದೇ ಹೇಳುತ್ತಾರೆ. ಮೆಡಿಕಲ್ ಆಫೀಸರ್ ಚಕ್ರಪಾಣಿ ಯವರು ಸುಳ್ಳು ಹೇಳಲಾರರು. ರಾಮರಾಯರಿಗೆ ವಿಷಹಾಕಿ ಕೊಂದಿದ್ದಾರೆ ಎಂಬುದಾಗಿ ಸುಳ್ಳು ಹೇಳಲು ಅವರಿಗೇನು ಹುಚ್ಚೇ ? ಹಾಗೆ ಹೇಳಿದರೆ ಅವರಿಗೆ ಬರುವ ಭಾಗ್ಯವೇನಿದೆ ? ಇದು ನಡೆದಿರುವಂತೆ ಮುಂದೆಯೂ ನಡೆಯಲು ಅಸ್ಪದವಿರಕೂಡದೆಂದು ಅವರು ಇಷ್ಟು ದೂರ ಕರೆದು ನಮಗೆ ವಿಷಯ ತಿಳಿಸಿದ್ದಾರೆ. ನಾನು ಒಂದು ಮಾತನ್ನು ಕೇಳಲೇ ?"

"ಕೇಳಿ ಸಾರ್ ಅದಕ್ಕೇನಂತೆ."

"ನಿಮ್ಮ ಹೆಂಡತಿ ನಳಿನಿಯೇ ಒಂದು ವೇಳೆ...."

"ಅವಳನ್ನು ಕ್ಷಮಿಸಿ ಸಾರ್. ಪಾಪ! ಆಕೆಗೇನು ಗೊತ್ತು ? ಹಸುವಿನಂತಹ ಗುಣ. ಅವಳ ಮೇಲೆ ಎಳ್ಳಷ್ಟೂ ಸಂದೇಹಪಡಬೇಡಿ."

"ಮತ್ತೆ ರಾಮರಾಯರು ವಿಷಪ್ರಾಶನದಿಂದ ಸಾಯಬೇಕೆಂದರೆ ಕಾರಣ ?"

"ಅದೇ ನಾನೂ ಯೋಚನೆ ಮಾಡುತ್ತಿದ್ದೇನೆ ಸಾರ್."

"ಬಹಳ ಯೋಚನೆ ಮಾಡಬೇಡ ಮಿಸ್ಟರ್ ಷಣ್ಮುಗಂ. ಒಂದುವೇಳೆ ನೀನೇ ಕೊಲೆ ಮಾಡಿದ್ದರೂ ಸರಿ, ನನ್ನಲ್ಲಿ ತಿಳಿಸು. ಇಲ್ಲಿ ಯಾರೂ ಇಲ್ಲ.

ನೀನೂ ನಾನೂ ಇಬ್ಬರೇ ಈ ಕೋಣೆಯಲ್ಲಿ ಈಗಿರುವವರು. ರಹಸ್ಯವನ್ನು ಮುಚ್ಚಿಡಬೇಡ. ಅದು ಅಧಿಕಾರ ಧೋರಣೆಯಿಂದ ಪರಸ್ಯವಾದರೆ ಶಿಕ್ಷೆ ಹೆಚ್ಚು. ನೀನು ಈಗ ನಿಜ ಹೇಳಿದರೆ ನೀನು ತಪ್ಪಿಸಿಕೊಳ್ಳುವ ಮಾರ್ಗವನ್ನು ಹುಡುಕಬಹುದು" ಎಂದು ಹೇಳಿದರು ಇನ್ಸ್‌ಪೆಕ್ಟರು. ಹೇಗಾದರೂ ಯಾವ ಉಪಾಯದಿಂದಲಾದರೂ ಷಣ್ಮುಗಂ ಬಾಯಿಂದ ಕೊಲೆಗೆ ಕಾರಣ ತಿಳಿದುಕೊಳ್ಳಬೇಕೆಂದು ತಂತ್ರದಿಂದ ಮಾತನಾಡುತ್ತಿದ್ದರು. ಆದರೆ ನಿರಪರಾಧಿಯಾದ ಷಣ್ಮುಗಂ ಇನ್ಸ್‌ಪೆಕ್ಟರ ಮಾತಿಗೆ ಯಾವ ಪ್ರತ್ಯುತ್ತರವನ್ನೂ ಕೊಡಲಿಲ್ಲ.

ಮೆಡಿಕಲ್ ಆಫೀಸರ್ ಚಕ್ರಪಾಣಿಯವರು "ನನಗೆ ಷಣ್ಮುಗಂನ ಮೇಲೆಯೇ ಸಂದೇಹವಿದೆ. ಆತನೇ ಕೊಲೆ ಮಾಡಿರಬೇಕೆಂದು ನನ್ನ ಊಹೆ. ಹೇಗಾದರೂ ಸರಿ; ಆತನನ್ನು ಒಮ್ಮೆ ವಿಚಾರಿಸಿ ನೋಡಿ" ಎಂದು ನನ್ನಲ್ಲಿ ಹೇಳಿದರು. ಅದಕ್ಕಾಗಿಯೇ ನಿನ್ನನ್ನು ಇಲ್ಲಿಗೆ ಕರೆತರುವಂತೆ ಹೇಳಿ ಕಳುಹಿಸಿದೆ.

"ಖಂಡಿತ ಹೇಳುತ್ತೇನೆ ಸಾರ್. ಪ್ರಮಾಣ ಮಾಡಿ ಹೇಳುತ್ತೇನೆ ಸಾರ್. ಈ ವಿಷಯ ನನಗೊಂದೂ ತಿಳಿಯದು."

"ಸರಿ. ಹಾಗಾದರೆ ಬೆಳಗ್ಗೆ ಆರು ಘಂಟೆಗೆಗೆಲ್ಲಾ ಡ್ಯೂಟಿ ಮುಗಿಸಿಕೊಂಡು ಹೊರಟು ಹೋದೆಯಲ್ಲಾ ಏಳು ಗಂಟೆಗೆಲ್ಲ ಎಲ್ಲಿಗೆ ಹೋಗಿದ್ದೆ?"

"ನನ್ನ ಸ್ನೇಹಿತನೊಬ್ಬನು ಇಲ್ಲಿಗೆ ಬಂದಿದ್ದಾನೆ. ಆತನು ಕಂಟೋನ್ಮೆಂಟಿನ ಒಂದು ಹೋಟಲಿನಲ್ಲಿ ಇಳಿದುಕೊಂಡಿದ್ದಾನೆ. ಆತನನ್ನು ನೋಡಿಕೊಂಡು ಬರಲು ಹೋಗಿದ್ದೆ ಸಾರ್."

"ಮನೆಗೆ ಹಿಂತಿರುಗಿದ್ದು ಯಾವಾಗ?"

"ನನ್ನನ್ನೇಕೆ ಹೀಗೆ ಪುನಃ ಪುನಃ ಪ್ರಶ್ನೆ ಮಾಡುತ್ತಿದ್ದೀರಿ ಸಾರ್. ಈ ವಿಷಯ ನನಗೊಂದೂ ತಿಳಿಯದು. ನನ್ನನ್ನು ವಿಚಾರಿಸಿ ವೃಥಾ ತೊಂದರೆ ಪಟ್ಟು ಖಾಲಿಯಾಗುವುದರ ಬದಲು ಬೇರೆ ಯಾರನ್ನಾದರೂ ವಿಚಾರಿಸಬಹುದು."

"ಬೇರೆ ಯಾರನ್ನೂ ವಿಚಾರಿಸಿ ಪ್ರಯೋಜನವಿಲ್ಲ ಮಿಸ್ಟರ್ ಷಣ್ಮುಗಂ. ದಯವಿಟ್ಟು ಹೇಳಿಬಿಡಿ. ನೀವು ಕೊಲೆ ಮಾಡಿದ್ದು ಯಾರಿಂದ?"

"ಇನ್ನು ನೀವು ಯಾವ ಪ್ರಶ್ನೆ ಕೇಳಿದರೂ ಉತ್ತರ ಕೊಡಲಾರೆ ಸಾರ್" ಷಣ್ಮುಗಂನಿಗೆ ರೇಗಿತು.

ಪತ್ತೇದಾರ ಥಾಮಸ್ ತಮ್ಮ ಕೆಲಸವನ್ನು ಮುಗಿಸಿಕೊಂಡು ರೈಲ್ವೆ ಸ್ಟೇಷನ್ನಿನಿಂದ ಪೋಲೀಸ್ ಸ್ಟೇಷನ್ನಿಗೆ ಬಂದರು. ಇನ್ಸ್ಪೆಕ್ಟರು ಆಫೀಸ್ ರೂಮಿನಲ್ಲಿ ಕಾಣಿಸಲಿಲ್ಲ.

"ಒಳಗೆ ರಹಸ್ಯ ಕೊಠಡಿಯಲಿ ಯಾರೊಂದಿಗೋ ಮಾತಾಡುತ್ತಿದ್ದಾರೆ" ಎಂಬುದಾಗಿ ಕಾನ್ಸ್ಟೇಬಲನು ಹೇಳಿದ.

"ನಾನು ಬಂದಿರುವುದಾಗಿ ಇನ್ಸ್ಪೆಕ್ಟರಿಗೆ ತಿಳಿಸು."

ಇನ್ಸ್ಪೆಕ್ಟರ ಬಳಿ ಕಾನ್ಸ್ಟೇಬಲ್ ಹೋಗಿ ಥಾಮಸ್ ಬಂದಿರುವುದಾಗಿ ತಿಳಿಸಿದ. ಇನ್ಸ್ಪೆಕ್ಟರು ಥಾಮಸ್‌ರವರನ್ನು ಬರಮಾಡಿಕೊಂಡರು.

ಎದುರಿಗೆ ನಿಂತಿದ್ದ ಷಣ್ಮುಗಂನನ್ನು ನೋಡಿ, "ಇವನ್ಯಾರು ಇನ್ಸ್ಪೆಕ್ಟರೆ ?"ಎಂದು ಕೇಳಿದರು ಥಾಮಸ್.

"ಇವನೇ ವಿನ್ಸೆಂಟ್ ಆಸ್ಪತ್ರೆಯ ಫಸ್ಟ್ ವಾರ್ಡಿನ ಮೇಲ್ ನರ್ಸ್ ಷಣ್ಮುಗಂ. ರಾತ್ರಿ ಡ್ಯೂಟಿಯನ್ನು ಗಮನಿಸುತ್ತಿದ್ದವನು. ಆ ಹಗಲು ಡ್ಯೂಟಿಯ ನರ್ಸ್ ಈತನ ಪ್ರೇಯಸಿ ನಳಿನಿ. ನಾನು ಕೇಳುವಷ್ಟು ಕೇಳಿದೆ. ಆದರೆ 'ಇವೆಲ್ಲವೂ ನನಗೆ ತಿಳಿಯದು. ನಾನು ನಿರಪರಾಧಿ' ಎಂದು ಒಂದೇ ಮಾತಿನಲ್ಲಿ ಎಗರಿಸಿಬಿಡುತ್ತಿದ್ದಾನೆ. ಇವನು ಆಡುವ ಮಾತು ನೋಡಿದರೆ ನನಗೂ ಇವನ ಮೇಲೆ ಸಂದೇಹ ಸಡಿಲವಾಗುತ್ತೆ. ಮುಂದೇನು ಮಾಡಬೇಕೆಂಬುದನ್ನು ತೋಚದೆ ಇದ್ದೇನೆ ಪತ್ತೇದಾರರೆ. ನೀವೇ ಇದಕ್ಕೊಂದು ಉಪಾಯ ಹುಡಕಬೇಕು."

ಪತ್ತೇದಾರರು ಷಣ್ಮುಗಂ ಮುಖವನ್ನು ದುರುಗುಟ್ಟುತ್ತಾ ನೋಡಿದರು. ಷಣ್ಮುಗಂ ಮುಖದ ಮೇಲೆಲ್ಲಾ ಬೆವರು ಹನಿಗಳು ಮುತ್ತುಗಳಂತೆ ಕಂಡು ತೊಟ್ಟಿಕ್ಕುತ್ತಿತ್ತು. ಪತ್ತೇದಾರರಿಗೆ ಷಣ್ಮುಗಂನ ಮೇಲೆ ಸಂಶಯವಿಲ್ಲದಿದ್ದರೂ ಒಂದೆರಡು ಕಠಿಣವಾದ ಮಾತುಗಳನ್ನಾಡಿದರು.

"ಖಂಡಿತ ಹೇಳಿಬಿಡು ಷಣ್ಮುಗಂ. ವೃಥಾ ಏಟು ತಿಂದು ಸಾಯಬೇಡ" ಎಂದು ಗದರಿಸಿದರು. ಷಣ್ಮುಗಂ ಯಾವ ಉತ್ತರವನ್ನೂ ಕೊಡಲಿಲ್ಲ.

ಕಾನ್ಸ್ಟೇಬಲನನ್ನು ಕರೆದು ಲಾರಿಯಿಂದ ಎರಡೇಟನ್ನು ಬಿಗಿಯಾಗಿ ಬಿಗಿಯಲು ಹೇಳಿದರು. ಷಣ್ಮುಗಂನಿಗೆ ಆ ಲಾಠಿಯು ಏಟು ತೀರ ಹೊಸದು. ಪಾಪ ಕೆಳಗುರುಳಿದ. ನೋವಿಗಾಗಿ ಕೆಳಗೆ ಬಿದ್ದು ಹೊರಳಾಡಿದ. ಆದರೂ ಇನ್ಸ್ಪೆಕ್ಟರನಿಗೆ ಕನಿಕರ ಹುಟ್ಟಲಿಲ್ಲ. ಪತ್ತೇದಾರರು ಷಣ್ಮುಗಂನನ್ನು ಸ್ಟೇಷನ್ನಿನಲ್ಲಿಯೇ ಇರಿಸಿಕೊಂಡಿರುವುದೇ ಉತ್ತಮ ಎಂದು ಹೇಳಿದರು.

ಷಣ್ಮುಗಂ ನಿಜವಾಗಿಯೂ ನಿರಪರಾಧಿಯಾದರೂ ಆತನು ಕೊಡುವ ಪ್ರತ್ಯುತ್ತರ, ಮೌನ, ಭಯಗ್ರಸ್ಥಮುಖ, ಸಂಕೋಚ ಇವೆಲ್ಲವೂ ಎಂಥವನನ್ನೂ ಸಂದೇಹಕ್ಕೀಡುಮಾಡುತ್ತಿತ್ತು. ಆದ್ದರಿಂದಲೇ ಪತ್ತೇದಾರರು ಷಣ್ಮುಗಂನನ್ನು ಪೋಲೀಸ್ ಸ್ಟೇಷನ್ನಿನಲ್ಲಿಯೇ ಇರಿಸಿಕೊಂಡಿದ್ದು.

ಷಣ್ಮುಗಂ ಕಣ್ಣೀರ್ಗರಿಸಿದ. ರಾತ್ರಿ ಎಂಟು ಘಂಟೆಯಾಯಿತು. ಡ್ಯೂಟಿಗೆ ಬೇರೆ ಹೋಗಬೇಕಾಗಿತ್ತು. ಮೆಡಿಕಲ್ ಆಫೀಸರಿಗೆ ಲೀವ್ ಲೆಟರನ್ನೂ ಕೊಟ್ಟಿರಲಿಲ್ಲ. ಒಂದು ವೇಳೆ ಕೆಲಸದಿಂದ ವಜಾಮಾಡಿಬಿಟ್ಟರೆ ನನ್ನ ಗತಿಯೇನು ಎಂದು ಸಂಕಟಪಡುತ್ತಿದ್ದ.

ರಾತ್ರಿ ಎಂಟು ಘಂಟೆಯಾದರೂ ಷಣ್ಮುಗಂ ಹೆಂಡತಿ ನಳಿನಿ ಷಣ್ಮುಗಂನನ್ನು ಕಾಣಲು ಬರಲಿಲ್ಲ. ಅವನ ವಿಷಯದ ಬಗ್ಗೆ ಗಮನವೇ ಕೊಡಲಿಲ್ಲ.

ಹೊರಗಡೆಯಿಂದ ಓಡಿಬಂದ ಕಾನ್ಸ್ಟೇಬಲನೊಬ್ಬ ಇನ್ಸ್ಪೆಕ್ಟರ ಬಳಿ ಓಡಿ ಬಂದು "ಸಾರ್, ರಜಾಕ್ ಸಾಹೇಬ್ ಪುನಃ ಇಲ್ಲಿಗೆ ಬಂದಿದ್ದಾನೆ. ಈಗ ಚಿಕ್ಕಪೇಟೆ ಕಡೆ ಹೋಗುತ್ತಿದ್ದ. ಒಳ್ಳೆಯ ಸೂಟು ಬೂಟು ಹಾಕಿಕೊಂಡಿದ್ದಾನೆ. ಸುಮಾರು ಒಂದು ವರ್ಷದಿಂದ ಕಾಣದಿದ್ದವನು ಈಗ ಇದ್ದಕ್ಕಿದ್ದಂತೆ ಬಂದಿದ್ದಾನೆ" ಎಂದನು.

"ನಾವು ಆತನನ್ನು ಸಂಜೆಯೇ ನೋಡಿದ್ದೇವೆ. ಆತನೊಂದಿಗೆ ಮತ್ತ್ಯಾರಾದರೂ ಇದ್ದರೆ?"

"ಯಾರೋ ಇಬ್ಬರು ಹೆಂಗಸರು, ಒಬ್ಬ ಹುಡುಗ ಇದ್ದ."

"ಸರಿ. ನೀನು ಹೋಗು" ಎಂದು ಕಾನ್ಸ್ಟೇಬಲನನ್ನು ಕಳುಹಿಸಿದರು.

ಪತ್ತೇದಾರರಿಗಂತೂ,ರಜಾಕ್ ಈ ಊರಿಗೆ ಬಂದಿರುವುದು ಒಂದು ಬೆಟ್ಟವನ್ನು ತಲೆಯಮೇಲೆ ಹೊತ್ತಂತಾಗಿತ್ತು. ರಜಾಕ್‌ನೊಂದಿಗೆ ಕಳೆದ

ಎರಡು ವರ್ಷದ ಹಿಂದೆ ಪತ್ತೇದಾರರು ಪಟ್ಟ ಕಷ್ಟ ಹೇಳತೀರದು. ರಜಾಕ್ ಒಬ್ಬ ಗುಂಪು ಕಳ್ಳ. ಯಾವ ಖೈದಿಯೇ ಆಗಲೀ, ಯಾವ ಅಪರಾಧಿಯೇ ಆಗಲೀ ಆತನ ಗುಂಪಿಗೆ ಸೇರಿದರೆ ಸಾಕು,ಎಂತಹವರೂ ಕಂಡುಹಿಡಿಯಲು ಆಗದು. ಅದಲ್ಲದೆ ರಜಾಕ್‌ಗೆ ಪತ್ತೇದಾರ ಥಾಮಸ್‌ರ ಮೇಲೆ ಒಂದು ಕಣ್ಣು. ಥಾಮಸ್‌ರವರನ್ನು ಹೇಗಾದರೂ ಮಾಡಿ ಪರಲೋಕಕ್ಕೆ ಕಳುಹಿಸಿಬಿಟ್ಟರೆ ನಂತರ ತನ್ನ ಗೋಜಿಗೆ ಯಾರೂ ಬರಲಾರರು. ಬರಲು ಸಾಧ್ಯವೂ ಇಲ್ಲವೆಂದು ತೀರ್ಮಾನಮಾಡಿಕೊಂಡಿದ್ದ.

ಪತ್ತೇದಾರ ಥಾಮಸ್‌ರವರಿಗೂ ರಜಾಕ್‌ನನ್ನು ಕಂಡುಹಿಡಿದು ಪತ್ತೆ ಮಾಡಿ ಜೀವಾವಧಿ ಶಿಕ್ಷೆಗೆ ಗುರಿಮಾಡಿದ ಹೊರತೂ ತನ್ನ ಆತ್ಮಕ್ಕೆ ಶಾಂತಿಯಿಲ್ಲವೆಂದುಕೊಂಡಿದ್ದರು.

ಇನ್ಸ್ಪೆಕ್ಟರು ಆಲೋಚನೆಮಾಡುತ್ತಿದ್ದ ಪತ್ತೇದಾರರನ್ನು ಕಂಡು, "ಇಂತಹ ಚಿಲ್ಲರೆ ವಿಷಯಗಳಿಗೆಲ್ಲಾ ಇಷ್ಟು ಯೋಚನೆ ಮಾಡಬೇಡಿ ಥಾಮಸ್. ಸಮಯಕಾದು ನಮ್ಮ ಪೋಲೀಸ್ ಪಡೆಯನ್ನು ಕಳುಹಿಸಿದರೆ ರಜಾಕನ ಗುಂಪನ್ನು ಚದುರಿಸಿಬಿಡುತ್ತೆ. ಭಯಪಡಬೇಡಿ. ಪ್ರಯತ್ನ ಪಡೋಣ" ಎಂದು ಸಮಾಧಾನ ಹೇಳಿದರು.

೪

ರಾತ್ರಿ ಒಂಭತ್ತು ಘಂಟೆಯಾಯಿತು. ಷಣ್ಮುಗಂನ ಹೆಂಡತಿ ನರ್ಸ್ ನಳಿನಿ ಮನೆಯಲ್ಲಿ ಹಾಸಿಗೆಯ ಮೇಲೆ ಬಿದ್ದಿದ್ದಳು. ಆಕೆಗೆ ನಿದ್ರೆ ಹತ್ತಿರಲಿಲ್ಲ. ರಾತ್ರಿ ಸರಿಯಾಗಿ ಊಟವನ್ನೂ ಮಾಡಿರಲಿಲ್ಲ. ಪಕ್ಕದ ಮನೆಯವರು ಷಣ್ಮುಗಂನನ್ನು ಯಾರೋ ಪೋಲೀಸರು ಬಂದು ಕರೆದುಕೊಂಡು ಹೋದರೆಂದು ಹೇಳಿದ್ದರು. ಅವರು ಆ ಮಾತು ಹೇಳಿದ್ದನ್ನು ಕೇಳಿದ ಕ್ಷಣದಿಂದ ನಳಿನಿಯ ಮನಸ್ಸು ಮರುಕಗೊಂಡಿತು. ಪೋಲೀಸರು ಷಣ್ಮುಗಂನನ್ನು ಎಷ್ಟು ಹೊಡೆಯುತ್ತಾರೆಯೋ ಎಂದುಕೊಳ್ಳುತ್ತಿದ್ದಳು. ಒಂದುವೇಳೆ ಏಟನ್ನು ತಡೆಯಲಾರದೆ ತಾನೇ ಕೊಲೆ ಮಾಡಿದೆನೆಂದು ಒಪ್ಪಿಕೊಂಡರೆ ನಾನು ಯಾರೊಂದಿಗೆ ಬಾಳಲಿ—ಎಂಬುದಾಗಿ ಮನಸ್ಸು ಓಡಿಸುತ್ತಿದ್ದಳು.

ಮತ್ತೊಮ್ಮೆ – ಷಣ್ಮುಗಂ ಸಿಕ್ಕಿಬಿದ್ದರೆ ನನಗಾಗುವ ನಷ್ಟವೇನು?

ನನಗಾದರೋ ರಾರ್ಜ ಮಾತು ಕೊಟ್ಟಿರುವನಲ್ಲ – ಅದೂ ಅವನ ಪ್ರೇಯಸಿಯಂತೆ ನೋಡಿಕೊಳ್ಳುವುದಾಗಿ ! ನನಗೂ ಈ ದರಿದ್ರ ಕೆಲಸದಿಂದ ಪಾರಾಗುತ್ತೆ. ಅತಿ ಮುಂಜಾನೆ ಆರು ಘಂಟೆಗೆಲ್ಲಾ ಆಸ್ಪತ್ರೆಯ ಗೇಟನ್ನು ದಾಟಬೇಕು. ಪ್ರತಿ ದಿನದ ಇಪ್ಪತ್ತನಾಲ್ಕು ಘಂಟೆಗಳಲ್ಲಿಯೂ ರೋಗಿಗಳ "ಅಯ್ಯೋ, ಅಪ್ಪಾ, ಅಮ್ಮಾ." ಒಂದು ದಿನವಾದರೂ ಒಂದು ಸುಶ್ರಾವ್ಯ ಕೊರಳಿನಿಂದ ಹಾಡು – ಶುಭ ಸೂಚನೆ – ಸಂತೋಷ ಸಮಾರಂಭ – ಮನ ರಂಜನೆಯ ಮಾತು – ಇವೊಂದೂ ಬೇಡವೇ ?

ಸಾಕಪ್ಪ. ನನ್ನ ಜೀವನದಲ್ಲಿ ಸರಿಯಾದ ಒಂದು ಮಾರ್ಗ ಸಿಕ್ಕಿ ಹೋಯಿತು. ಷಣ್ಮುಗಂ ನಿಜವಾಗಿಯೂ ಪೋಲೀಸರ ಅಡ್ಡಪ್ರಶ್ನೆಗಳಲ್ಲಿ ತಗುಲಿಬಿದ್ದು ತಂಟೆಯಿಲ್ಲದೆ ಜೈಲಿಗೆ ಹೋಗಿಬಿಟ್ಟರೆ ಸಾಕು. ಒಂದು ವೇಳೆ ಅವನಿಗೆ ಶಿಕ್ಷೆಯಾಗದೆ ಬೇರೊಬ್ಬರ ಮೇಲೆ ಸಂದೇಹ ಬಂದರೂ ಕಷ್ಟ – ಏನು ಕಷ್ಟ ಮಹಾ – ನಿನ್ನ ಮೇಲೆ ನನಗೆ ಇಷ್ಟವಿಲ್ಲ – ನೀನೇನು ನನಗೆ ತಾಳಿ ಕಟ್ಟಿದ ಗಂಡನೇ – ಎಂದು ಕೇಳಿಬಿಡುತ್ತೇನೆ. ರಾರ್ಜ ನನ್ನನ್ನು ಎಡಬಿಡದೆ ನೋಡಿಕೊಳ್ಳುತ್ತಾನೆ. ಸಾಕು ನನ್ನ ಜೀವನ.

ನಳಿನಿ ಹಾಸಿಗೆಯಲ್ಲಿ ಮಲಗಿದ್ದಂತೆಯೇ ಸಾವಿರಾರು ಯೋಚನೆ ಮಾಡಿ ಹಿತವಾದುದಕ್ಕೆ ಸಂತೋಷಪಟ್ಟು ಸಂದೇಹ ವಿಷಯಗಳಿಗೆ ಹೆದರಿ ಬೆದರಿ ಸಂಕಟಪಟ್ಟು ಚಪಲ ತೀರಿಸಿಕೊಳ್ಳುತ್ತಿದ್ದಳು.

ರಾತ್ರಿ ಹತ್ತು ಘಂಟೆಯಾಯಿತು. ಮನೆಯಲ್ಲಿ ಯಾರೂ ಇಲ್ಲ. ಜೋರಾದ ಮಳೆ. ಅದಲ್ಲದೆ ಬಿರುಗಾಳಿ. ಎಲೆಕ್ಟ್ರಿಕ್ ದೀಪಗಳೆಲ್ಲವೂ ಆರಿಹೋಯಿತು. ಕತ್ತಲೆ ಕವಿಯಿತು. ಮನೆಯಲ್ಲಿ ಸೀಮೆ ಎಣ್ಣೆ ಇರಲಿಲ್ಲ. ಮೇಣದಬತ್ತಿಯೇನೋ ಇತ್ತು. ಆದರೆ ಹೊತ್ತಿಸಲು ಬೆಂಕಿ ಪೆಟ್ಟಿಗೆಯು ಹುಡುಕಿದಾಗ ಸಿಗಲಿಲ್ಲ. ಮಂಚದಿಂದ ಕೆಳಗಿಳಿಯಲು ನಳಿನಿಗೆ ಬೆದರಿಕೆ.

ಮಳೆಗಾಳಿಯ ದೆಸೆಯಿಂದ ಕಿಟಕಿಯ ಬಾಗಿಲುಗಳು ರಪ್ ರಪ್ ನೆ ಬಡಿದುಕೊಳ್ಳುತ್ತಿತ್ತು. ಆ ಕಿಟಕಿಯ ಬಾಗಿಲುಗಳನ್ನು ಮುಚ್ಚಿಬರಲು ಆಕೆಗೆ ಅದೆಂತಹ ಹೃದಯನಡುಕವೋ ಗೊತ್ತಾಗುತ್ತಿರಲಿಲ್ಲ.

ಬಾಗಿಲ ಕಿಟಕಿಯು ರಪ್ ಎಂದು ಗಾಳಿಗೆ ಬಡಿದರೆ ಹೃದಯದಲ್ಲಿ

ಗುಂಡು ಹಾರಿಸಿದಂತಾಗು ... ದೆಯನ್ನು ಬಲವಾಗಿ ಅದುಮಿಕೊಳ್ಳುತ್ತಿದ್ದಳು. ಬಾಯಾರಿಕೆ ಬೇರೆ !

ಒಬ್ಬಂಟಿಯಾಗಿರಲೂ ಮನಸ್ಸು ಬಾರದು. ಪೋಲೀಸರು ಒಂದು ವೇಳೆ ಬಂದುಬಿಡುತ್ತಾರೆಯೋ ? ಬಂದು ಕೇಳಿದರೆ ನಾನೇನು ಉತ್ತರ ಕೊಡಲಿ ? ನಾನು ಔಷಧವನ್ನು ರಾಮರಾಯರ ಬಾಯಿಗೆ ಸುರಿದಾಗ ಯಾರಾದರೂ ನನ್ನನ್ನು ನೋಡಿದರೇನೋ ?

ರಾತ್ರಿ ಹನ್ನೊಂದು ಘಂಟೆಯಾಯಿತು.

ದೂರದಲ್ಲೆಲ್ಲೋ ನಾಯಿಗಳ ಬಗುಳುವಿಕೆ. ಅಪಸ್ವರ ನಿನಾದ. ಕಿರ್ರೆಂದು ಹತ್ತಿರದ ಸ್ವಲ್ಪ ದೂರದಲ್ಲಿಯೇ ಕೂಗುತ್ತಾ ಬಹಳ ದೂರದವರೆವಿಗೂ ಕೂಗಿಕೊಂಡೇ ಹೋದಂತೆ ಹೆಣ್ಣಿನ ಧ್ವನಿ.

ಆದರೂ ಆಕೆಯ ಮನಸ್ಸಿನಲ್ಲಿ ಎಂದಾದರೊಂದು ದಿನ ಸಾವು ತಪ್ಪಿದ್ದಲ್ಲ ಎಂದುಕೊಂಡು ಯಾವುದಕ್ಕೂ ಹೆದರದೆ — ಕೆಲವು ನಿಮಿಷ ಎಲ್ಲಕ್ಕೂ ಹೆದರಿ — ಹಾಗೂ ಹೀಗೂ ಮಂಚದ ಮೇಲೆಯೇ ಪ್ರಪಂಚದ ಮೇಲಿನ ಆಗು ಹೋಗುಗಳನ್ನು ಸತ್ಯ ಅಸತ್ಯ, ಕರ್ಮ—ಧರ್ಮಗಳನ್ನೆಲ್ಲಾ ನೆನೆನೆನೆದು ಕೊರಗಿದಳು.

ಗಂಟೆ ಹನ್ನೆರಡು ಬಾರಿಸಿತು. ಢಕಢಕನೆಂದು ಯಾರೋ ಬಾಗಿಲನ್ನು ತಟ್ಟಿದಂತಾಯಿತು. ಈ ಅರ್ಧರಾತ್ರಿಯ ನಿಶಾವೇಳೆಯಲ್ಲಿ ಯಾರು ಬಾಗಿಲನ್ನು ತಟ್ಟುತ್ತಿರಬೇಕು ಎಂದು ಹೆದರಿದಳು. ಒಂದು ವೇಳೆ ಪೋಲೀಸರು ರಾಮರಾಯರ ಕೊಲೆಯ ಪತ್ತೆ ಹಚ್ಚಲು ಇಲ್ಲಿಗೆ ಬಂದಿದ್ದಾರೋ ಏನೋ ಎಂದು ತನ್ನಲ್ಲಿ ತಾನು ಲೆಕ್ಕ ಹಾಕುತ್ತಾ ಮಂಚದ ಮೇಲೆಯೇ ಬಿದ್ದಿದ್ದಳು.

ಪುನಃ ಬಾಗಿಲು ಆದಷ್ಟು ಗಟ್ಟಿಯಾಗಿ ತಟ್ಟಲು ಆರಂಭವಾಯಿತು. "ಬಾಗಿಲು ತೆಗೆಯಿರಿ ನರ್ಸ್" ಎಂಬ ಕೂಗು ಕೇಳಿಸಿತು.

ಆ ಧ್ವನಿಯು ನಳಿನಿ ಅಂದುಕೊಂಡಷ್ಟು ಅನುಮಾನಾಸ್ಪದವಾಗಿರಲಿಲ್ಲ. ಚಿರಪರಿಚಿತ ಧ್ವನಿಯಂತಿತ್ತು. ಏನಾದರೂ ಆಗಲಿ ಬಾಗಿಲು ತೆಗೆದೇ ಬಿಡೋಣ ಎಂದು ಕೊಂಡು ಬಾಗಿಲ ಬಳಿ ಹೋಗಿ ನಿಂತು,

"ಯಾರದು ?" ಎಂದಳು ಅಧಿಕಾರದರ್ಪದಿಂದ.

"ನಾನೇ, ರಾರ್ಜ....ನರ್ಸ್, ಬಾಗಿಲನ್ನು ಬೇಗ ತೆಗೆಯಿರಿ" ಎಂದು ಕೇಳಿಬಂತು.

ಬಾಗಿಲು ತೆಗೆದಳು. ಎದುರಿಗೆ ರಾರ್ಜ ತಲೆಗೆ ಮಫ್ಲರ್ ಮುಸುಕು ಹಾಕಿಕೊಂಡು ರೆಯ್ನಿ ಕೋಟ್ ಹಾಕಿಕೊಂಡು ಬಂದಿದ್ದ. ರೆಯ್ನಿ ಕೋಟು ನೆನೆದುಹೋಗಿತ್ತು.

"ಬನ್ನಿ ರಾರ್ಜ !! ಎನ್ನುತ್ತಾ ಕೋಣೆಯ ದೀಪದ ಸ್ವಿಚ್ಚನ್ನು ಹಾಕಿದಳು.

ರಾರ್ಜನನ್ನು ನೋಡಿ, "ಏನು ರಾರ್ಜ. ನೀವು ಮಳೆಯಲ್ಲೇ ನೆನೆದುಕೊಂಡು ಬಂದ ಹಾಗಿದ್ದೀರಿ. ಮಳೆ ಬಂದಿತ್ತೇನು ?" ಎಂದು ಕೇಳಿದಳು.

"ಸಂಜೆ ಏಳು ಗಂಟೆಯಿಂದ ಜಡಿ ಮಳೆ ಹಿಡಿದಿದೆ. ಅದಿರಲಿ—ನಿಮ್ಮ ಯಜಮಾನರು ಮನೆಯಲ್ಲಿಲ್ಲವೇನು ?"

"ಇಲ್ಲ. ಬೆಳಗ್ಗೆ ಆರು ಗಂಟೆಗೆ ಅವರನ್ನು ಆಸ್ಪತ್ರೆಯಲ್ಲಿ ನೋಡಿದಾಗಿನಿಂದ ಈವರೆಗೆ ಪುನಃ ಕಂಡಿಲ್ಲ."

"ಎಲ್ಲಿಗೆ ಹೋಗಿರಬೇಕು ನರ್ಸ್."

"ನಾನು ಹುಡುಕಿಕೊಂಡು ಬಂದು ನಂತರ ಹೇಳುತ್ತೇನೆ! ನನಗೆ ಗೊತ್ತಿದೆಯೇ ಆತನೆಲ್ಲಿಗೆ ಹೋಗಿದ್ದಾನೆಂದು ?"

"ಒಂದು ವೇಳೆ ಪೋಲೀಸರು ಕರೆದುಕೊಂಡು ಹೋಗಿದ್ದಾರೇನೋ ಎಂದು ನನಗೆ ಸಂದೇಹ."

"ಇದ್ದರೂ ಇರಬಹುದು. ತಪ್ಪು ಮಾಡಿದ್ದರೆ ಶಿಕ್ಷೆ ಅನುಭವಿಸಲಿ!"

"ನರ್ಸ್, ಈ ವಿಷಯ ನಮ್ಮಿಬ್ಬರ ವಿನಹ ಮತ್ಯಾರಿಗೂ ತಿಳಿಯಬಾರದು."

"ತಿಳಿಸಲು ಅಂತಹ ಸಂದರ್ಭವೇನಿದೆ? ಸಂದರ್ಭವೊದಗಿದರೆ ಖಂಡಿತ ತಿಳಿಸಲೇಬೇಕಾಗಬಹುದು."

"ನರ್ಸ್, ಏಕೆ ಹೀಗೆ ಮಾತನಾಡುತ್ತೀರಿ. ಸತ್ಯವಾಗಿ ಹೇಳುತ್ತೇನೆ. ನಿಮ್ಮ ಜೀವನಾದ್ಯಂತ ನೀವು ಈ ವಿಷಯವನ್ನು ಹೊರಗೆಡಹಬಾರದು."

"ಹೌದು. ನೀವು ಹೇಳಿದಂತೆಯೇ ಹೊರಗೆಡಹುವುದಿಲ್ಲ. ಆದರೆ ಒಂದು ಷರತ್ತಿನ ಮೇಲೆ. ಅದು ನನ್ನನ್ನು ನೀವು ನಿಮ್ಮ ಅರ್ಧಾಂಗಿಯ

ನ್ನಾಗಿ ಮಾಡಿಕೊಳ್ಳುತ್ತೇನೆಂದೂ, ನಾನು ನರ್ಸ್ ಕೆಲಸದಿಂದ ನಿವೃತ್ತಳಾಗಿ ನಿಮ್ಮ ಆಶ್ರಯದಲ್ಲೇ ಕಾಲ ಕಳೆಯಬೇಕೆಂದೂ, ಈ ಊರನ್ನು ಬಿಟ್ಟು ಬಹಳ ದೂರದ ಉತ್ತರ ದೇಶದ ಕಡೆ ಪ್ರಯಾಣ ಬೆಳೆಸಿ ಅಲ್ಲಿಯೇ ದೀರ್ಘಕಾಲ ಜೀವನ ಸಾಗಿಸಿಬಿಡಬೇಕೆಂದೂ, ಇದಕ್ಕೆ ಮೊದಲು ನಾನು ನಿಮ್ಮ ತಂದೆಯವರಿಗೆ ವಿಷ ಕುಡಿಸುವುದಕ್ಕೆ ಮುಂಚೆ ನೀವು ನನಗೆ ಆಸೆ ತೋರಿಸಿದ್ದಿರಿ. ಅದರಂತೆ ನೀವು ಚಾಚೂ ತಪ್ಪದೆ ನಡೆದುಕೊಳ್ಳಬೇಕು. ಹಾಗೆ ಒಂದು ವೇಳೆ ತಪ್ಪಿ ನಡೆದರೆ, ತಪ್ಪಿ ನಡೆಯಲು ಪ್ರಯತ್ನಪಡುವಂತಿದ್ದರೆ, ನಾನು ನನ್ನ ಸೇಡನ್ನು ತೀರಿಸಿಕೊಳ್ಳಲು ರಹಸ್ಯವನ್ನು ಪರಸ್ಯ ಮಾಡುವುದು ಯುಕ್ತವಲ್ಲವೇ ?"

"ನಿಮ್ಮ ಮಾತಿನ ಧೋರಣೆ ನನಗೆ ಸರಿಯಾಗಿ ಅರ್ಥವಾಗುತ್ತಿಲ್ಲ. ನರ್ಸ್, ನಾನಂತಹ ಕೆಡುಕನಲ್ಲ. ಕೊಟ್ಟ ಭಾಷೆಗೆ ತಪ್ಪುವ ತುಂಟನಲ್ಲ. ದಯವಿಟ್ಟು ಹೀಗೆಲ್ಲಾ ಕೆಟ್ಟ ಯೋಚನೆ ಮಾಡಿ ಕಷ್ಟಕ್ಕೀಡಾಗಬೇಡಿ."

"ಮತ್ತೆ ನೀವು ಹೇಳಿದ ಮಾತನ್ನು ನಾನು ಯಾವ ವಿಧಾನದಲ್ಲಿ ನಂಬುವುದಕ್ಕಾದೀತು ? ಒಂದು ಕೆಲಸ ಮಾಡಲೇ ?"

"ಹೇಳಿ."

"ನಾಳೆಯು ಬೆಳಗ್ಗೆ ಆಸ್ಪತ್ರೆಗೆ ರಿಸೈನ್ ಲೆಟರ್ ಕೊಟ್ಟುಬಿಡಲೆ ?"

"ಅರರೆ, ಈಗಲೇ ಹಾಗೆ ಮಾಡಬಾರದು ನರ್ಸ್."

"ಇನ್ನು ಮುಂದೆ ನನ್ನನ್ನು 'ನರ್ಸ್' 'ನರ್ಸ್' ಎಂದು ಕರೆಯಬೇಡಿ. ನಳಿನಿ ಎಂದು ಕರೆದು ಮಾತನಾಡಿಸಿ."

"ಹಾಗೆಯೇ ಆಗಲಿ ನಳಿನಿ. ಇಗೋ ನೋಡು. ಈಗಲೇ ಅಂದರೆ ನಾಳೆಯು ದಿನವೇ ನೀನು ಆಸ್ಪತ್ರೆಗೆ ಕೆಲಸ ಇಷ್ಟವಿಲ್ಲ ಎಂದು ಕಾಗದ ಬರೆದುಬಿಟ್ಟರೆ ನಿನ್ನ ಮೇಲೆ ಖಂಡಿತ ಸಂದೇಹವಾಗಿಬಿಡುತ್ತೆ. ನನ್ನ ತಂದೆ ಸತ್ತದ್ದು ಇಂದು ಬೆಳಗ್ಗೆ ಆರು ಘಂಟೆಗೆ. ಅದೂ ವಿಷಪ್ರಾಶನದಿಂದ ಸತ್ತಿರುವುದಾಗಿ ಆಸ್ಪತ್ರೆಯ ಮೆಡಿಕಲ್ ಆಫೀಸರೇ ತೀರ್ಮಾನಿಸಿ ಸುದ್ದಿಯನ್ನು ಪೋಲೀಸು ಇಲಾಖೆಗೆ ತಿಳಿಸಿದ್ದಾರೆ. ಈಗ ನನ್ನ ತಂದೆ ರಾಮರಾಯರು ಕೊಲೆಯಾದರೆಂದೇ ಭಾವಿಸಿದ್ದಾರೆ. ಕೊಲೆ ಮಾಡಿದವರು ಅಂದರೆ ವಿಷ ಕೊಟ್ಟವರು ಯಾರೆಂಬುದನ್ನು ಪತ್ತೆಮಾಡುವವರೆಗೂ ಅವರು ಸುಮ್ಮನಾಗು

ವುದಿಲ್ಲ. ಹೊಂಚುಹಾಕುತ್ತಲೇ ಇರುತ್ತಾರೆ. ಅದಕ್ಕಾಗಿ ನೀನು ಕೆಲವು ದಿನ ಆಸ್ಪತ್ರೆಗೆ ಎಂದಿನಂತೆ ಸಮಯಕ್ಕೆ ಸರಿಯಾಗಿ ಕೆಲಸಕ್ಕೆ ಹೋಗಿ ಬರುತ್ತಲೇ ಇರಬೇಕು. ಆಸ್ಪತ್ರೆಯಲ್ಲಿ ಯಾರ್‍ಯಾರು ಏನೇನು ಅಂದುಕೊಳ್ಳುತ್ತಾರೆಂಬುದನ್ನು ತಿಳಿದುಕೊಂಡು ನನ್ನ ಬಳಿ ಬಂದು ಹೇಳುತ್ತಿರಬೇಕು. ಆದಷ್ಟು ಜಾಗ್ರತೆ ನೀನು ಆಸ್ಪತ್ರೆಯಿಂದ ನಿವೃತ್ತಳಾಗುವಂತೆ ನಾನು ತಕ್ಕ ಏರ್ಪಾಡು ಮಾಡುತ್ತೇನೆ."

"ನೋಡಿದಿರಾ....ನಿಮ್ಮ ಕೆಲಸ ಮುಗಿಯಿತು! ಇನ್ನುಮೇಲೆ ನನ್ನನ್ನು ಏಮಾರಿಸಲು ಯಾವುದಾದರೂ ಒಂದು ನೆಪ ಹೇಳಿ ತಾವು ಪರಾರಿಯಾಗುವ ಯೋಚನೆ ಮಾಡುತ್ತಿದ್ದೀರೆಂದು ಕಾಣುತ್ತೆ."

"ನಳಿನಿ, ನೀನೇಕೆ ಹೀಗೆ ವೃಥಾ ಹೀನವಾದ ಯೋಚನೆಯನ್ನು ಮಾಡುತ್ತಿದ್ದೀಯೆ? ನಿನ್ನನ್ನು ಮೋಸಗೊಳಿಸುವ ಹಾಗಿದ್ದರೆ ಇಂತಹ ನಿಶಾರಾತ್ರಿಯಲ್ಲಿ ನಿನ್ನನ್ನು ಕಾಣಲು ಬರುತ್ತಿದ್ದೆನೇ?"

"ಈಗ ನೀವು ಬಂದಿರುವುದೂ ಸಹ ಮೋಸಗೊಳಿಸುವುದಕ್ಕಾಗಿಯೇ!"

"ಅಲ್ಲ ನಳಿನಿ, ಹಾಗೆ ತಿಳಿದುಕೊಳ್ಳಬೇಡ."

"ಹಾಗಾದರೆ ಒಂದು ಕೆಲಸ ಮಾಡಿ. ನಿಜವಾಗಿಯೂ ತಾವು ನನಗೆ ಅನ್ಯಾಯ ಮಾಡುವುದಿಲ್ಲವೆನ್ನುವ ಹಾಗಿದ್ದರೆ ನನ್ನಿಂದ ನೀವು ಹಣ ಸಾಲ ತೆಗೆದುಕೊಂಡಂತೆ ಒಂದು ಲಕ್ಷ ರೂಪಾಯಿಗೆ ಬಾಂಡ್ ಒಂದನ್ನು ಬರೆದು ಕೊಡಿ."

"ಅದಕ್ಕಾಗಿಯೇ ನೀನು ನನ್ನನ್ನು ಇಷ್ಟು ಪರೀಕ್ಷಿಸುತ್ತಿದ್ದೀಯೆಂದು ಕಾಣುತ್ತೆ. ನಾನು ಇಷ್ಟು ಮಾತ್ರ ಒಂದು ಲಕ್ಷಕ್ಕೆ ನಿನಗೆ ಬಾಂಡ್ ಬರೆದು ಕೊಡಲಾರೆನೆಂದು ತಿಳಿದುಬಿಟ್ಟೆಯಾ? ನನ್ನ ಪ್ರಾಣ ಬೇಕಾದರೂ ನಿನಗೆ ಒಪ್ಪಿಸಿಬಿಡುತ್ತೇನೆ. ನೀನು ಮಾಡಿದ ಉಪಕಾರಕ್ಕೆ ಪ್ರತ್ಯುಪಕಾರ ಏನು ಮಾಡಿದರೂ ಸಾಲದು. ಎಲ್ಲಿ, ಒಂದು ಬಿಳೀ ಪೇಪರ್, ಇಂಕ್‌ಬಾಟಲನ್ನು ಕೊಡು. ಬರೆದುಕೊಟ್ಟುಬಿಡುತ್ತೇನೆ."

ನಳಿನಿ ಉತ್ಸಾಹಭರಿತಳಾಗಿ ಮಂಚದಿಂದೆದ್ದು "ನೋಡೇಬಿಡುತ್ತೇನೆ. ನೀವು ಬರೆದುಕೊಡುತ್ತೀರೋ ಇಲ್ಲವೋ ಎಂಬುದನ್ನು" ಎನ್ನುತ್ತಾ ಪೇಪರ್ ಮತ್ತು ಇಂಕ್‌ಬಾಟಲನ್ನು ತಂದುಕೊಟ್ಟಳು.

ರಾರ್ಜ ಬರೆಯಲು ಮೊದಲಾದ. ಬರೆದು ಮುಗಿಯಿತು. ನಳಿನಿಯ ಕೈಗೆ ಕೊಟ್ಟ. ನಳಿನಿಯು ಕಾಗದವನ್ನು ಕೈಗೆ ತೆಗೆದುಕೊಂಡು ಓದಲು ಮೊದಲಾದಳು. ಅದರಲ್ಲಿ:–

"ಶ್ರೀಮತಿ ನಳಿನಿಯವರಿಗೆ ರಾರ್ಜ ಬರೆದುಕೊಟ್ಟ ಪತ್ರ.

"ನಾನು ನಿಮ್ಮಲ್ಲಿ ಆಗಾಗ ಹಣವನ್ನು ಕೈಸಾಲವಾಗಿ ತೆಗೆದುಕೊಳ್ಳುತ್ತಿದ್ದೆ. ಅಲ್ಲದೆ ನಮ್ಮ ಮನೆಯವರ ಅನಾರೋಗ್ಯದ ಚಿಕಿತ್ಸೆಗಾಗಿ ಬಂದು ನೋಡಿಕೊಳ್ಳುತ್ತಿದ್ದುದಕ್ಕಾಗಿ ಮತ್ತು ನಮ್ಮ ತಂದೆಯವರು ನಿಮಗೆ ಅವರ ಆಸ್ತಿಯಲ್ಲಿ ಐವತ್ತು ಸಾವಿರ ರೂಪಾಯಿಗಳನ್ನು ಕೊಡಬೇಕೆಂದು ನನ್ನಲ್ಲಿ ಹೇಳಿದ್ದರು. ಅದಕ್ಕಾಗಿಯೂ ಎಲ್ಲಾ ಸೇರಿ ಒಟ್ಟು ನಾನು ನಿಮಗೆ ಒಂದು ಲಕ್ಷ ರೂಪಾಯಿ ಸಾಲ ಕೊಡಬೇಕು. ನಿಮಗೆ ಕೊಡಬೇಕಾಗಿದ್ದ ಲಕ್ಷ ರೂಪಾಯಿಗಳನ್ನು ನಾನು ನನ್ನ ಜರೂರು ಕೆಲಸಕ್ಕಾಗಿ ಉಪಯೋಗಿಸಿಕೊಂಡಿದ್ದೇನೆ. ಅದನ್ನು ಜಾಗ್ರತೆ ಕೊಟ್ಟುಬಿಡುತ್ತೇನೆ. ಅದೂ ಅಲ್ಲದೆ ಒಂದು ಲಕ್ಷ ರೂಪಾಯನ್ನು ಇನ್ನು ಎರಡು ತಿಂಗಳಲ್ಲಿ ಕೊಡದೆ ಇದ್ದರೆ ನೀವು ನನ್ನ ಮೇಲೆ ಸಿವಿಲ್ ಕೇಸನ್ನು ಹಾಕಿ ಹಣ ವಸೂಲು ಮಾಡಿಕೊಳ್ಳಬಹುದು.

ಇತಿ,

ರಾರ್ಜ."

ಓದಿದ ಕಾಗದವನ್ನು ಒಂದೆರಡುಬಾರಿ ಓದಿ ಕಾಗದಕ್ಕೆ ಮುತ್ತುಕೊಟ್ಟು ಅದನ್ನು ಬಾಡಿಯೊಳಗೆ ಸಿಕ್ಕಿಸಿಕೊಂಡಳು.

"ಸರಿ. ನನಗೆ ದುಡ್ಡಿನ ಚಿಂತೆ ತೀರಿತು. ಇನ್ನು ನನ್ನ ಜೀವನದ ಗೆಳೆಯನ ಚಿಂತೆಗೇನು ಮಾಡಲಿ?"

"ಇಗೋ, ನಾನು ನಿನ್ನ ಮುಂದೆಯೇ ಇದ್ದೇನಲ್ಲ!"

"ನೀವು ಮುಂದಿದ್ದು ಪ್ರಯೋಜನವೇನಿದೆ? ಬಾಯಲ್ಲಿ ನಾನಿದ್ದೇನೆ, ನಾನಿದ್ದೇನೆ ಅನ್ನುತ್ತಿದ್ದೀರೇ ವಿನಃ ಕಾರ್ಯದಲ್ಲೊಂದೂ ಇಲ್ಲ."

"ಈಗ ಘಂಟೆ ಎರಡಾಗುತ್ತಾ ಬಂತು. ನಿನ್ನನ್ನು ನಾನು ನೋಡುವುದು ಯಾರೂ ಗಮನಿಸದೆ ಇರುವಂತೆ ನಾನು ಈ ಅರ್ಧರಾತ್ರಿಯಲ್ಲಿ ನೋಡಲು ಬಂದೆ. ಯಾರಿಗೂ ತಿಳಿಯದಂತೆ ನಾನು ಹೊರಟುಹೋಗಲೇಬೇಕು. ಬರುತ್ತೇನೆ ನಳಿನಿ...,"

"ನೋಡಿದಿರಾ, ನಿಮ್ಮ ವಂಚನೆ! ಹಸಿದ ಹೊಟ್ಟೆಯವನ ಮುಂದೆ ಕ್ಷೀರಾನ್ನವನ್ನು ಇಟ್ಟುಬಿಟ್ಟಮಾತ್ರಕ್ಕೇ ಅವನ ಹಸಿವು ನೀಗುತ್ತದೆಯೇ? ಅಂತೆಯೇ ನೀವು ನನ್ನ ಮುಂದೆ ವರ್ತಿಸುತ್ತಿದ್ದೀರಿ."

ನರ್ಸ್ ಳು ರಾತ್ರಿ ಮಲಗುವ ಉಡುಪನ್ನು ಹಾಕಿಕೊಂಡಿದ್ದಳು. ಮಂಚದ ಮೇಲೆ ನೆಟ್ಟಗೆ ಮಲಗಿದ್ದಳು. ಮೇಲೆ ಹೊದ್ದುಕೊಂಡಿದ್ದ ರಗ್ಗನ್ನು ರಾಜ್ ಬರೆದುಕೊಟ್ಟ ಬಾಂಡ್ ಓದುವುದರಲ್ಲಿ ತೆಗೆದುಬಿಟ್ಟದ್ದಳು. ಈಗ ಆಕೆ ತೊಟ್ಟುಕೊಂಡಿರುವುದು ಒಂದು ಸಣ್ಣ ಬಾಡಿ. ಅದು ಸ್ತನಗಳ ಮುಂಭಾಗವನ್ನು ಮಾತ್ರ ಮರೆಮಾಡಿತ್ತು. ಮಿಕ್ಕ ಎದೆಯ ಎಲ್ಲಾ ಭಾಗವೂ ಚೆನ್ನಾಗಿ ಕಾಣುವಂತಿತ್ತು. ಲಂಗ ಮಾತ್ರ ಕಟ್ಟಿಕೊಂಡಿದ್ದಳು. ಹಾಸಿಗೆಯ ಮೇಲೆ ಮಲಗಿದ್ದ ಆಕೆಯು ಎರಡು ಮೊಣಕಾಲನ್ನೂ ನಿಲುವಾಗಿ ನಿಲ್ಲಿಸಿ ಕೊಂಡಿದ್ದರಿಂದ ಲಂಗವು ಸರಿದು ಸೊಂಟದವರೆಗೂ ಬಂದಿತ್ತು. ತೊಡೆಗ ಳೆರಡೂ ಚೆನ್ನಾಗಿ ಕಾಣಿಸುತ್ತಿತ್ತು.

ನಳಿನಿಯ ಕಣ್ಣುಗಳು "ರಾಜ್, ನೀನು ಹತ್ತಿರ ಬಾ. ನಿನ್ನ ಮೇಲೆ ನನಗೆ ತುಂಬಾ ಆಸೆಯಾಗಿದೆ. ಅರ್ಧರಾತ್ರಿಯಲ್ಲಿ ಯಾರೂ ಇಲ್ಲದ ಏಕಾಂತ ಕೋಣೆಯಲ್ಲಿ ಹಾಸಿಗೆಯ ಮೇಲೆ ನಿನಗಾಗಿ ಹಾತೊರೆಯುತ್ತಾ ಅಂಗಾತವಾಗಿ ಮಲಗಿದ್ದೇನೆ. ಬೇಗನೆ ಬಂದು ನನ್ನನ್ನು ಆವರಿಸಿಕೋ" ಎನ್ನುವಂತಿತ್ತು.

ರಾಜ್ ನಳಿನಿಯನ್ನು ನೋಡಿದ. ಮೇಲ್ಛಾವಣಿಯ ಹೆಂಚಿನ ರಂಧ್ರ ಗಳಿಂದ ಗಾಳಿಯು ಬುಸ್ಸನೆ ಕೋಣೆಯೊಳಕ್ಕೆ ನುಗ್ಗುತ್ತಿದ್ದಿತು. ರಾಜ್‌ನ ಮೈ ಪುಲಕಿತವಾಯಿತು. ಮೈಯಲ್ಲಿರುವ ರೋಮಗಳು ನಿಮಿರಿ ನಿಂತಿತು. ಸರ್ರನೆ ಓಡಿಬಂದು ನಳಿನಿಯನ್ನು ಮಂಚದಮೇಲೆ ಹಾಗೆಯೇ ತಬ್ಬಿಕೊಂಡು ಮುತ್ತಿಟ್ಟ. ಹಾಗೆಯೇ ಮನ್ಮಥ ಲೀಲೆಗೂ ಮುಂದಾದ. ನಳಿನಿಯೂ ರಾಜ್‌ನೊಂದಿಗೆ ಸಹಕರಿಸಿದಳು. ಎರಡು ಹೃದಯಗಳೂ ಒಂದಾಯಿತು.

ಱ

ಇನ್ಸ್‌ಪೆಕ್ಟರ್ ಬಜ್ಜಯ್ಯ ಮತ್ತು ಪತ್ತೇದಾರ ಥಾಮಸ್‌ರವರು ಷಣ್ಮುಗಂ ನಿಗೆ ಕೊಡುತ್ತಿದ್ದ ದಂಡನೆಯು ವರ್ಣಿಸಲಸಾಧ್ಯ. ಮುಂಜಾನೆ ಐದು ಘಂಟೆಯಿಂದ ನಿಶಾರಾತ್ರಿಯವರೆಗೂ ಆತನಿಗೆ ಛಡಿ ಏಟುಗಳೂ ಮತ್ತು

ಕೊಲೆಗೆ ಸಂಬಂಧಪಟ್ಟ ಪ್ರಶ್ನೆಗಳೇ! ಷಣ್ಮುಗಂ ಎಷ್ಟು ವಿನಯದಿಂದಲೂ ಸತ್ಯದಿಂದಲೂ ತಾನು ಆ ಅಕ್ರಮ ಕೆಲಸದಲ್ಲಿ ತಲೆಯಿಟ್ಟಿಲ್ಲವೆಂದು ಬೇಡಿ ಕೊಂಡರೂ ಥಾಮಸ್ ಕೇಳಲಿಲ್ಲ.

ಆಸ್ಪತ್ರೆಯ ಮೆಡಿಕಲ್ ಆಫೀಸರು ಪೋಲೀಸ್ ಸ್ಟೇಷನ್‌ಗೆ ಫೋನ್ ಮಾಡಿದರು. "ವಿಷ ಕೊಟ್ಟವನು ಸಿಕ್ಕಿದನೇ? ಇಲ್ಲವೇ? .... ತಾವು ಪೋಲೀಸ್ ಅಧಿಕಾರಿಗಳಾಗಿದ್ದು, ಪೋಲೀಸ್ ಕೆಲಸದಲ್ಲಿ ನಿಪುಣರಾಗಿದ್ದು, ಕೇವಲ ವಿಷ ಕುಡಿಸಿದ ಒಬ್ಬನನ್ನು ಕಂಡುಹಿಡಿಯಲು ಎರಡು ದಿನಗಳಿಂದ ಪೇಚಾಡುತ್ತಿದ್ದೀರೆಂದು ಕಾಣುತ್ತೆ. ತಾವು ನಿಜವಾಗಿಯೂ ಎಷ್ಟು ಮಾತ್ರ ಶ್ರದ್ಧೆ ವಹಿಸಿ ಕೆಲಸ ಮಾಡುತ್ತಿದ್ದೀರೆಂಬುದು ತಮ್ಮ ಈ ಎರಡು ದಿನದ ಕೆಲಸ ದಿಂದ ಚೆನ್ನಾಗಿ ತಿಳಿಯುತ್ತಿದೆ.

"ನಿಮ್ಮ ಕೈಲಿ ಈ ಕೊಲೆ ಮಾಡಿದವನನ್ನು ಕಂಡು ಹಿಡಿಯಲು ಸಾಧ್ಯವೇ? ಅಸಾಧ್ಯವೇ? ಎಂಬುದನ್ನು ತಿಳಿಯಪಡಿಸಿ. ನಾನು ಇನ್ನೂ ಮೇಲಧಿಕಾರಿಗಳಿಗೆ ಸುದ್ದಿ ಮುಟ್ಟಿಸಿ ಕೊಲೆಗೆ ಸಂಬಂಧಪಟ್ಟವರೆಲ್ಲರನ್ನೂ ಕೊಲೆ ಮಾಡಿದವನನ್ನೂ ತಕ್ಷಣ ಹಿಡಿಯುವಂತೆ ಮಾಡುತ್ತೇನೆ.

"ರೋಗಿಗಳಿಗೆ ತವರುಮನೆಯಂತಿರುವ ವಿನ್ಸೆಂಟ್ ಆಸ್ಪತ್ರೆಯು ರೋಗಿಗಳ ಯಮಪುರಿಯಾಗಬಾರದೆಂಬುದು ನನ್ನ ಹಾರೈಕೆ. ನಾಳೆ ಯಾವ ವಿಷಯವನ್ನೂ ಜಾಗ್ರತೆ ಯೋಚನೆ ಮಾಡಿ ತಿಳಿಸಿಬಿಡಿ" ಎಂಬುದಾಗಿ ಸ್ವಲ್ಪ ನಿಷ್ಠೂರವಾಗಿಯೇ ಮಾತನಾಡಿ ಥಟ್ಟನೆ ರಿಸೀವರನ್ನು ಕೆಳಗಿಟ್ಟುಬಿಟ್ಟರು.

ಥಾಮಸ್‌ರವರು ಮನನೊಂದುಹೋದರು.

ಬಜ್ಜಯ್ಯನವರು ಹೊಟ್ಟೆ ನೇವರಿಸುತ್ತಾ ಆಲೋಚನಾಮಗ್ನರಾದರು.

ಅಂದು ಸಂಜೆ ಥಾಮಸ್‌ರವರು ಆಸ್ಪತ್ರೆಯ ಗೇಟಿನ ಬಳಿ ಹೋಗಿ, ಆಸ್ಪತ್ರೆಗೆ ಹೋಗಿಬರುತ್ತಿರುವವರನ್ನು ನೋಡುತ್ತಾ ನಿಂತುಬಿಟ್ಟದ್ದರು.

ವಾರ್ಡ್‌ಬಾಯ್ ಬಾಷಾ ಸಹಾ ಒಳ್ಳೇ ಮೆಡಿಕಲ್ ಆಫೀಸರಂತೆ ಮುಖಕ್ಷೌರ ಮಾಡಿಸಿಕೊಂಡು ಕರೀಂಬೀಡಿ ಬಾಯಲ್ಲಿ ಕಚ್ಚಿಕೊಂಡು ಹೊಗೆ ಬಿಡುತ್ತಾ ಆಸ್ಪತ್ರೆಯ ಗೇಟಿನೊಳಕ್ಕೆ ನುಗ್ಗಲು ಪ್ರಯತ್ನಪಟ್ಟನು. ಬಾಷಾ ವನ್ನು ಥಾಮಸ್‌ರವರು ಅಂದು ರಾಮರಾಯರನ್ನು ಪರೀಕ್ಷಿಸಿ ನೋಡುತ್ತಿರುವ ಸಮಯದಲ್ಲಿ ಕಂಡಿದ್ದರು.

ನಳಿನಿಯು ತನ್ನ ಕೆಲಸವನ್ನು ಪೂರೈಸಿಕೊಂಡು ಮನೆಗೆ ಹಿಂದಿರುಗುವುದರಲ್ಲಿದ್ದಳು. ಗೇಟಿನ ಹೊರಗೆ ಕಾಲಿಟ್ಟಳು.

ಬಾಷಾ ನಳಿನಿಯನ್ನು ನೋಡಿದ. ಗೇಟಿನ ಬಳಿ ಇಬ್ಬರೂ ಒಬ್ಬರ ಮುಖ ಮತ್ತೊಬ್ಬರು ನೋಡಿಕೊಂಡರು.

ನಳಿನಿ ತಲೆ ತಗ್ಗಿಸಿಕೊಂಡೇ ಸುಮ್ಮನೆ ಹೊರಟುಬಿಟ್ಟಳು. ಬಾಷಾ ನಳಿನಿ ಹೋಗುತ್ತಿದ್ದುದನ್ನು ನೋಡಿ, "ವಾರೇ ವಾ, ಏನು ಜಂಭ. ಇರಲಿ ಚಾಂದ್, ನಿನ್ನನ್ನು ನಾನು ನೋಡಿಕೊಳ್ಳುತ್ತೇನೆ" ಎಂದ.

ಬಾಷಾ ಅಂದ ಮಾತುಗಳು ನಳಿನಿ ಕಿವಿಗೆ ಬಿತ್ತು. ಹಿಂತಿರುಗಿ ನೋಟವನ್ನು ಬಾಷಾ ಕಡೆಗೆ ಬೀರುತ್ತಾ ಒಂದು ಕಿರುನಗೆ ನಕ್ಕು ಪುನಃ ಮುಂದಕ್ಕೆ ಹೊರಟಳು.

"ಹಾಗೆ ದಾರಿಗೆ ಬರಬೇಕು ಚಾಂದ್...." ಎನ್ನುತ್ತಾ ಬಾಷಾ ಮೆಲ್ಲಗೆ ನಡೆದ.

ಆಗ ಬಾಷಾ ಕುಡಿದಿರಬೇಕು ಎಂದು ಊಹಿಸಿದರು ಥಾಮಸ್. ಅವರಿಗೆ ಬಾಷಾವಿನ ಮೇಲೆ ಸ್ವಲ್ಪ ಗುಮಾನಿಯಾಯಿತು. ಆದರೂ ಆಗ ಅವನು ಕುಡಿದಿದ್ದ. ಆತನೊಂದಿಗೆ ಹೇಗೆ ಮಾತನಾಡುವುದು ಎಂದುಕೊಂಡು ನಳಿನಿಯನ್ನು ಹಿಂಬಾಲಿಸೋಣವೆಂದು ಅವಳು ಹೋಗುತ್ತಿದ್ದ ದಾರಿಯನ್ನು ಕುರಿತು ನಡೆದರು ಥಾಮಸ್.

ನಳಿನಿ ಹೋಗುತ್ತಿದ್ದುದನ್ನು ಥಾಮಸ್ ಗಮನಿಸಿದರು. ಹತ್ತಿರ ಹೋಗಿ ಏನಾದರೂ ಒಂದೆರಡು ಮಾತನಾಡೋಣವೆಂಬುದಾಗಿ ಹೆಜ್ಜೆ ಮುಂದಿಟ್ಟರು.

ನಳಿನಿ ಜೊತೆಗಾರ್ತಿ ಉಷಾ ಆಗತಾನೇ ರಾತ್ರಿ ಡ್ಯೂಟೀಗೆ ಹೋಗಲು ಬರುತ್ತಿದ್ದವಳು ನಳಿನಿಯನ್ನು ಕಂಡು,

"ಏನು ನಳಿನಿ, ಕೆಲಸ ಮುಗಿಯಿತೆ ? ಮನೆಗೆ ಹೋಗುತ್ತಿರುವಂತಿದೆ" ಎಂದಳು.

"ಹೌದು" ಎಂದಳು ನಳಿನಿ.

"ನಳಿನಿ....ನಿನ್ನ ಬಳಿ ಒಂದು ಮಾತನ್ನು ಕೇಳಬೇಕೆಂದಿದ್ದೆ. ಅದೇ, ನಿನ್ನ ಗಂಡ ಷಣ್ಮುಗಂ ಪೋಲೀಸ್ ಸ್ಟೇಷನ್ನಲ್ಲಿದ್ದಾನಂತೆ. ಕಾರಣವೇನು ?"

"ನನ್ನ ಗಂಡ ಪೋಲೀಸ್ ಸ್ಟೇಷನಲ್ಲಿರುವುದು ಮಾತ್ರ ಗೊತ್ತು! ಪೋಲೀಸ್ ಸ್ಟೇಷನ್ಗೆ ಹೋದ ವಿಷಯ ತಿಳಿಯದೆ ಇರುತ್ತದೆಯೇ ಉಮಾ?"

"ಹೌದು. ನಿಜವಾಗಿಯೂ ರಾಮರಾಯರಿಗೆ ನಿನ್ನ ಗಂಡನೇ ವಿಷ ಹಾಕಿದನೆಂದು ಪೋಲೀಸಿನವರು ತೀರ್ಮಾನಿಸಿಬಿಟ್ಟಿದ್ದಾರೇನು?"

"ತೀರ್ಮಾನಿಸಲಿ – ತೀರ್ಮಾನಿಸದೆ ಹೋಗಲಿ. ಅಂತೂ ಅವರಿಗೆ ನಿಜವಾದ ಕೊಲೆಗಾರನು ಸಿಕ್ಕಿದ ಹೊರತು ಅವರು ಷಣ್ಮುಗಂನನ್ನು ಬಿಡುತ್ತಾರೇನು? ಪೋಲೀಸರ ಕೈಗೆ ಮೊಟ್ಟಮೊದಲು ಸಿಕ್ಕಿದವನು ನರಕ ಯಾತನೆಯನ್ನನುಭವಿಸಬೇಡವೆ? ಒಳ್ಳೇ ಪೋಲೀಸರು. ಒಳ್ಳೇ ಪತ್ತೇದಾರರು!"

"ನೀನು ಹೋಗಿ ವಿಚಾರಿಸಲಿಲ್ಲವೆ?"

"ನನ್ನ ಮಾತನ್ನು ಅಲ್ಲಿ ಕೇಳುವವರಾರು?"

"ಹೋಗಿ ಪ್ರಯತ್ನಪಟ್ಟು ನೋಡು ನಳಿನಿ. ಒಂದು ವೇಳೆ ನೀನು ಹೋಗಿ ಹೇಳಿದರೆ ಮನೆಗೆ ಕಳುಹಿಸಿದರೂ ಕಳುಹಿಸಬಹುದು. ವಾರಸುದಾರರಾಗಿ ಯಾರೂ ಆ ಕಡೆ ಇಣಿಕಿನೋಡದೆ ಹೋದರೆ ಮುಂದೆ ಆತನಿಗೆ ತಾನೇ ಕಷ್ಟ. ಅದೂ ಅಲ್ಲದೆ ಪೋಲೀಸರು ನಿಜವಾದ ಕೊಲೆಗಾರ ಅಥವಾ ಕೊಲೆಗಾರನಲ್ಲ ಎಂಬುದನ್ನು ವಿಮರ್ಶಿಸಿ ನೋಡುತ್ತಾರೇನು! ಅವರಿಗೆ ತಿಳಿದಿರುವುದು ಮೊಟ್ಟಮೊದಲು ಲಾಠಿ ಏಟು ಮಾತ್ರ."

"ಆಗಲಿ ಉಮಾ: ಪ್ರಯತ್ನಪಟ್ಟು ನೋಡುತ್ತೇನೆ."

"ಅದಿರಲಿ ನಳಿನಿ. ರಾಮರಾಯರಿಗೆ ನಿಜವಾಗಿಯೂ ವಿಷ ಕುಡಿಸಬೇಕಾಗಿದ್ದರೆ ಯಾರಿಗೆ ಅವರ ಮೇಲೆ ದ್ವೇಷವಿತ್ತು? ಅದೂ ಆಸ್ಪತ್ರೆಯಲ್ಲೇ ತಂದು ಕುಡಿಸಬೇಕಾಗಿದ್ದರೆ....? ನಿನಗ್ಯಾರ ಮೇಲಾದರೂ ಸಂದೇಹ ವಿದ್ದರೆ...."

"ನನಗ್ಯಾರ ಮೇಲೆ ಸಂದೇಹವಿದೆ ಉಮಾ. ಯಾರ ಮೇಲೆ ಸಂದೇಹ ವಿದ್ದು ಯಾರನ್ನು ತೋರಿಸಲಿ. ನನಗೊಂದೇ ಒಂದು ಸಂದೇಹವೆಂದರೆ ರಾಮರಾಯರ ಸೊಸೆ ಶಾಂತ. ಆಕೆ ರಾಮರಾಯರ ಹತ್ತಿರವೇ ಹಗಲೆಲ್ಲಾ ಕಾಲ ಕಳೆಯುತ್ತಿದ್ದಳು. ರಾಮರಾಯರು ಸಾಯುವ ಮುಂದಿನ ದಿನ ಸಾಯಂಕಾಲ ಐದು ಘಂಟೆ ವೇಳೆಯಲ್ಲಿ ಶಾಂತಮ್ಮ ರಾಮರಾಯರ ಪಕ್ಕದಲ್ಲಿ

ಕೂತಿದ್ದಳು. ರಾಮರಾಯರು ಬಿಕ್ಕಳಿಕೆ ಬರುತ್ತಿದೆ, ಬಾಯಾರಿಕೆ ಪ್ರಾಣ ಹೋಗುವಂತಿದೆ ಎಂದು ಗೋಳಾಡುತ್ತಿದ್ದರು. ಆಗ ಶಾಂತ ಒಂದು ಪೊಟ್ಟಣವನ್ನು ಬಿಚ್ಚಿ ಅದರಲ್ಲಿದ್ದ ಪುಡಿಯನ್ನು ನೀರಿಗೆ ಹಾಕಿ ತಕ್ಷಣ ಕುಡಿಸಿಬಿಟ್ಟಳು.

"ನಾನು ತಕ್ಷಣ ಆಕೆಯ ಬಳಿಗೆ ಹೋಗಿ, ನಮ್ಮನ್ನು ಹೇಳದೆ ಕೇಳದೆ ಏತಕ್ಕೆ ಏನನ್ನಾದರೂ ಕೊಡುತ್ತೀರಿ? ಅದಕ್ಕೇ ನಿಮಗೆಲ್ಲಾ ರೋಗಿಗಳನ್ನು ನೋಡುವ ಸಮಯ ವಿನಃ ಮಿಕ್ಕ ಸಮಯದಲ್ಲಿ ಒಳಕ್ಕೆ ಸೇರಿಸಬಾರದೆನ್ನುವುದು" ಎಂದು ರೇಗಿದೆ.

"ಮಾವನವರು ಬಾಯಾರಿಕೆ .... ಪ್ರಾಣ ಹೋಗುವಂತಿದೆ ಎಂದು ಹಲುಬಿದರು. ಸ್ವಲ್ಪ ಬಿಸಿ ನೀರು ಕುಡಿಸಿದೆ. ನಾನು ಬರುತ್ತೇನೆ ನರ್ಸಮ್ಮ" ಎಂದು ಹೇಳಿ ಹೊರಟುಹೋದಳು.

ಪುನಃ ಆಕೆ ಬಂದಳೋ ಬರಲಿಲ್ಲವೋ ಅದು ನನಗೆ ತಿಳಿಯದು. ಸಂಜೆ ಆರು ಗಂಟೆ ಆಗುತ್ತಲೇ ನಾನು ಮನೆಗೆ ಹಿಂತಿರುಗಿದೆ.

ಅದಾದನಂತರ ಮಾರನೆ ದಿನ ಬೆಳಿಗ್ಗೆ ನಾನು ಆಸ್ಪತ್ರೆಗೆ ಹೋಗಿ ನಿಲ್ಲುವಷ್ಟರಲ್ಲಿ ಮೆಡಿಕಲ್ ಆಫೀಸರ್ ರೋಗಿಗಳನ್ನು ನೋಡಲು ಬಂದುಬಿಟ್ಟರು. ರಾಮರಾಯನನ್ನು ಕುರಿತು ಮೆಡಿಕಲ್ ಆಫೀಸರ್ ಚಕ್ರಪಾಣಿ ಮಾತನಾಡಿಸಿದರು. ಪ್ರತ್ಯುತ್ತರ ಬರಲಿಲ್ಲ. ನಂತರ ಹತ್ತಿರಕ್ಕೇ ಹೋಗಿ ಮುಟ್ಟಿನೋಡಿದರು. ಸತ್ತುಹೋದರೆಂದು ತೀರ್ಮಾನಿಸಿ ನಮ್ಮೆಲ್ಲರ ಮೇಲೂ ರೇಗಿಬಿದ್ದರು! ನಮ್ಮ ಅದೃಷ್ಟ ಹೀಗೆಲ್ಲಾ ನಡೆಯಬೇಕೆಂದಿದೆ ನೋಡು ಉಮಾ" ಎಂದಳು. ನಳಿನಿಯ ಕಣ್ಣಲ್ಲಿ ಕಣ್ಣೀರು ಎದ್ದು ಕಾಣುತ್ತಿತ್ತು.

"ವ್ಯಸನಪಡಬೇಡ ನಳಿನಿ. ನಾಳೆ ನಿಮ್ಮ ಮನೆಗೆ ಬಂದು ನಿನ್ನನ್ನು ಕಾಣುತ್ತೇನೆ. ಇದಕ್ಕೆ ಯಾವುದಾದರೂ ಯೋಚನೆ ಮಾಡಿ ಷಣ್ಮುಗಂನನ್ನು ಬಿಡುಗಡೆಮಾಡಲು ಉಪಾಯ ಹುಡುಕೋಣ" ಎಂದು ಹೇಳಿ ಹೊರಟಳು ಉಮಾ.

ನಳಿನಿಯೂ ಸಹಾ ಮನೆಯ ಕಡೆ ಹೊರಟಳು. ಉಮಾ ಮುಂದೆ ನಳಿನಿಯು ಅಳುತ್ತಿರುವವಳಂತೆ ನಟಿಸಿದಳು. ಅದನ್ನು ಉಮಾ ನಿಜವೆಂದೇ ನಂಬಿಬಿಟ್ಟಳೆಂದು ನಳಿನಿಯ ಮನಸ್ಸಿನಲ್ಲಿ ಒಂದು ವಿಧವಾದ ಕುತೂಹಲ.

ಇದೆಲ್ಲವನ್ನೂ ಸ್ವಲ್ಪ ಪಕ್ಕದಲ್ಲೇ ನಿಂತು ಉಮಾ ಮತ್ತು ನಳಿನಿಗೆ ಕಾಣದಂತೆ ಅವರಾಡಿದ ವಿಷಯಗಳೆಲ್ಲವನ್ನು ತಿಳಿದುಕೊಂಡರು ಥಾಮಸ್. ಅವರಿಗೆ ರಾರ್ಜನ ಹೆಂಡತಿ ಶಾಂತಳೇ ಈ ಕೆಲಸವನ್ನು ಮಾಡಿರಬೇಕು, ಸರಿ ವಿಚಾರಿಸಿ ನೋಡೋಣ ಎಂದುಕೊಂಡು ನಳಿನಿಯನ್ನು ಹಿಂಬಾಲಿಸುವುದನ್ನು ಬಿಟ್ಟು ಪೋಲೀಸ್ ಸ್ಟೇರ್ಷಗೆ ನಡೆದರು.

ಸ್ಟೇರ್ಷನಲ್ಲಿ ಬಜ್ಜಯ್ಯ ಆಲೋಚನೆಯಲ್ಲಿ ಮಗ್ನರಾಗಿದ್ದರು. ಥಾಮಸ್ ಬಂದುದನ್ನು ಕಂಡು,

"ಬಾ ಥಾಮಸ್. ಎಲ್ಲಿಗೋ ಹೋಗಿಬಂದಿರುವಂತೆ ಕಾಣುತ್ತೆ. ಏನು ಡಿಸಂಬರ್ ತಿಂಗಳೋ ಹಾಳಾದ್ದು. ಛಳಿ ನಮ್ಮನ್ನು ನಡುಗಿಸಿಬಿಡುತ್ತಪ್ಪ. ಹೌದು, ಈ ಛಳಿಯಲ್ಲಿ ಎಲ್ಲಿಗೆ ಹೋಗಿಬರುತ್ತಿದ್ದೀಯೆ."

"ಸುಮ್ಮನಿರಿ ಇರ್ಸ್ಪೆಕ್ಟರೇ. ಈಗ ಒಂದು ಗುಮಾನಿ ಬಂದಿದೆ."

"ಯಾರ ಮೇಲಪ್ಪ."

"ಒಬ್ಬ ಹೆಂಗಸಿನ ಮೇಲೆ."

"ಯಾರದು ?"

"ಅದೇ ರಾಮರಾಯರನ್ನು ವಿಷಹಾಕಿ ಕೊಂದ ಕೇಸಿನ ಬಗ್ಗೆ.... ವಿಷಯ ಕೆಲವು ತಿಳಿಯಿತು. ಅದನ್ನು ವಿಚಾರಿಸಿನೋಡಬೇಕೆಂದಿದ್ದೇನೆ."

"ಈಗ ಆ ಗುಮಾನಿಯ ಹೆಂಗಸು ಯಾರು ? ಅವಳೇ ಇರಬೇಕು ಎಂದು ಹೇಳಿಕೊಂಡವರು ಯಾರು ?"

"ಷಣ್ಮುಗಂ ಹೆಂಡತಿ ನಳಿನಿ ಆಸ್ಪತ್ರೆಯಿಂದ ಮನೆಗೆ ಹೋಗಲು ಹೋಗುತ್ತಿದ್ದಳು. ದಾರಿಯಲ್ಲಿ ಅವಳ ಜೊತೆಗಾರ್ತಿ ಸಿಕ್ಕಿದಳು. ಅವಳಲ್ಲಿ ನಳಿನಿ ರಾರ್ಜನ ಹೆಂಡತಿ ಅಂದರೆ ಗತಿಹೊಂದಿದ ರಾಮರಾಯರ ಸೊಸೆ ಶಾಂತಳಂತೆ! ಅವಳಮೇಲೆ ಸಂದೇಹವಿರುವಂತೆ ಮಾತನಾಡಿಕೊಳ್ಳುತ್ತಿದ್ದರು. ಒಟ್ಟಿನಲ್ಲಿ ಷಣ್ಮುಗಂ ಉತ್ತಮನೆಂದೇ ನನ್ನ ಭಾವನೆಯಾಗಿದೆ."

"ಸರಿಸರಿ. ನಿನ್ನ ತಲೆಗೆ ಕ್ಷಣಕ್ಕಿರುವ ದುಷ್ಟ, ಮತ್ತೊಂದು ಕ್ಷಣಕ್ಕೆ ಉತ್ತಮನಾಗಿ ಕಾಣುತ್ತಿರುತ್ತಾನೆ. ಷಣ್ಮುಗಂ ಮೇಲಿನ ಸಂದೇಹವನ್ನು ಬಿಟ್ಟುಬಿಡುವುದು ಶುದ್ಧ ತಪ್ಪು."

"ಹಾಗಾದರೆ ನಾನು ರಾರ್ಜನನ್ನು ಕಂಡುಬರುತ್ತೇನೆ."

"ನಾವಾಗಿ ನಾವೇ ಅವನಲ್ಲಿ ಹೋಗಬಾರದು ಥಾಮಸ್."

"ಮತ್ತೇನು ಮಾಡಬೇಕು ?"

"ಯಾರಾದರೂ ಪೋಲೀಸ್ ಕಾನ್ಸ್ಟೇಬಲ್‌ನನ್ನು ಕಳಿಸಿ ಕರೆಸಿಕೊಂಡರಾಯಿತು."

"ಹಾಗೆ ಮಾಡಬಾರದು ಇನ್ಸ್ಪೆಕ್ಟರೇ. ರಾಜ್ ಶ್ರೀಮಂತ ಕುಟುಂಬದಲ್ಲಿ ಹುಟ್ಟಿ ಇಂದ್ರನಂತೆ ಮೆರೆಯುತ್ತಿದ್ದಾನೆ. ಆತನ ಮನೆಯ ಮುಂದೆ ಪೋಲೀಸ್ ನೌಕರರನ್ನು ಸುಳಿದಾಡಿಸಿ ಕರೆಸಿಕೊಂಡು ಬರುವುದಕ್ಕೆ ಬದಲಾಗಿ ನಾನೇ ಮುಖೇನ ಹೋಗಿ ವಿಷಯವನ್ನು ತಿಳಿದುಕೊಳ್ಳುವುದು ಲೇಸೆಂದು ಕಾಣುತ್ತೆ."

"ಬೇಡಪ್ಪಾ. ಬೆಳಿಗ್ಗೆ ಎಂಟು ಗಂಟೆಗೆಲ್ಲಾ ಹೋದರಾಯಿತು. ಈಗ ಗಂಟೆ ಒಂಭತ್ತಾಗುವುದರಲ್ಲಿದೆ. ಏತಕ್ಕೆ ರಾತ್ರಿ ಛಳಿಯಲ್ಲಿ ಹೋಗಿ ಸಾಯುತ್ತೀ!"

"ನಾನು ಇಲ್ಲಿ ಕೂತು ಮಾಡಬೇಕಾದ ಕೆಲಸವೇನಿದೆ? ಮೆಲ್ಲನೆ ಹೋಗಿ ನೋಡಿಕೊಂಡು ಬಂದುಬಿಡುತ್ತೇನೆ" ಎಂದು ಹೇಳಿ ಹೊರಟರು ಥಾಮಸ್.

"ಬೇಡಪ್ಪಾ ಥಾಮಸ್" ಎಂದು ಥಾಮಸ್‌ಗೆ ತಡೆಮಾಡುತ್ತಿದ್ದ ಇನ್ಸ್ಪೆಕ್ಟರ್ ಬಜ್ಜಯ್ಯನವರ ಮಾತುಗಳಿಗೆ ಥಾಮಸ್ ಕಿವಿಗೊಡಲಿಲ್ಲ.

ರಾಜ್ ಮನೆಯ ಅಡ್ರೆಸ್ಸನ್ನು ತೆಗೆದುಕೊಂಡು ಆತನನ್ನು ನೋಡಲು ಹೊರಟರು ಥಾಮಸ್. ರಾಜನ ಮನೆಯ ಹತ್ತಿರ ಹೋದರು. ಅದೊಂದು ದೊಡ್ಡ ಗೇಟಿನ ಮನೆ. ಮುಂಭಾಗದಲ್ಲಿ ಎರಡು ಸಂಪಿಗೇ ಮರಗಳು ದಟ್ಟವಾಗಿ ಬೆಳೆದಿವೆ. ಹಲವಾರು ರಂಗುರಂಗಿನ ಹೂ ಗಿಡಗಳು ಸಾಲಾಗಿ ನೆರೆದಿವೆ. ಇರುವ ಸ್ವಲ್ಪ ಜಾಗದಲ್ಲಿ ಒಂದು ನೀರಿನ ಚಿಕ್ಕ ತೊಟ್ಟಿ, ಅದರ ಮಧ್ಯೆ ಒಂದು ವ್ಯಂಗ ಹೆಂಗಸಿನ ಶಿಲೆಯನ್ನು ನಿಲ್ಲಿಸಲಾಗಿದೆ. ವರಾಂಡದಲ್ಲಿ ಯಾರೂ ಕಾಣಿಸಲಿಲ್ಲ. ಕಿಟಕಿ ವರಾಂಡಗಳಿಗೆಲ್ಲಾ ಜಾಲರಿ ಕಂಬಿಗಳನ್ನು ಹಾಕಲ್ಪಟ್ಟಿದುದರಿಂದ ಮನೆಯೊಳಗಿರುವವರನ್ನು ಗುರ್ತಿಸಲಾಗುತ್ತಿರಲಿಲ್ಲ.

ಥಾಮಸ್ ಗೇಟನಲ್ಲಿ ನಿಂತ ಹತ್ತು ನಿಮಿಷದ ನಂತರ ಒಬ್ಬ ಬಂದು,

"ತಮಗೇನು ಬೇಕಾಗಿದೆ ಸಾರ್ ?" ಎಂದು ಕೇಳಿದ.

ಆತನನ್ನು ನೋಡಿದರೆ ಆ ಮನೆಯ ಹಳೆಯ ಜವಾನ ಇರಬೇಕೆಂದು ಕಾಣಿಸಿತು. ಆದರೂ ಕೇಳಿದವನನ್ನು ಕುರಿತು ಥಾಮಸ್‌ರವರು,

"ಮಿಸ್ಟರ್ ರಾರ್ಜ ಒಳಗಿದ್ದಾರೆಯೇ ?"

"ಇಲ್ಲ. ಅವರು ಈಗತಾನೇ ಕಾರಿನಲ್ಲಿ ಎಲ್ಲಿಗೋ ಹೋದರು."

"ಅವರು ಎಷ್ಟು ಹೊತ್ತಿಗೆ ಬರುತ್ತಾರೆಂದು ತಿಳಿಸಲು ಸಾಧ್ಯವೆ ?"

"ಅವರು ಬರುವುದೂ ಹೋಗುವುದೂ ನಾವು ಹೇಳಲು ಸಾಧ್ಯವಿಲ್ಲ ಸಾರ್" ಎಂದು ಖಂಡಿತವಾಗಿ ಹೇಳಿಬಿಟ್ಟ.

"ಹೋಗಲಿ ಅವರ ಪತ್ನಿ ಶಾಂತಮ್ಮನವರು ಮನೆಯಲ್ಲಿದ್ದಾರೆಯೇ ?"

"ಇದ್ದಾರೆ. ಆದರೆ ಅವರು ಪರಪುರುಷರೊಂದಿಗೆ ಮಾತನಾಡಲಿಚ್ಛಿಸುವುದಿಲ್ಲ."

"ನಾನು ಪೋಲೀಸ್ ಪತ್ತೇದಾರ. ರಾಮರಾಯರಿಗೆ ವಿಷಕೊಟ್ಟು ಕೊಂದವನನ್ನು ಕಂಡುಹಿಡಿಯಲು ಪ್ರಯತ್ನಪಡುತ್ತಿದ್ದೇನೆ. ಶಾಂತಮ್ಮನವರ ಬಳಿ ಒಂದೆರಡು ಮಾತುಗಳನ್ನು ಆಡಬೇಕಾಗಿದೆ. ನಾನು ಬಂದಿರುವುದಾಗಿ ಅವರ ಬಳಿ ತಿಳಿಸಿ" ಎಂದು ಅವನ ಬಳಿ ಮರ್ಯಾದೆಯಾಗಿಯೇ ಮಾತನಾಡಿದರು ಥಾಮಸ್.

"ಅದೆಲ್ಲಾ ಮಾತನಾಡಲು-ಕೇಳಲು ಅವರು ಬರುವುದಿಲ್ಲ ಸಾರ್. ದಯವಿಟ್ಟು ಎಲ್ಲ ವಿಷಯಗಳಿಗೂ ಯಜಮಾನರಾದ ರಾರ್ಜರವರನ್ನು ಕಾಣುವುದೇ ಲೇಸು" ಎಂದು ಹೇಳಿ ಜವಾನ ಗೇಟನ್ನು ಹಾಕಿಕೊಂಡು ಮನೆಯೊಳಕ್ಕೆ ಪ್ರವೇಶಿಸಿದನು.

ಥಾಮಸ್ ಗೇಟಿನ ಹೊರಗಡೆಯೇ ನಿಂತುಬಿಟ್ಟರು. ಥಾಮಸ್‌ರವರು ಮನೆಯೊಳಗೆ ಪ್ರವೇಶಿಸಲು ರಾರ್ಜ ಬರುವವರೆವಿಗೂ ಅಲ್ಲೇ ಕಾದು ಕುಳಿತಿರಲು ಮನೆಯೊಳಗೆ ಜಾಗ ಕೊಡದ ಹಾಗೆ ಬಾಗಿಲನ್ನು ಹಾಕಿಕೊಂಡು ಹೊರಟುಹೋದನು.

ಥಾಮಸ್‌ರವರಿಗೆ ಬೇಜಾರಾಯಿತು. ಎಷ್ಟು ಹೊತ್ತಾದರೂ ರಾರ್ಜ ಬಂದ ನಂತರ ಆತನನ್ನು ನೋಡಿಕೊಂಡು ಹೋಗುವುದೇ ಲೇಸು. ಸ್ವಲ್ಪ ಹೊತ್ತಾದರೂ ಚಿಂತೆಯಿಲ್ಲವೆಂದು ಗೇಟಿನಲ್ಲೇ ರಾರ್ಜಗಾಗಿ ಕಾದು ನಿಂತರು.

ರಾತ್ರಿ ಹತ್ತು ಘಂಟೆಯಾಯಿತು. ಹತ್ತೂವರೆಯಾಯಿತು. ಹನ್ನೊಂದಾಯಿತು. ರಾಜ್ ಬರುವ ಮಟ್ಟಿಗೆ ಕಾಣಲಿಲ್ಲ. ಹಗಲು ಹೊತ್ತಾಗಿದ್ದಿದ್ದರೆ ಮನೆಯವರನ್ನು ಹೇಗಾದರೂ ಕರೆದು ಮಾತನಾಡಿಸಿಬಿಡುತ್ತಿದ್ದರು. ಆದರೆ ರಾತ್ರಿ ವೇಳೆಯಲ್ಲಿ ಅದೂ ಅಲ್ಲದೆ ಮನೆಯ ಮಾಲೀಕ ನಿಲ್ಲದ ಸಮಯದಲ್ಲಿ ಹೆಂಗಸರೊಂದಿಗೆ ಚರ್ಚಿಸುವುದೆಂದರೆ ಜನಗಳು ಅಪಾರ್ಥಮಾಡಿಕೊಳ್ಳದೆ ಬಿಡುತ್ತಾರೆಯೇ ಎಂದು ಕೊಂಡು ಆ ಜಾಗವನ್ನು ಬಿಟ್ಟು ಪೋಲೀಸ್ ಸ್ಟೇಷನ್‌ಗೆ ಹೊರಟರು.

ಇನ್ನೂ ಸರಿಯಾಗಿ ಅರ್ಧ ಫರ್ಲಾಂಗ್ ಬಂದಿರಲಾರರು. ಅಷ್ಟರಲ್ಲಿ ಎದುರಿಗೊಂದು ಕಾರು ಬರುವುದು ಕಾಣಿಸಿತು. ಕಾರು ಬರುತ್ತಲೇ ಇತ್ತು. ಬಹಳ ಹತ್ತಿರಕ್ಕೂ ಬಂದುಬಿಟ್ಟಿತು. ಕಾರು ಥಾಮಸ್‌ರವರ ಪಕ್ಕದಲ್ಲೇ ನಿಂತಿತು.

ಥಾಮಸ್‌ರವರು ಅಲ್ಲೇ ನಿಂತುಬಿಟ್ಟರು.

ಕಾರಿನಿಂದಿಳಿದ ಯುವಕ "ಗುಡ್ ನೈಟ್ ಸಾರ್" ಎನ್ನುತ್ತಾ ಥಾಮಸ್‌ರವರ ಎದುರು ನಿಂತನು. ಥಾಮಸ್‌ರವರು ಅವನನ್ನು ದೃಷ್ಟಿಸಿ ನೋಡಿದರು. ಅವನೇ ರಾಜ್! ಜೊತೆಗೆ ಇನ್ನೂ ಯಾರೋ ಕಾರಿನಲ್ಲಿ ಕೂತಿದ್ದರು. ಆದರೆ ಅವರ್ಯಾರೆಂಬುದು ಗೊತ್ತಾಗಲಿಲ್ಲ. ಅದೂ ಅಲ್ಲದೆ ರಾತ್ರಿ ಹನ್ನೆರಡು ಘಂಟೆ. ಮಂಜು ಹನಿಗಳು ಬೀಳುತ್ತಲೇ ಇತ್ತು. ಆದ್ದರಿಂದ ಒಳಗಡೆ ಕೂತಿದ್ದವರು ಯಾರೆಂಬುದು ಗೊತ್ತಾಗಲಿಲ್ಲ. ಸಿಗರೇಟ್ ಸೇದುತ್ತಿದ್ದುದರಿಂದ ಗಂಡಸೇ ಇರಬೇಕೆಂದು ಊಹಿಸಿದರು ಥಾಮಸ್.

"ಹಲೋ ಸಾರ್. ನಿಮ್ಮನ್ನು ಕಾಣಬೇಕೆಂದೇ ನಾನು ಎರಡು ಘಂಟೆಯಿಂದ ನಿಮ್ಮ ಬಂಗಲೆಯ ಮುಂದೆ ಕಾದು ಕಾದು ಈಗ ತಾನೆ ಸ್ಟೇಷನ್‌ಗೆ ಹೊರಡೋಣ ಎಂದು ಕೊಂಡು ಹಿಂತಿರುಗಿದೆ."

"ಏನು ಸಮಾಚಾರ? ಏನಾದರೂ ಪತ್ತೆ ಆಯಿತೇ? ನನ್ನ ತಂದೆಗೆ ವಿಷಹಾಕಿ ಕೊಲ್ಲಬೇಕಾದರೆ ಯಾರಿಂದ ಸಾಧ್ಯ? ಅಲ್ಲದೆ ಅವರು ಅಂತಹ ದುಷ್ಟರೇನೂ ಅಲ್ಲ. ನೋಡಿ ಸಾರ್, ಅಂತಹ ಸದ್ಗುಣಿಗಳ ಮೇಲೆ ಯಾರೋ ಈ ತರಹ ಘೋರ ಕೃತ್ಯವನ್ನು ನಡೆಸಿದ್ದಾರೆ. ಪಾಪ! ಉದರ ಬೇನೆಯಿಂದ ಕಳೆದ ಎರಡು ತಿಂಗಳಿಂದಲೂ ಅವರು ಪಡುತ್ತಿದ್ದ

ಬಾಧೆ ನಮ್ಮ ಕರುಳು ಕೊಯ್ಯುತ್ತಿತ್ತು. ಕುಟುಂಬಕ್ಕೆ ದೊಡ್ಡ ತಲೆ, ಖಂಡಿತ ಉಳಿಯಲೇ ಬೇಕು ಎಂಬುದಾಗಿ ನಾವು ಅವರಿಗಾಗಿ ಮಾಡಿದ ಖರ್ಚು ಲೆಕ್ಕವಿಲ್ಲ. ಕೊನೆಗೂ ಅವರ ಅದೃಷ್ಟ ವಿಷ ಕುಡಿದು ಸಾಯಲೇ ಬೇಕಾಯಿತಲ್ಲ ಸಾರ್."

"ಮನಸ್ಸು ಸಡಿಲ ಬಿಡಬೇಡಿ ರಾರ್ಜ. ಯಾವಾಗ ಯಾವುದು ನಡೆಯಬೇಕ್ಕೋ ಅದು ನಡೆದೇ ತೀರುತ್ತೆ. ಅದಿರಲಿ. ತಾವು ಅನ್ಯಥಾ ಏನೂ ಭಾವಿಸುವುದಿಲ್ಲವೆಂದರೆ ಒಂದು ಚಿಕ್ಕ ಮಾತು ಕೇಳಲು ಇಷ್ಟಪಡು ತ್ತೇನೆ."

"ಅದಕ್ಕೇನಂತೆ ಕೇಳಿ ಸಾರ್. ಯಾವ ವಿಷಯವಾದರೂ ಸರಿ. ನೀವು ಪ್ರತಿಯೊಂದೂ ನನ್ನ ಒಳ್ಳೆಯದಕ್ಕೇ ಕೇಳಬಹುದು ಎಂಬುದಾಗಿ ನೆನೆದಿ ದ್ದೇನೆ. ಒಂದು ವೇಳೆ ಅದರಲ್ಲೂ ಕೆಟ್ಟದ್ದು ಇರುವಂತಿದ್ದರೆ ಅದು ನನ್ನ ದುರದೃಷ್ಟ."

"ಮತ್ತೇನೂ ಇಲ್ಲ...."

"ಅಯ್ಯೋ ಹೇಳಿ ಸಾರ್."

"ನಿಮ್ಮ ಪತ್ನಿ ಶಾಂತಮ್ಮನವರಿಗೂ ನಿಮ್ಮ ತಂದೆಯವರಿಗೂ ಏನಾದರೂ ಮನಸ್ತಾಪವೋ ಅಥವಾ ವಿರೋಧವೋ ಅಲ್ಲದೆ ಸಂಸಾರದಲ್ಲಿ ಸಹನೆ, ಸಂತೋಷವಿಲ್ಲದೆ ಒಂದು ವೇಳೆ ದ್ವೇಷವಿದ್ದಿತೋ ಎಂಬುದನ್ನು ನಿಮ್ಮಲ್ಲಿ ಕೇಳಿ ತಿಳಿದುಕೊಳ್ಳೋಣವೆಂದು ನನ್ನ ಆಸೆ."

"ನನ್ನ ಸತಿ ಶಾಂತಳ ಬಗ್ಗೆ ಕೇಳುತ್ತೀರೇನು? ಅವಳಿಗೂ ನನ್ನ ತಂದೆಗೂ ಎಡಬಿಡದ ಸ್ನೇಹ. ನನಗಿಂತಲೂ ಹತ್ತು ಪಾಲು ಆಕೆಯ ಮೇಲೆ ಅವರಿಗೆ ಪ್ರೀತಿ ಹೆಚ್ಚು. ಅವಳನ್ನು ಚಿಕ್ಕಂದಿನಿಂದ ಸಾಕಿದವರೂ ನನ್ನ ತಂದೆಯೇ! ಶಾಂತ ನನ್ನ ತಂದೆಯವರ ಅಕ್ಕನ ಮಗಳು. ಆದ್ದ ರಿಂದಲೇ ಆಕೆಯನ್ನು ಬೇರೆ ಯಾರಿಗಾದರೂ ಕೊಟ್ಟು ಮದುವೆಮಾಡಿಬಿಟ್ಟರೆ ಏನು ಕಷ್ಟಕ್ಕೆ ಗುರಿಯಾಗುತ್ತಾಳೋ ಎಂಬುದಾಗಿ ನೆನೆದು ನನ್ನ ಕುತ್ತಿಗೆಗೇ ಗಂಟುಹಾಕಿದರು. ಆಕೆ ಹಾಗೆ ಮಾಡುವವಳಲ್ಲ ಸಾರ್. ಅವಳ ಮೇಲೆ ಸಂದೇಹಬೇಡ."

"ಹೋಗಲಿ ಒಂದು ಕೆಲಸ ಮಾಡಿ. ನೀವೇ ಅಂತರಂಗದಲ್ಲಿ ರಹಸ

ವಾಗಿ ಅವರ ಬಳಿ ವಿಷಯವನ್ನು ತಿಳಿದುಕೊಂಡು ನನಗೆ ತಿಳಿಸಿ. ನನಗೆ ಒಂದೆರಡು ದಿನಗಳಲ್ಲಿ ತಿಳಿಸಿದರೂ ಚಿಂತೆಯಿಲ್ಲ. ಶಾಂತಮ್ಮನವರ ಮೇಲೆ ನಾನು ವೃಥಾ ಸಂದೇಹಪಡಬೇಕಾಗಿ ಬಂತು."

"ಸಾರ್. ನನ್ನ ಸತಿ ಶಾಂತ ಅಪರಾಧಿನಿ ಎನ್ನುವುದಕ್ಕೆ ಮೂಲ ಕಾರಣಕರ್ತರು ಯಾರೆಂಬುದನ್ನು ತಿಳಿಸಿದರೆ ಚೆನ್ನಾಗಿತ್ತು. ಒಂದು ವೇಳೆ ನಿಜವಾಗಿಯೂ ನನ್ನ ಶಾಂತಳೇ ತಂದೆಯವರಿಗೆ ವಿಷಕೊಟ್ಟಿದ್ದರೂ ನಾನು ಆ ವಿಷಯವನ್ನು ಮುಚ್ಚುಮರೆಯಲ್ಲಿಡಲಾರೆ. ಮತ್ತು ಆಪಾದನೆಯನ್ನು ನಿವಾರಿಸಿಕೊಳ್ಳಲು ಬೇರೆ ದಾರಿಯನ್ನು ಹುಡುಕಲಾರೆ. ನನ್ನ ತಂದೆಗಿಂತಲೂ ನನ್ನ ಹೆಂಡತಿ ನನಗೇನೂ ಹೆಚ್ಚಲ್ಲ. ಇಂದು ತಂದೆಗೆ ಹಾಕಿದ ವಿಷದ ಕೈ ನನ್ನನ್ನು ಬಿಡಲಾರದು. ನಾನು ಆಕೆಯನ್ನು ವಿಚಾರಿಸುತ್ತೇನೆ. ಆದರೆ.... ಈ ವಿಷಯ ನಿಮಗೆ ತಿಳಿದಿದ್ದು ಹೇಗೆ ಸಾರ್ ?"

"ಅದನ್ನು ನಾನು ನಿಮ್ಮ ತಂದೆಯವರು ಸತ್ತ ಆಸ್ಪತ್ರೆಯ ಮೊದಲನೆ ವಾರ್ಡಿನ ಹಗಲು ಡ್ಯೂಟಿಯ ನರ್ಸ್ ನಳಿನಿಯು ಆಕೆಯ ಜೊತೆಗಾರ್ತಿಯ ಬಳಿ ಮಾತನಾಡುತ್ತಿದ್ದಾಗ ಅವಳಾಡಿದ ಮಾತುಗಳನ್ನು ನಾನು ಮರೆಯಲ್ಲಿ ನಿಂತು ಕೇಳುತ್ತಿದ್ದೆ. ಅವಳ ಮಾತು ಶಾಂತಮ್ಮನ ಮೇಲೆ ಸಂದೇಹಗೊಳ್ಳು ವಂತೆ ಮಾಡಿತು. ಬಹಳ ಹೊತ್ತಾಯಿತು ಮಿಸ್ಟರ್ ರಾಜ್. ನಾನು ಹೊರಡುತ್ತೇನೆ. ಘಂಟೆ ಒಂದಕ್ಕೆ ಹತ್ತಿರ ಬರುತ್ತಿದೆ."

"ನಡೆದು ಹೋಗುತ್ತೀರಾ ಸಾರ್ ! ಅರರೆ, ಸ್ವಲ್ಪ ಇರಿ. ನನ್ನ ಕಾರು ಕಳುಹಿಸುತ್ತೇನೆ. ಮನೆಗೆ ಹೋಗಿ ಸೇರುವಿರಂತೆ."

"ಬೇಡ ಮಿಸ್ಟರ್ ರಾಜ್. ನಾನು ನಡೆದುಕೊಂಡೇ ಹೋಗುತ್ತೇನೆ. ಅಲ್ಲದೆ ರೈಲ್ವೆ ಸ್ಟೇಷನ್ ಬಳಿ ಯಾವುದೋ ಕೇಸಿಗಾಗಿ ಕಾಯಬೇಕಾಗಿದೆ."

"ಹೋಗಲಿ. ರೈಲ್ವೆ ಸ್ಟೇಷನ್‌ವರೆಗಾದರೂ ಕಾರಿನಲ್ಲಿ ಹೋಗುವಿರಂತೆ" ಎಂದು ಹೇಳಿ, "ಡ್ರೈವರ್, ಪತ್ತೇದಾರರನ್ನು ಸಿಟಿ ರೈಲ್ವೆ ಸ್ಟೇಷನ್‌ವರೆವಿಗೂ ಬಿಟ್ಟುಬರಬೇಕು" ಎಂದು ಆಜ್ಞೆಮಾಡಿ ತಾನು ನಡೆದುಕೊಂಡೇ ಹೊರಡಲು ದ್ಯುಕ್ತನಾದನು ರಾಜ್.

"ಸಾರ್. ಇದೇನನ್ಯಾಯ ? ಕಾರಿನ ಮಾಲೀಕರು ನೀವು. ನೀವು ಕೆಳಗಿಳಿದು ನನ್ನನ್ನು ಕಾರಿನಲ್ಲಿ ಕೂರಿಸಿ ಕಳುಹಿಸುತ್ತಿದ್ದೀರಲ್ಲಾ !"

“ನನ್ನ ಮನೆ ಪಕ್ಕದಲ್ಲೇ ಇದೆ. ನಾಲ್ಕು ಹೆಜ್ಜೆ ಮುಂದಿಟ್ಟರೆ ಸಾಕು, ಮನೆಯನ್ನು ಸೇರಬಹುದು. ಪಾಪ! ನೀವು ನನಗಾಗಿ ಇಷ್ಟು ಹೊತ್ತು ಇಲ್ಲೇ ಕಾದಿದ್ದು ಬಳಲಿದ್ದೀರಿ.”

ಡ್ರೈವರನ ಪಕ್ಕದಲ್ಲಿ ಥಾಮಸ್ ಕುಳಿತರು. ಹಿಂದಿನ ಸೀಟಿನಲ್ಲಿ ಕೂತಿದ್ದ ಒಬ್ಬ ಮುಸುಕುಹಾಕಿದ ವ್ಯಕ್ತಿ ಕಾರಿನ ಬಾಗಿಲನ್ನು ತೆಗೆದು ಕೆಳಗಿಳಿದ. ಅದೆಷ್ಟೋ ಎತ್ತರ. ದಪ್ಪವೂ ಕೂಡ. ಆದರೆ ಅವನು ಯಾರು ಎಂಬುದನ್ನು ಸರಿಯಾಗಿ ತಿಳಿದುಕೊಳ್ಳಲಾಗಲಿಲ್ಲ. ಥಾಮಸ್‌ರವರು ಆತನ ಮುಖವನ್ನು ನೋಡಬೇಕೆಂದು ಸ್ವಲ್ಪ ಗುರಿಯಿಡುವುದರಲ್ಲಿ ಡ್ರೈವರು ಕಾರನ್ನು ಸ್ಟಾರ್ಟ್ ಮಾಡಿದ. ಕಾರು ವೇಗವಾಗಿ ಹೊರಟಿತು. ಆ ವ್ಯಕ್ತಿಯ ಮುಖ ಕಾಣಲಾಗಲಿಲ್ಲ. ಮತ್ತೊಮ್ಮೆ ರಾಜ್‌ನನ್ನು ಸಂಧಿಸಿದಾಗ ಕೇಳಿ ತಿಳಿದುಕೊಂಡರಾಯಿತು ಎಂದು ಸುಮ್ಮನಿದ್ದುಬಿಟ್ಟರು ಥಾಮಸ್.

ಕಾರು ರೈಲ್ವೆ ಸ್ಟೇಷನ್ ಬಳಿ ನಿಂತಿತು. ಕಾರಿನಿಂದಿಳಿದ ಥಾಮಸ್‌ರವರು ಅಲ್ಲಿಯೇ ನಿಂತಿದ್ದ ಕಾನ್‌ಸ್ಟೇಬಲನನ್ನು ಕರೆದು,

“ಯಾವುದಾದರೂ ಪತ್ತೆ ಸಿಕ್ಕಿತೆ ?”

“ಇಲ್ಲ ಸಾಹೇಬರೆ. ರಜಾಕ್ ಜೊತೆಯಲ್ಲಿದ್ದ ಬೀಬೀಜಾನ್ ಮಾತ್ರ ಇಲ್ಲಿಗೆ ಬಂದಿದ್ದಳು.”

“ಯಾವುದಾದರೂ ಗಿರಾಕಿ ಹೊಂಚಿಕೊಂಡು ಹೋದಳೇ ?”

“ಹೌದು. ಮದರಾಸು ಗಾಡಿ ಒಂಭತ್ತು ಘಂಟೆಗೆ ಬಂದಿತು. ಆಗ ಯಾವನೋ ರೆಡ್ಡಿಯನ್ನು ಕರೆದುಕೊಂಡು ಹೋದಳು. ರೆಡ್ಡಿಯು ಆಂಧ್ರ ದೇಶದವನಿರಬೇಕೆಂದು ಕಾಣುತ್ತೆ. ಸೂಟ್‌ಕೇಸು, ಟ್ರಂಕು, ಹಾಸಿಗೆ ಎಲ್ಲವೂ ಆತನಲ್ಲಿತ್ತು. ಅವನ್ನು ಕೂಲಿಯವನು ಹೊತ್ತು ತಂದು ಟಾಕ್ಸಿಯಲ್ಲಿಟ್ಟ.”

“ಬೀಬೀಜಾನ್ ಜೊತೆಗೆ ಇನ್ಯಾರು ಬಂದಿದ್ದರು ?”

“ಚಿಕ್ಕ ಹುಡುಗ ಒಬ್ಬ ಜೊತೆಯಲ್ಲಿದ್ದ. ಮತ್ಯಾರೂ ಇರಲಿಲ್ಲ.”

“ರಜಾಕ್ ಕಡೆಯವರು ಮತ್ಯಾರೂ ಇಲ್ಲಿ ಬರಲಿಲ್ಲವೇನು ?”

“ಬೇರೆ ಯಾರೂ ಬಂದಹಾಗೆ ಕಾಣಲಿಲ್ಲ.”

“ಸರಿ, ಹುಷಾರಾಗಿ ಹೊಂಚುಹಾಕುತ್ತಿರು” ಎಂದು ಹೇಳಿ ಸ್ಟೇಷನ್‌ಗೆ

ಹೊರಟರು ಥಾಮಸ್. ಸ್ಟೇಷನಲ್ಲಿ ಇನ್ಸ್‌ಪೆಕ್ಟರ್ ಬಜ್ಜಯ್ಯ ಕಾಣಿಸಲಿಲ್ಲ. ಕೊನೆಗೆ ಕಿಸೆಗೆ ಕೈಹಾಕಿ ಸಿಗರೇಟ್ ಪ್ಯಾಕನ್ನು ತೆಗೆದು ಹೊತ್ತಿಸಿ ಹೊಗೆ ಬಿಡುತ್ತಾ ಅಲ್ಲೇ ಪಕ್ಕದಲ್ಲಿದ್ದ ಆರಾಮ ಕುರ್ಚಿಯಮೇಲೆ ಒರಗಿದರು.

ಪಕ್ಕದಲ್ಲಿ ನಿಂತಿದ್ದ ಪೋಲೀಸಿನವನನ್ನು ಮೆಲ್ಲನೆ ಕರೆದು ಆಯಾಸ ದಿಂದ,

"ಎಲ್ಲಯ್ಯಾ ನಿಮ್ಮ ಇನ್ಸ್‌ಪೆಕ್ಟರು ?"

"ಅದೇ ಸಾರ್. ಈಗ ಅರ್ಧ ಘಂಟೆಗೆ ಮುಂಚೆ ರೇಸ್‌ಕೋರ್ಸ್ ಕಡೆ ಕೊಲೆ ಮಾಡಿ ಒಬ್ಬನನ್ನು ನಡುಬೀದಿಯಲ್ಲಿ ಮಲಗಿಸಿಬಿಟ್ಟಿದ್ದಾರಂತೆ. ಕೊಲೆಯಾದವನು ಈ ಊರಿನವನಲ್ಲವಂತೆ. ಇನ್ಸ್‌ಪೆಕ್ಟರು ಅಲ್ಲಿಗೆ ಹೋಗಿದ್ದಾರೆ. ಜೊತೆಗೆ ನಾಲ್ಕಾರು ಪೋಲೀಸರೂ ಹೋಗಿದ್ದಾರೆ."

ಥಾಮಸ್ ಬೆಚ್ಚಿಬಿದ್ದರು. ಈಗತಾನೇ ರೈಲ್ವೆ ಸ್ಟೇಷನ ಬಳಿ ನಿಂತಿದ್ದ ಪೋಲೀಸ್ ಕಾನ್ಸ್‌ಟೇಬಲ್ ಬೀಬೀಜಾನ್ ಯಾರನ್ನೋ ಊರಿನಿಂದ ಬಂದವನನ್ನು ಜೊತೆಗೆ ಹಾಕಿಕೊಂಡು ಹೋಗುತ್ತಿದ್ದಳು ಎಂದ. ಅಷ್ಟರಲ್ಲೇ ಕೊಲೆ ಮಾಡಿ ಶವವನ್ನು ಬೀದಿಗೆ ತಂದುಹಾಕಿಬಿಟ್ಟಿದ್ದಾಳೆಯೇ !! ಅಂದುಕೊಂಡು ತಕ್ಷಣ ಸೈಕಲ್ಲನ್ನು ತೆಗೆದುಕೊಂಡು ರೇಸ್‌ಕೋರ್ಸಿನ ಕಡೆ ಹೊರಟರು ಥಾಮಸ್.

ಆಗ ರಾತ್ರಿ ಸುಮಾರು ಎರಡು ಘಂಟೆ ಸಮಯ. ನಡುಬೀದಿಯ ಕತ್ತಲೆಯಲ್ಲಿ ಒಂದು ಮರದ ಕೆಳಗೆ ಶವವನ್ನು ತಂದು ಮಲಗಿಸಿಬಿಟ್ಟು ಹೋಗಿದ್ದರು. ಶವದ ಹೊಟ್ಟೆಯಲ್ಲಿ ಕತ್ತಿಯನ್ನು ಪ್ರಯೋಗಿಸಿದ್ದರೆಂದು ಕಾಣುತ್ತೆ. ರಕ್ತವು ಉಕ್ಕಿಉಕ್ಕಿ ಬುಡುಬುಡು ಎಂದು ಸುರಿಯುತ್ತಲೇ ಇತ್ತು.

ಆ ಘೋರ ಕೊಲೆಯನ್ನು ಕಣ್ಣಾರೆ ಕಂಡು ಥಾಮಸ್‌ರವರು ಕಟಕಟನೆ ಹಲ್ಲುಗಳನ್ನು ಕಡಿದರು. ಎಂತಹ ನೀಚನಿರಬೇಕು. ಅನ್ಯಾಯವಾಗಿ ಕೊಲೆಮಾಡಿಹಾಕಿದ್ದಾನಲ್ಲಾ ಎಂದುಕೊಂಡರು. ಊರಿನ ಎಲ್ಲಾ ಕಡೆಯ ಪೋಲೀಸ್ ಸ್ಟೇಷನ್‌ಗಳಿಗೂ ವಿಷಯವನ್ನು ಹರಡಿಸಿದರು.

ಕೊಲೆ ಮಾಡಿದವರ್ಯಾರೆಂಬುದನ್ನು ಪತ್ತೆ ಹಚ್ಚಲು ಹತ್ತಾರು ಸಿ.ಐ.ಡಿ. ಗಳೂ, ಪೋಲೀಸರೂ, ಓಡಾಡಿದರು. ಗುರಿಯಿಟ್ಟು ನೋಡುತ್ತಿದ್ದರು. ದೀರ್ಘಾಲೋಚನೆ ಮಾಡಿದರು. ಕೊನೆಗೆ ಒಂದೂ ಪ್ರಯೋಜನವಾಗಲಿಲ್ಲ.

ಶವದ ಬಗ್ಗೆ ಸ್ಟೇಟ್‌ಮೆಂಟ್ ಬರೆದುಕೊಂಡು ಬೆಳಗ್ಗೆ ಶವವನ್ನು ದರ್ಶಮಾಡು ವಂತೆ ಹೇಳಿ ಹೊರಟರು ಬಜ್ಜಯ್ಯ ಮತ್ತು ಥಾಮಸ್.

ಅವರಿಬ್ಬರಿಗೂ ಮನಸ್ಸು ಸಮಾಧಾನವಿರಲಿಲ್ಲ. ಬೆಳಗ್ಗೆ ವಿಚಾರಿಸೋಣ ವೆಂದುಕೊಂಡು ಪೋಲೀಸ್ ಸ್ಟೇಷಗೆ ಬಂದರು.

ರಾತ್ರಿ ಎರಡು ಘಂಟೆ ಮೀರಿತ್ತು. ಯಾವುದೋ ಮಾತನಾಡಬೇಕೆಂದು ಇಸ್ಪೆಕ್ಟರು ಬಾಯಿ ತೆರೆಯುವಷ್ಟರಲ್ಲಿ ಪತ್ತೇದಾರ ಥಾಮಸ್‌ರವರು ಆರಾಮ ಕುರ್ಚಿಯ ಮೇಲೆ ಗೊರಕೆ ಹೊಡೆಯುತ್ತಾ ಮಲಗಿಬಿಟ್ಟಿದ್ದರು.

'ಸಂಜೆಯಿಂದಲೂ ಎಲ್ಲೆಲ್ಲಿಗೋ ಹೋಗಿ ಸುತ್ತಿ ಬಳಲಿದ್ದಾನೆ ಪಾಪ, ಥಾಮಸ್' ಎಂದುಕೊಂಡು ಬಜ್ಜಯ್ಯ ಸುಮ್ಮನಿದ್ದುಬಿಟ್ಟರು.

೬

ರಾಜ್ ಆರಾಮಕುರ್ಚಿಯಮೇಲೆ ಕೂತು ಸಿಗರೇಟನ್ನು ಸೇದುತ್ತಿದ್ದ. ಎದುರು ಟೇಬಲ್ ಮೇಲೆ ಶಾಂತ ಕಾಫಿ, ಫಲಾಹಾರಗಳನ್ನು ತಂದಿಟ್ಟಳು. ರಾಜ್ ಶಾಂತಳನ್ನು ದುರದುರನೆ ನೋಡಿದ. ಆಕೆಗೆ ಭಯವಾಯಿತು.

"ಏಕೆ ನನ್ನನ್ನು ಹಾಗೆ ಕ್ರೂರವಾಗಿ ನೋಡುತ್ತಿದ್ದೀರಿ. ನನಗೆ ಭಯ ವಾಗುತ್ತಿದೆ."

"ಆಹಾ, ನನ್ನ ಅರಗಿಣಿಯೇ. ನಾನು ನೋಡುವುದನ್ನು ಕಂಡು ಭಯ ಬಿದ್ದು ಹೋದೆಯಾ ? ನನ್ನ ತಂದೆಗೆ ವಿಷ ಕುಡಿಸುವ ಸಮಯದಲ್ಲಿ ಭಯ ವಿರಲಿಲ್ಲವೆಂದು ಕಾಣುತ್ತೆ ! ಅಲ್ಲವೇ ಶಾಂತ. ನನ್ನ ಶಾಂತ ಒಂದನ್ನೂ ಅರಿಯದ ಅಮಾಯಕಳು. ಪಾಪ ! ನಿನ್ನ ತಾಯಿಯಂತೆಯೇ ನೀನೂ ಇರಬೇಡವೇ. ನಿನ್ನ ತಾಯಿ ನಿನ್ನ ತಂದೆಯನ್ನೇ ಆಹುತಿ ತೆಗೆದುಕೊಂಡಳು, ನೀನು ನಿನ್ನನ್ನು ತಂದ ಮಾವನಿಗೇ ಸದ್ಗತಿ ತೋರಿಸಿದೆ. ಭಯವಾಗುತ್ತದೆ ಎನ್ನುವುದಕ್ಕೆ ನಾಚಿಕೆಯಾಗುವುದಿಲ್ಲವೇ ಘಾತಕಿ."

"ನೀವೇಕೆ ಹೀಗೆ ಹುಚ್ಚು ಹುಚ್ಚಾಗಿ ಮಾತಾಡುತ್ತಿದ್ದೀರಿ. ನಾನೇನು ಅಪರಾಧ ಮಾಡಿದೆ ?"

ನೀನೇನು ಅಪರಾಧ ಮಾಡಿದೆ ಎಂಬುದನ್ನು ನಿನ್ನ ಆತ್ಮಕ್ಕೆ ಕೇಳು. ಅದೇ ಹೇಳುತ್ತೆ. ಶಾಂತ....ನಿನಗೆ ನೀನೇ ಶತ್ರುವಾಗಿಹೋದೆ."

"ನಾನು ಯಾವ ಪಾಪವನ್ನೂ ಅರಿಯುವದವಳು. ನಿರ್ದೋಷಿ."

"ನಿರ್ದೋಷಿಯೆನ್ನುವುದು ನಾಲಿಗೆಯ ಚಮತ್ಕಾರ."

"ನಿಜವಾಗಿಯೂ ಹೇಳುತ್ತೇನೆ. ನಾನು ಯಾವ ಪಾಪವನ್ನೂ ಅರಿಯದವಳು."

"ಯಾವ ಪಾಪವನ್ನೂ ಅರಿಯದವಳು! ನಿನ್ನ ಮಾವನಿಗೆ ವಿಷ ಕೊಟ್ಟದ್ದು ನಿಜವೋ ಸುಳ್ಳೋ?"

"ನಾನು ಅಂತಹ ಪಾಪ ಕೆಲಸವನ್ನು ಮಾಡಲಾರೆ. ನನ್ನನ್ನು ನಂಬಿ. ಅಯ್ಯೋ ಮಾವನವರು ನನಗೆ ದೈವದಂತೆ ಇದ್ದರಲ್ಲಾ!" ಎಂದು ಅಳಲು ಮೊದಲಾದಳು ಶಾಂತ.

"ಮಾತಾಡಿದರೆ ಗದ್ಗದ ಸ್ವರದ ಮಾತು. ಸ್ವಲ್ಪ ಜೋರಾಗಿ ಮಾತನಾಡಿಬಿಟ್ಟರೆ ಕಣ್ಣೀರು. ಥೂ ಮೂದೇವಿ. ನಿನಗೆ ನಾಚಿಕೆಯೇ ಇಲ್ಲ. ಹಳ್ಳಿಯಲ್ಲಿ ಬಿದ್ದು ಕೊಳೆತು ಹೋಗಬೇಕಾದವಳನ್ನು ಕರೆತಂದು ರಾಣಿಯಂತೆ ಬದಲಾಯಿಸಬೇಕೆಂದರೆ ಎಲ್ಲಿಂದ ಸಾಧ್ಯ?"

"ಕೋಪಮಾಡಿಕೊಳ್ಳಬೇಡಿ. ಕಾಫಿಯನ್ನು ಕುಡಿಯಿರಿ. ಸಮಾಧಾನವಾಗುತ್ತೆ."

"ನೀನೇ ಕುಡಿ ನಿನ್ನ ಕಾಫಿಯನ್ನು" ಎಂದು ಗ್ಲಾಸಿನಲ್ಲಿದ್ದ ಬಿಸಿ ಕಾಫಿಯನ್ನು ಶಾಂತಳ ಮೇಲೆ ಸುರಿದು ಫಲಾಹಾರದ ತಟ್ಟೆಯನ್ನು ಒದ್ದು ಕೋಟನ್ನು ಹೆಗಲ ಮೇಲೆ ಹಾಕಿಕೊಂಡು ಸರ್ರನೆ ಹೊರಹೊರಟನು.

ಗೇಟಿನ ಬಳಿ ಕಾರು ನಿಂತಿತ್ತು. ಕಾರಿನಲ್ಲಿ ಕುಳಿತ ರಾಜ್. ಕಾರು ಕದಲಿತು.

ಕಾರು ನರ್ಸ್ ನಳಿನಿಯ ಮನೆಯ ಬಳಿ ನಿಂತಿತು. ಬಾಗಿಲು ತಟ್ಟಿದನು ರಾಜ್. ನಳಿನಿಯು ಬಾಗಿಲು ತೆಗೆದಳು.

"ಓಹೋ ನಾನು ಹೇಳಿದಂತೆಯೇ ಈದಿನ ಆಸ್ಪತ್ರೆಯಲ್ಲಿ ಲೀವ್ ತೆಗೆದುಕೊಂಡು ಬಂದಿರುವಂತಿದೆ."

"ಹೌದು. ಲೀವ್ ತೆಗೆದುಕೊಂಡು ಬಂದೆ. ಅದೂ ನಿಮ್ಮ ಮಾತಿನ ಪ್ರಕಾರ. ಯಾರನ್ನು ಕೊಲೆಮಾಡಬೇಕಾಗಿತ್ತೋ! ಜಾಗ್ರತೆ ಹೇಳಿದರೆ ಮುಗಿಸಿಬಿಡಬಹುದು."

"ಇಗೋ ನಾನೇ ಇದ್ದೇನಲ್ಲಾ. ನನಗೇ ವಿಷ ಕುಡಿಸಿಬಿಡು. ನಿನ್ನ ತೊಡೆಯ ಮೇಲಿಯೇ ಪ್ರಾಣ ಬಿಟ್ಟುಬಿಡುತ್ತೇನೆ."

"ಅದಕ್ಕೆ ಸಮಯಬೇಡವೇ ? ಸರಿಯಾದ ಸಮಯ ಸಿಕ್ಕಿತೆಂದರೆ ಅದನ್ನು ಮಾಡಲೂ ಹಿಂಜರಿಯಲಾರೆ."

"ಬಹಳವಾಗಿ ನನ್ನನ್ನು ಶೋಧನೆ ಮಾಡಬೇಡ ನಳಿನಿ. ಈಗೀಗ ನಿನ್ನಿಂದಲೇ ಕತೆಯು ಮಾರ್ಪಾಡಾಗುವುದರಲ್ಲಿದೆ."

"ಕಥೆಯು ನನ್ನಿಂದ ಮಾರ್ಪಾಡಾಗುವುದೇ ?"

"ಹೌದು ನಳಿನಿ. ನೀನು ನೆನ್ನೆಯ ದಿನ ಸಂಜೆ ಆಸ್ಪತ್ರೆಯ ಕೆಲಸ ವನ್ನು ಮುಗಿಸಿಕೊಂಡು ಮನೆಗೆ ಹಿಂತಿರುಗುತ್ತಿದ್ದಾಗ ದಾರಿಯಲ್ಲಿ ನಿನ್ನ ಸ್ನೇಹಿತೆಯೋರ್ವಳನ್ನು ಸಂಧಿಸಿದ್ದುಂಟೆ ?"

"ಹೌದು....ಅದಕ್ಕಾಗಿ.... !"

ಆಕೆಯ ಬಳಿ "ರಾಮರಾಯರ ಕೊಲೆ ಸಂಬಂಧವಾಗಿ ರಾರ್ಜ ಹೆಂಡತಿ ಶಾಂತಮ್ಮನ ಮೇಲೆ ನನಗೆ ಸಂಶಯವಿದೆ, ನ್ಯಾಯಾನ್ಯಾಯಗಳು ಯಾವ ಕಡೆ ಆಗುತ್ತದೋ ಆಗಲಿ. ಒಟ್ಟಿನಲ್ಲಿ ಷಣ್ಮುಗಂ ತಪ್ಪಿತಸ್ಥನಲ್ಲ ಎಂದು ಹೇಳುತ್ತಿದ್ದೆಯಾ ?"

"ಹೌದು.... !"

"ನೀನು ನಿನ್ನ ಸ್ನೇಹಿತೆಯೊಂದಿಗೆ ಮಾತನಾಡುತ್ತಿದ್ದುದನ್ನು ಮರೆ ಯಿಂದಲೇ ಕೇಳಿ ತಿಳಿದುಕೊಂಡ ಒಬ್ಬ ಪತ್ತೇದಾರರು ನೆನ್ನೆಯ ರಾತ್ರಿ ಎರಡು ಘಂಟೆಯ ಹೊತ್ತಿನಲ್ಲಿ ಬಂದು ನನ್ನ ಬಳಿ ವಿಷಯ ತಿಳಿಸಿದರು. ಅವರಿಗೂ ಶಾಂತಳ ಮೇಲೆ ಅನುಮಾನವಾಗಿದೆಯಂತೆ. ಅವರು ಶಾಂತಳನ್ನು ವಿಚಾರಣೆ ಮಾಡಬೇಕಂತೆ ! ಪಾಪ, ಶಾಂತ ಏನು ಮಾಡಿಯಾಳು !"

"ಶಾಂತಳನ್ನು ವಿಚಾರಣೆ ಮಾಡಿದ್ದಾಯಿತೆ ?"

"ಅಷ್ಟು ದೂರಕ್ಕೆ ನಾನು ಬಿಡಲಿಲ್ಲ. ಈ ರಾತ್ರಿ ನಾನೇ ಶಾಂತಳ ಬಳಿ ವಿಚಾರಣೆ ಮಾಡಿ ತಿಳಿದುಕೊಂಡು ನಿಮಗೆ ಒಂದೆರಡು ದಿನಗಳಲ್ಲಿ ತಿಳಿಸುತ್ತೇನೆ ಎಂದು ಹೇಳಿ ಕಳುಹಿಸಿದ್ದೇನೆ."

"ಶಾಂತಳನ್ನು ಕೇಳಿದಿರಾ ?"

"ಕೇಳದೇ ಇರುತ್ತೇನೆಯೇ ! ಕೇಳಿದೆ. ಅಂಗಲಾಚಿ ಬೇಡುತ್ತಾಳೆ

ಅರ್ಧಾಂಗಿ. ತಪ್ಪಿತಸ್ಥಳಲ್ಲದ ತಬ್ಬಲಿಯನ್ನು ತಾಪತ್ರಯಕೊಟ್ಟು ತತ್ತ್ರಳಿಸಿ ಬಿಡಲು ನನಗೇಕೋ ತಾತ್ಸಾರವಾಗಿದೆ. ಈಗ ಮುಂದೇನು ಮಾಡುವುದೆಂದು ಬಗೆ ಹರಿಯದೆ ಬಾಡುತ್ತಿದ್ದೇನೆ ನಳಿನಿ.''

"ಬಾಡಿಹೋಗುವ ಮುನ್ನ ಬೇರೊಬ್ಬನನ್ನು ತಯಾರುಮಾಡಿ ಶಿಕ್ಷೆಗೊಳಗಾಗುವಂತೆ ಮಾಡಬೇಕು. ನಾನು ಷಣ್ಮುಗಂ ಜೊತೆಯಲ್ಲೇ ಜೀವನ ಸಾಗಿಸುತ್ತೇನೆ. ಆತನನ್ನು ಹೇಗಾದರೂ ಬಿಡುಗಡೆ ಮಾಡಿಸಿ. ನಿಮ್ಮ ವಿಷಯ ನೋಡಲು ಹೋದರೆ ತುಂಬಾ ಕರ್ಕಶವಾಗಿ ಕಾಣುತ್ತಿದೆ. ನಿಮ್ಮ ಸಹವಾಸದಿಂದ ಸ್ವಲ್ಪ ದೂರವಿದ್ದರೆ ಲೇಸೆಂದು ಕಾಣುತ್ತದೆ. ನಿಮಗೆ ನಾನು ಮಾಡಿದ ಉಪಕಾರಕ್ಕೆ ನನ್ನ ಷಣ್ಮುಗಂನನ್ನು ಬಿಡುಗಡೆ ಮಾಡಿಸಿಬಿಡಿ. ಬೇರೆ ಯಾವ ಪ್ರತ್ಯುಪಕಾರವೂ ನಿಮ್ಮಿಂದ ನನಗೆ ಬೇಡ."

"ಸುಮ್ಮನೆ ವೃಥಾ ಮನಸ್ಸು ಹುಣ್ಣು ಮಾಡಿಕೋಬೇಡ ನಳಿನಿ. ನಾವಿಬ್ಬರೂ ದೀರ್ಘಕಾಲದವರೆಗೂ ಸಂತೋಷದಿಂದ ಬಾಳಬೇಕು ಎಂಬುದಾಗಿ ನೆನೆದು ಎಷ್ಟೋ ಸಂತೋಷಪಡುತ್ತಿದ್ದೇನೆ. ಅಂತಹ ಸಂತೋಷಕ್ಕೆ ನೀನು ಚುಚ್ಚುಮಾತುಗಳನ್ನಾಡಿ ಮನನೋಯಿಸಬೇಡ. ಬಾ! ಹತ್ತಿರಕ್ಕೆ ಬಾ! ಎಲ್ಲಿ ನಿನ್ನ ಸುಂದರ ಮುಖಾರವಿಂದದಲ್ಲಿ ಸ್ವಲ್ಪ ಚಂದ್ರನ ಕಾಂತಿ ಬೀರುವಂತೆ ಮುಗುಳುನಗೆಯನ್ನು ತೋರ್ಪಡಿಸು. ಅದನ್ನಾದರೂ ಕಂಡು ನನ್ನ ಹೃದಯ ಹರ್ಷಗೊಳ್ಳಲಿ" ಎನ್ನುತ್ತಾ ರಾಜ್ ನಳಿನಿಯ ಬಳಿ ಸರಿದು ಆಕೆಯ ಕೈಗಳನ್ನು ಹಿಡಿದುಕೊಂಡನು.

ನಳಿನಿಯು ಕೈಯನ್ನು ಒದರಿದಳು. ರಾಜ್ ಆಕೆಯನ್ನು ಬಿಡಲಿಲ್ಲ. ಆಕೆಯ ತೋಳನ್ನು ಬಿಗಿಯಾಗಿ ಹಿಡಿದುಕೊಂಡನು. ನಳಿನಿಯು ತೋಳನ್ನು ಬಿಡಿಸಿಕೊಳ್ಳಲು ಪ್ರಯತ್ನಿಸಿದಳು. ಆದರೂ ರಾಜ್ ಆಕೆಯ ತೋಳನ್ನು ಬಿಡಲಿಲ್ಲ. ನಳಿನಿಯ ಬೆನ್ನಿಗೆ ಮೆಲ್ಲನೆ ತನ್ನೆದೆಯನ್ನು ತಗುಲಿಸಿದ ರಾಜ್. ಹಾಗೆಯೇ ಹಿಂಭಾಗದಿಂದಲೇ ನಳಿನಿಯ ಮೈಯನ್ನು ಬಿಗಿಯಾಗಿ ಅದುಮಿಕೊಂಡನು. ನಳಿನಿಯು ಆಗ ರಾಜ್‌ನನ್ನು ತಿರಸ್ಕರಿಸಲಿಲ್ಲ. ಆಕೆಯ ಮೈ 'ಜುಂ' ಎನ್ನುತ್ತಿತ್ತು. ರಾಜ್‌ನ ಕೈಗಳನ್ನು ಗಟ್ಟಿಯಾಗಿ ಹಿಡಿದುಕೊಂಡಳು. ರಾಜ್‌ನ ಕಡೆಗೆ ತಿರುಗಿದಳು. ಇಬ್ಬರ ಹೃದಯಗಳೂ ಒಂದಾಯಿತು.

"ರಾರ್ಜ, ನಿನ್ನ ಪ್ರೇಮ ನಿಜವಾದದ್ದೇ?" ಪಿಸುಮಾತಿನಲ್ಲಂದಳು ನಳಿನಿ.

"ಅದರಲ್ಲಿ ಸಂಶಯ ಪಡಬೇಕೆ? ನಳಿನಿ. ಆಹಾ! ನೋಡು! ನಿನ್ನ ಕೆನ್ನೆಯು ಎಷ್ಟು ಮೃದುವಾಗಿರುವುದು! ಮುತ್ತುಗಳಂತಿರುವ ನಿನ್ನ ಹಲ್ಲುಗಳು ನೀನು ನಕ್ಕರೆ ಅದೆಷ್ಟೋ ಸೊಬಗನ್ನು ಕೊಡುತ್ತಾ ಇದೆ! ಗುಲಾಬಿಯ ದಳಗಳಂತಿರುವ ನಿನ್ನ ತುಟಿಗಳು! ಜಿಂಕೆಯ ನೋಟದಂತಿರುವ ನಿನ್ನ ನಯನಗಳು! ದುಂಡಾದ ಮುಖ! ವಿಶಾಲವಾದ ಹಣೆ! .... ನಳಿನಿ! ನೀನು ನಿಜವಾಗಿಯೂ ದೇವಲೋಕದ ಅಪ್ಸರಸೆಯಂತಿರಬೇಕಾದವಳು! ಹೇಗೋ ಭೂಲೋಕದಲ್ಲಿ ಜನಿಸಿ ನನ್ನಂತಹ ಹೀನ ಮನುಜನ ಕೈಗೆ ಸಿಕ್ಕಿಕೊಂಡೆ!" ರಾರ್ಜ ನಳಿನಿಯನ್ನು ಗಟ್ಟಿಯಾಗಿ ಅದುಮಿಕೊಂಡೇ ಇದ್ದನು.

ನಳಿನಿಯೂ ರಾರ್ಜನನ್ನು ಬಿಗಿಯಾಗಿ ಹಿಡಿದುಕೊಂಡೇ ಇದ್ದಳು.

"ರಾರ್ಜ. ನೀನು ನನ್ನ ದೇವದೇವೋತ್ತಮ. ಇಂದ್ರಲೋಕವೆಂಬುದೊಂದಿದ್ದು ಆ ಲೋಕಕ್ಕೆ ಇಂದ್ರನು ಅರಸನಾಗಿದ್ದು ಆತನ ಅಹಂಕಾರವನ್ನು ಅಡಗಿಸಲು ಹಾರಿಬಂದ ಇಂದ್ರಜಿತನು ಒಂದುವೇಳೆ ಇದ್ದಿದ್ದರೆ ಆತನು ನಿನ್ನಂತೆಯೇ ಇರಬೇಕು. ಪ್ರಾಣಪ್ರಿಯಾ! ನಿನ್ನಲ್ಲಿ ಎಷ್ಟು ಸೂಕ್ಷ್ಮಬುದ್ಧಿಗಳಿವೆ! ನಿನ್ನ ರೂಪು ನೋಡುತ್ತಿದ್ದರೆ ನೋಡುತ್ತಲೇ ಇರಬೇಕೆನ್ನಿಸುತ್ತದೆ. ನಿನ್ನ ದೇಹವು ಪುಟಕ್ಕೆ ಹಾಕಿದ ಚಿನ್ನದಂತೆ ಥಳಥಳಿಸುತ್ತಿದೆ. ಮನೋಹರಾ! ಇನ್ನೂ ಜೋರಾಗಿ ಪ್ರೇಮಿಸು! ನಾನು ಏನಾದರೂ ತಪ್ಪು ಮಾತುಗಳನ್ನಾಡಿದ್ದರೆ ಅದಕ್ಕಾಗಿ ಕ್ಷಮೆ ಬೇಡುತ್ತೇನೆ."

"ನೀನೇಕೆ ಕ್ಷಮೆ ಬೇಡಬೇಕು ನಳಿನಿ. ನಾನು ನಿನ್ನಲ್ಲಿ ಬೇಡಬೇಕು. ತಪ್ಪಿತಸ್ಥ ನಾನೇ! ಒಂದೂ ಅರಿಯದವಳಾದ ನಿನಗೆ ಇಲ್ಲಸಲ್ಲದ ಆಸೆ ತೋರಿಸಿ, ನಿನ್ನ ಬುದ್ಧಿಯನ್ನು ಮಾರ್ಪಡಿಸಿ, ನಿನಗೆ ಈ ತರಹ ಘೋರ ಕೃತ್ಯವನ್ನು ಮಾಡೆಂಬುದಾಗಿ ಹೇಳಿಕೊಟ್ಟವನು ನಾನೇ! ನಾನೇ ತಪ್ಪಿತಸ್ಥನು. ನಿನ್ನನ್ನು ನೀನೇ ನಿಂದಿಸಿಕೊಳ್ಳಬೇಡ" ಎಂದ ರಾರ್ಜ.

ಕೆಲಹೊತ್ತು ಇಬ್ಬರೂ ಸ್ತಬ್ಧರಾದರು. ಇಬ್ಬರ ಬಾಯಲ್ಲೂ ಮಾತೇ ಹೊರಡಲಿಲ್ಲ. ಸುಮಾರು ಅರ್ಧ ಘಂಟೆ ಅವರಿಬ್ಬರೂ ಲೋಕದ ಮೇಲೆ ಇದ್ದಾರೆಂಬುದು ಅವರಿಗೇ ಗೊತ್ತಾಗಲಿಲ್ಲ. ಸ್ವರ್ಗದಲ್ಲಿ ಸಂಚಾರ ಮಾಡು

ತ್ತಿರುವಂತಿತ್ತು ಅವರಿಬ್ಬರಿಗೆ. ಮೆಲುದನಿಯಲ್ಲಿ ಏನೇನನ್ನೋ ಮಾತನಾಡು ತ್ತಿದ್ದರು. ಆ ಮಾತುಗಳು ಪರರ ಕಿವಿಗೆ ಬೀಳುತ್ತಿರಲಿಲ್ಲ.

ಅಸ್ತವ್ಯಸ್ತವಾಗಿದ್ದ ಉಡುಪನ್ನು ಸರಿಪಡಿಸಿಕೊಳ್ಳುತ್ತಾ ನಳಿನಿಯು ಪುನಃ ರಾರ್ಜನನ್ನು ಅಲ್ಲಗಳೆಯಲು ಮೊದಲಾದಳು.

"ನೋಡಲು ದೊಡ್ಡ ಮನುಷ್ಯನಂತಿದ್ದೀಯೆ. ಬಹಳ ಚಿಕ್ಕ ಬುದ್ಧಿ. ತಾಳಿ ಕಟ್ಟಿದ ಹೆಂಡತಿಯಿದ್ದು ಬೇರೊಬ್ಬಳನ್ನು ಅಪೇಕ್ಷಿಸುವುದು ಅಕ್ರಮ, ಅನ್ಯಾಯ. ನಿನ್ನ ಮುಖವನ್ನು ನನಗೆ ತೋರಿಸಬೇಡ."

"ಇನ್ನುಮೇಲೆ ನನ್ನ ಹೆಂಡತಿ ನೀನೇ! ಇಂದಿನಿಂದ ಶಾಂತ ನನ್ನ ಹೆಂಡತಿಯಲ್ಲ. ಆಕೆ ನಮ್ಮ ಮನೆಯ ಕೆಲಸಗಾರಳು. ಅದೂ ಅಲ್ಲದೆ ಶಾಂತಾ ರಾಮರಾಯರನ್ನು ವಿಷ ಹಾಕಿ ಕೊಂದವಳು. ಇದರಲ್ಲಿ ಎಳ್ಳಷ್ಟೂ ಸಂಶಯವಿಲ್ಲ."

"ಸರಿಸರಿ, ಈಗ ಶಾಂತಳೇ ಕೊಲೆಗಾರಳಾಗಿಬಿಡುವಳೆಂದು ಕಾಣುತ್ತೆ."

"ನಿಸ್ಸಂದೇಹವಾಗಿ."

"ಅದು ಹೇಗೆ ಎಂಬುದನ್ನು ವಿವರಿಸಲು ಸಾಧ್ಯವೇ?"

"ಇನ್ನೆರಡು ದಿನಗಳ ನಂತರ ನೀನೇ ಅರ್ಥಮಾಡಿಕೊಳ್ಳುತ್ತಿ."

"ಇಂದು ಅನ್ಯಾಯವಾಗಿ ಆಸ್ಪತ್ರೆಗೆ ರಜಾ ತೆಗೆದುಕೊಂಡೆ. ಕಾಲ ಕಳೆಯಲು ಬೇಜಾರಾಗಿದೆ."

"ಹಾಗಾದರೆ ನಡಿ ಮತ್ತೆ. ಸಿನಿಮಾಗೆ ಹೋಗೋಣ."

"ಎಲ್ಲಿಗೆ?"

"ಕಂಟೋನ್ಮೆಂಟಿಗೆ."

"ಯಾರಾದರೂ ನೋಡಿದರೆ........"

"ನೋಡಲಿ. ನೋಡಿ ನಲಿಯಲಿ ಅಥವಾ ನಿಂದಿಸಲಿ. ಲೋಕದ ಮೇಲಿರುವ ಜನಗಳು ವಿಧವಿಧವಾಗಿರುತ್ತಾರೆ. ಅದಕ್ಕೆಲ್ಲಾ ನಾವು ಲಕ್ಷ್ಯ ಕೊಡಬಾರದು ನಳಿನಿ."

"ಒಂದರ್ಧ ಗಂಟೆ ಸುಮ್ಮನೆ ಕೂತಿರಿ. ಕಾಫಿ ಮಾಡಿ ತಂದುಕೊಡು ತ್ತೇನೆ. ಅಲ್ಲದೆ ಬಟ್ಟೆಯೆಲ್ಲವೂ ಕೆಟ್ಟು ಹೋಗಿದೆ. ಬೇರೆ ಬಟ್ಟೆಯನ್ನು ಬದಲಾಯಿಸಿಕೊಳ್ಳುತ್ತೇನೆ."

"ಸರಿ. ನಿನ್ನಿಷ್ಟ. ನಿನ್ನ ಚಿತ್ತವಿದ್ದಂತೆ ನಡೆಯುಬಹುದು."

ನಳಿನಿಯು ರಾಜ಼ನನ್ನು ಮಂಚದ ಮೇಲೆ ಕೂರಿಸಿ ಒಳಗೆ ಹೋದಳು.

ಒಂದು ಗಂಟೆ ಕಳೆಯಿತು. ನಳಿನಿಯು ಬರಲಿಲ್ಲ.

"ಬೇಗ ಬಾ, ನಳಿನಿ" ಎಂದು ಎರಡು ಮೂರು ಬಾರಿ ಕೂಗಿದ ರಾಜ಼.

ಕಾಫಿ ಬಟ್ಟಲೊಂದನ್ನು ಕೈಲಿ ಹಿಡಿದು ಮೆಲ್ಲನೆ ಅಡಿಯ ಮೇಲೆ ಅಡಿ ಯಿಡುತ್ತಾ 'ನನ್ನನ್ನು ಕೂಗಿದಿರೇನು ?' ಎನ್ನುತ್ತಾ ಕಿರುನಗೆ ಬೀರುತ್ತಾ ಬರುತ್ತಿದ್ದಳು ನಳಿನಿ.

ಆಗ ನಳಿನಿಯನ್ನು ನೋಡಿದ ರಾಜ಼ನ ಸಂತೋಷಕ್ಕೆ ಪಾರವೇ ಇಲ್ಲ. ಡಬ್ಬಲ್ ಜಡೆ, ಹಸುರು ಸೀರೆ, ಹಸುರು ರವಿಕೆ, ಜಡೆಗೆ ಹಾಕಿರುವ ಹಸುರು ರಿಬ್ಬನ್, ಹಸುರು ಕೈಚೀಲ, ಹಸುರು ಹೂಗಳು, ಹಣೆಯಲ್ಲಿ ಹಸುರು ಬಣ್ಣದ ಕುಂಕುಮದ ಚುಕ್ಕೆ ಪ್ರತಿಯೊಂದೂ ಹಸುರೇ ! ಬಿಳೀ ಮುಖಕ್ಕೆ ಆ ಹಸುರು ಬಣ್ಣದ ಪ್ರತಿಯೊಂದು ವಸ್ತುಗಳೂ ಅದೆಷ್ಟೋ ಮೆರುಗು ಕೊಡುತ್ತಿತ್ತು. ಅಪ್ಸರಸೆಯೋ ! ರಂಭೆಯೋ ! ಊರ್ವಸಿಯೋ ! ಎಂಬುದಾಗಿ ರಾಜ಼ಗೆ ಸಂದೇಹವಾಯಿತು.

ದಿಗ್ಭ್ರಮೆ ಹೊಂದಿ ಕೂತಿದ್ದ ರಾಜ಼ನ ಕೈಗೆ ಕಾಫಿಯ ಬಟ್ಟಲನ್ನು ಕೊಟ್ಟಳು ನಳಿನಿ. ಕಾಫಿ ಬಿಸಿಯಾಗಿದ್ದುದರಿಂದ ಬಟ್ಟಲು ಬಿಸಿಯಾಗಿಯೇ ಇತ್ತು. ರಾಜ಼ ಸ್ವಾಧೀನಕ್ಕೆ ಬಂದ. ಪುನಃ ನಳಿನಿಯನ್ನು ನೋಡಿದ. ನಳಿನಿ ಮತ್ತಷ್ಟು ಪ್ರಕಾಶಮಾನವಾಗಿದ್ದಳು. ಕಾಫಿಯ ಬಟ್ಟಲನ್ನು ಒಂದು ಮೂಲೆಗೆ ಎಸೆದು "ರಾಣೀ. ನೀನೆಷ್ಟು ಅಂದವಾಗಿದ್ದೀ. ನಿನ್ನ ಅಂದ ವನ್ನು ನಾನು ಏನೆಂದು ವರ್ಣಿಸಲಿ" ಎನ್ನುತ್ತಾ ಪುನಃ ಬಿಗಿದಪ್ಪಿ ಮುತ್ತು ಕೊಟ್ಟು ತೊಡೆಯಮೇಲೆ ಕುಳ್ಳಿರಿಸಿಕೊಂಡನು.

" ನಿಮಗೇಕೆ ಇಂತಹ ಆಸೆ. ನಿಮಗೆ ರಾತ್ರಿ ಹಗಲೂ ಒಂದೇ ಎಂದು ಕಾಣುತ್ತೆ."

"ಪ್ರೇಮಕ್ಕೆ, ಪ್ರೇಮಿಸಿಕೊಳ್ಳುವುದಕ್ಕೆ, ಪ್ರೇಮ ಕೊಡಲೂ, ತೆಗೆದು ಕೊಳ್ಳಲೂ ಸಮಯ ಬೇರೆ ನಿರೂಪಣೆಯಾಗಿದೆಯೇ ನಳಿನಿ. ಹಾಗೆ ಒಂದು ವೇಳೆ ನಿರೂಪಣೆಯಾಗಿದೆ ಎಂದರೆ ಹಾಗೆ ಹೇಳುವವನು ಶುದ್ಧ ಮುಠ್ಠಾಳನೇ ಇರಬೇಕೆಂದು ನನ್ನ ಭಾವನೆ" ಎನ್ನುತ್ತಿದ್ದ ರಾಜ಼.

ಬಾಗಿಲನ್ನು ಧಡಧಡನೆಂದು ತಟ್ಟಿ 'ಪೋ....ಸ್ಟ್....' ಎಂದು ಕೂಗಿದ ಶಬ್ದ ಕೇಳಿಸಿತು. ನಳಿನಿ ಎದ್ದುಹೋಗಿ ಬಾಗಿಲನ್ನು ತೆಗೆದಳು.

ಪೋಸ್ಟಿನವನು ಕವರೊಂದನ್ನು ನಳಿನಿಯ ಕೈಗೆ ಕೊಟ್ಟು ಹೋದನು.

ನಳಿನಿಗೆ ಆಶ್ಚರ್ಯವಾಯಿತು. 'ನನಗೆ ಕಾಗದ ಬರೆಯುವವರು ಯಾರಿದ್ದಾರೆ ಈ ಸಮಯದಲ್ಲಿ' ಎಂದು ನೆನೆನೆನೆದು ಮರುಗಿದಳು.

ಕಾಗದವನ್ನು ಬಿಚ್ಚಿ ನೋಡಿದಳು. ಅದರಲ್ಲಿ—

"ಪ್ರಿಯಳಾದ ನರ್ಸ್ ನಳಿನಿ,

ನೀನು ಮಾಡಿದ ಪ್ರತಿಯೊಂದು ಕೆಲಸವೂ ನನಗೆ ತಿಳಿದಿದೆ. ಅಲ್ಲದೆ ಉತ್ತಮಗೊಳ್ಳುತ್ತಿದ್ದ ರಾಮರಾಯರನ್ನು ರಾಜ್ಯ ಮಾತಿನಿಂದ ದಿಕ್ಕೆಟ್ಟು ನಿನ್ನ ಬುದ್ಧಿಯನ್ನು ನಿನ್ನ ಹಿಡಿತದಲ್ಲಿಟ್ಟುಕೊಳ್ಳದೆ ವಿಷವನ್ನು ಕುಡಿಸಿ ಈ ಲೋಕದಿಂದ ಹಾರಿಸಿದೆ. ನಿನ್ನನ್ನು ಪ್ರೇಮಿಸಬೇಕೆಂಬ ಆಸೆ ನನಗೆ ಬಹಳ ದಿನಗಳಿಂದ ಇತ್ತು. ಅದು ನಿನಗೂ ತಿಳಿದಿರಬೇಕು. ಆದರೆ ನೀನೂ ಸಹಾ ಒಂದೂ ತಿಳಿಯದವಳಂತೆ ನಟಿಸುತ್ತಿದ್ದೀಯೆ. ಷಣ್ಮುಗಂ ತಪ್ಪಿತಸ್ಥನಾಗಿರ ಲೇಬೇಕೆಂಬ ಸಂದೇಹವು ಆತನನ್ನು ರಿಮ್ಯಾಂಡಿನಲ್ಲಿರಿಸಿಕೊಂಡಿದೆ. ಈಗ ನೀನು ಒಬ್ಬಂಟಿಗಳಾಗಿದ್ದಿ. ನಿನಗೂ ಯಾರೂ ಇಲ್ಲ. ನನಗೂ ಯಾರೂ ಇಲ್ಲ. ನಿನಗೆ ಒಪ್ಪಿಗೆಯಿದ್ದರೆ ನಾನು ನಿನ್ನೊಂದಿಗೆ ಜೀವನ ಸಾಗಿಸೋಣ ವೆಂದು ತೀರ್ಮಾನಿಸಿಕೊಂಡಿದ್ದೇನೆ. ನನಗೆ ತಿಂಗಳಿಗೆ ನಲವತ್ತು ರೂಪಾಯಿ ಸಂಬಳವಾದರೂ, ರೋಗಿಗಳಿಂದಲೂ, ರೋಗಿಗಳಿಗೆ ಕೊಡುತ್ತಿರುವ ಹಾಲು, ಬ್ರೆಡ್ಡು ಇವುಗಳನ್ನು ಉಳಿಸಿಕೊಂಡು ಮಾರುವುದರಿಂದಲೂ, ದಿನಕ್ಕೆ ಐದು ರೂಪಾಯಿಗೆ ಮೇಲೆ ಸಂಪಾದನೆ ಇದೆ. ನಿನಗೆ ಬೇಕಾದ ಪದಾರ್ಥವನ್ನು ತಂದುಕೊಡಲು ನನ್ನಿಂದ ಸಾಧ್ಯವಿದೆ. ದಯವಿಟ್ಟು ನನ್ನ ಕಾಗದಕ್ಕೆ ಉತ್ತರ ಕೊಡು. ಹಾಗೆ ನೀನು ಈ ವಿಷಯವನ್ನು ಬೇರೆ ಯಾರಿಗಾದರೂ ತಿಳಿಸಿದರೆ, ನಿನ್ನ ಗುಟ್ಟು ರಟ್ಟುಮಾಡಿ ನೀನು ಗಲ್ಲುಗಂಭವನ್ನು ಹತ್ತುವವರೆ ವಿಗೂ ಬಿಡುವುದಿಲ್ಲ. ಹೆಚ್ಚು ಬರೆಯಲು ನನಗೆ ಇಷ್ಟವಿಲ್ಲ.

ಇಂತಿ,

ಬಾಷಾ, ವಾರ್ಡ್‌ಬಾಯ್"

ಕಾಗದವನ್ನು ಓದಿದ ನಂತರ ನಳಿನಿಯ ಮೈಯೆಲ್ಲವೂ ಬೆವರು ಬೆವರಾ ಯಿತು. 'ಪಾಪಿಷ್ಠ ಮುಂಡೇಮಗ. ನಾನು ರಾಮರಾಯರಿಗೆ ವಿಷ

ಕೊಟ್ಟಿದನ್ನು ಹೇಗೋ ನೋಡಿಕೊಂಡುಬಿಟ್ಟನಲ್ಲಾ ! ಮುಂದೆ ನನ್ನ ಗತಿ ಏನಾಗಬೇಕು' ಎಂದು ತಹತಹಿಸಿಹೋದಳು.

"ಕಾಗದ ಬರೆದಿರುವವರು ಯಾರು ರಾಣೀ ? ನೀನು ಭಯಗೊಂಡ ವಳಂತೆ ಕಾಣುತ್ತಿದೆ" ಎಂದ ರಾಜ್.

"ನನ್ನ ಪ್ರಾಣಕ್ಕೆ ತಂದಿಟ್ಟುಬಿಟ್ಟರಲ್ಲಾ ನೀವು. ಈಗ ನಾನೇನು ಮಾಡಲಿ. ಮೆಡಿಕಲ್ ಕೋರ್ಸನ್ನು ಪಾಸ್ ಮಾಡಿ ರೋಗಿಗಳ ಮಲವನ್ನು ಎತ್ತುವ ವಾರ್ಡ್‌ಬಾಯ್‌ನೊಂದಿಗೆ ಪ್ರೇಮ ಮಾಡಿಸಿಕೊಳ್ಳಲೇ ?"

"ಹಾಗೆಂದವರು ಯಾರು ?"

"ನೋಡಿ ಈ ಕಾಗದವನ್ನು" ಎಂದು ಬಾಷಾ ಬರೆದಿದ್ದ ಕಾಗದವನ್ನು ನಳಿನಿ ರಾಜ್ ಕೈಗೆ ಕೊಟ್ಟುಬಿಟ್ಟಳು. ಅವಳ ಕೈ ಅದುರುತ್ತಲೇ ಇತ್ತು.

ರಾಜ್ ಆ ಕಾಗದವನ್ನು ಓದಿನೋಡಿ ಸ್ತಂಭೀಭೂತನಾಗಿ ಹಾಗೆಯೇ ಮರುಮಾತನಾಡದೆ ಆ ಕಾಗದವನ್ನೇ ನೋಡುತ್ತಾ ಇದ್ದ. ಆತನ ಮನಸ್ಸು ಚೆಲ್ಲಾಪಿಲ್ಲಿಯಾಯಿತು. ಆಸ್ಪತ್ರೆಯ ವಾರ್ಡ್‌ಬಾಯ್ ಬಾಷಾ ಆಗಾಗ ತನ್ನ ಬಳಿ ಲಂಚ ತೆಗೆದುಕೊಂಡು ಈಗ ಈ ಕೊಲೆಯ ವಿಷಯವನ್ನು ಹೊರ ಗೆಡಹಲು ಪ್ರಯತ್ನಪಡುವಂತಿರುವನಲ್ಲಾ ಎಂದು ಮರುಗಿದ. ಆದರೂ ಪುನಃ ಧೈರ್ಯ ತಂದುಕೊಂಡು ನಳಿನಿಯನ್ನು ನೋಡಿ,

"ನಳಿನಿ, ನೀನು ಈಗ ಏನೆನ್ನುತ್ತೀ ?"

"ನಾನನ್ನುವುದೇನಿದೆ ರಾಜ್. ನೀವು ಇದಕ್ಕೆ ಯಾವುದಾದರೊಂದು ತಡೆಯನ್ನು ಹಾಕಲೇಬೇಕು. ಅಥವಾ ನಾನು ಆತ್ಮಹತ್ಯೆ ಮಾಡಿಕೊಳ್ಳ ಬೇಕು. ಆದರೆ ಆತನೊಂದಿಗೆ ಪ್ರಣಯ ಹಾದಿಯಲ್ಲಿ ಕಾಲಿಡಲು ನನಗೆ ಇಷ್ಟವಿಲ್ಲ."

"ಒಂದುವೇಳೆ ಬಾಷಾವಿಗೆ ಮಕ್ಕಾಮದೀನ ತೋರಿಸಿಬಿಟ್ಟರೆ.... ?"

"ಅದು ಹೇಗೆ ಸಾಧ್ಯ ? ಈಗ ನಿಮ್ಮ ತಂದೆಯವರ ಕೊಲೆಯ ಆಪಾದನೆಯಿಂದ ಪಾರಾಗುವುದೇ ಎಷ್ಟೋ ಕಷ್ಟವಾಗಿದೆ. ಅಂತಹುದರಲ್ಲಿ ಬಾಷಾವಿಗೆ ಮಕ್ಕಾ-ಮದೀನ ತೋರಿಸಬೇಕೆಂದರೆ ಸುಮ್ಮನಾಗುತ್ತದೆಯೇ ?"

"ನಳಿನಿ. ವಿಷಯ ತಿಳಿದುಕೊಳ್ಳದೆ ಮಾತನಾಡುತ್ತಿ. ಬಾಷಾವನ್ನು ನಾವು ಕೊಲ್ಲಲು ಸಾಧ್ಯವಿದೆಯೇ ? ಅವನನ್ನು ತೀರಿಸುವುದಕ್ಕೆ ಈಗಾಗಲೇ ಬೇರೊಬ್ಬನು ಹುಟ್ಟಿ ಅವನಿಗಾಗಿ ಹೊಂಚು ಹಾಕುತ್ತಿರುವ ಶೂರನ ಕೈಗೆ

ಕೊಟ್ಟುಬಿಟ್ಟರಾಯಿತು. ಹಾಯಾಗಿ ಮಕ್ಕಾ-ಮದೀನ ನೋಡುತ್ತಾನೆ."

"ನನಗೇಕೋ ಬಹಳ ಭಯವಾಗುತ್ತಿದೆ ರಾಜ್. ನೀವು ಏನಾದರೂ ಮಾಡಿ. ನಾನಂತೂ ಇನ್ನು ಮುಂದೆ ಈ ಊರಲ್ಲಿರಲು ಸಾಧ್ಯವಿಲ್ಲ. ನನಗೆ ಅಡಿಗಡಿಗೆ ನಿಮ್ಮ ತಂದೆಯ ನೆನಪು ಬರುತ್ತಲೇ ಇರುತ್ತದೆ. ಹಾಗೆ ನೆನಪು ಬಂದಾಗ ನನ್ನನ್ನು ನಾನೇ ಮರೆತುಬಿಡುತ್ತಿರುತ್ತೇನೆ. ನಾವಿಬ್ಬರೂ ಬೇರೆ ಊರಿಗೆ ಹೋಗುವುದೇ ಲೇಸು. ನಿಮಗಿಷ್ಟವಿಲ್ಲದಿದ್ದರೆ ನಾನೊಬ್ಬಳೇ ನಮ್ಮ ಸ್ವಂತ ಊರಿಗೆ ಹೋಗಿ ಯಾವನಿಗಾದರೂ ಕೊರಳು ನೀಡಿ ತಾಳಿ ಕಟ್ಟಿಸಿಕೊಂಡು ಸುಖವಾಗಿದ್ದುಬಿಡುತ್ತೇನೆ."

"ಸುಮ್ಮನೆ ಆತುರ ಬೀಳುತ್ತೀಯಲ್ಲ ನಳಿನಿ. ಬಾಷಾ ಹೀಗೆ ಕಾಗದ ಬರೆದುಬಿಟ್ಟರೆ ಆತನು ದೊಡ್ಡ ಕಾರ್ಯವನ್ನು ಸಾಧಿಸಿಬಿಟ್ಟನೆಂದು ತೀರ್ಮಾನಿಸಿಬಿಡುವುದೇ? ಕೇವಲ ವಾರ್ಡ್‌ಬಾಯ್ ನಿನ್ನನ್ನು ಅಪೇಕ್ಷಿಸಿದಂತೆ ಕಾಗದ ಬರೆದುಬಿಟ್ಟರೆ ಅದಕ್ಕಾಗಿ ಊರು ಬಿಟ್ಟೇ ಹೋಗಬೇಕೆಂದು ನಿರ್ಧಾರ ಮಾಡಿಬಿಡುವುದೇ? ಬಹಳ ಚೆನ್ನಾಗಿದೆ ನಿನ್ನ ಯೋಚನೆ!"

"ಮತ್ತೆ ನಾಳೆ ನಾನು ಆಸ್ಪತ್ರೆಗೆ ಹೋದಾಗ ಒಂದುವೇಳೆ ಆತನು ನನ್ನ ಬಳಿ ಬಂದು 'ನನ್ನ ಕಾಗದಕ್ಕೆ ಉತ್ತರವೇನಾದರೂ ಇದೆಯೇ?' ಎಂದು ಕೇಳಿದರೆ ಆತನಿಗೆ ನಾನು ಕೊಡುವ ಉತ್ತರವಾದರೂ ಏನು?"

"ಏನೂ ಅನ್ನಬೇಡ. 'ಬಾಷಾ, ಈಗ ನೀನು ನನಗೆ ತೊಂದರೆ ಕೊಡಬೇಡ. ಈ ಆಸ್ಪತ್ರೆಗೆ ಕಾಲಿಟ್ಟದ್ದೇ ತಡ, ನಿನ್ನ ಮೇಲೆ ನನಗೆ ತುಂಬಾ ಆಸೆ ಹುಟ್ಟಿತು. ಆದರೆ ನಿನ್ನ ಮನಸ್ಸು ಒಪ್ಪುತ್ತದೆಯೋ ಇಲ್ಲವೋ ಎಂದು ಸಂಶಯಪಟ್ಟು ಸುಮ್ಮನೆ ಇದ್ದೆ. ಈಗ ನೀನಾಗಿ ನೀನೇ ನನ್ನನ್ನು ಅಪೇಕ್ಷಿಸಿದ್ದೀಯೆಂಬುದಾಗಿ ಬರೆದಿದ್ದಿ. ನನ್ನ ಮನಸ್ಸಿನಲ್ಲಿದ್ದುದೂ ಅದೇ. ಇನ್ನು ನನ್ನ ಗಂಡ ಕಾರಾಗೃಹವಾಸ ಅನುಭವಿಸಿದರೂ ಅನುಭವಿಸಿಬಿಡಬಹುದು. ಇನ್ನು ಮುಂದೆ ನನ್ನನ್ನು ಕಾಪಾಡುವವರ್ಯಾರಿದ್ದಾರೆ. ಖಂಡಿತ ನಾವಿಬ್ಬರೂ ಒಟ್ಟಿಗೆ ಒಂದೇಕಡೆ ಇದ್ದುಬಿಡೋಣ. ಆತುರಪಡಬೇಡ' ಎಂದು ಆತನಿಗೆ ಸಮಾಧಾನ ಹೇಳಿಬಿಡು. ಖಂಡಿತ ಆತನು ಒಪ್ಪಿಕೊಂಡುಬಿಡುತ್ತಾನೆ. ಮಾತು ಹೇಳುವುದು ಮಾತ್ರವಲ್ಲ. ಜೊತೆಗೆ ಮುಗುಳುನಗೆಯನ್ನೂ ಮಿಶ್ರ ಮಾಡಿಕೋ. ಕುಸಿದು ಬಿದ್ದುಬಿಡುತ್ತಾನೆ."

"ಹಾಗೆಲ್ಲ ಆತನ ಮುಂದೆ ನಿಂತು ಇಂತಹ ಮೋಹಭರಿತ ಮಾತುಗಳ

ನ್ನಾಡಲು ನನಗಿಷ್ಟವಿಲ್ಲ ರಾರ್ಜ. ಬೇಕಾದರೆ ನೀವು ಹೇಳಿದಂತೆ ಒಂದು ಕಾಗದ ಬರೆದು ಆತನ ಹೆಸರಿಗೆ ಪೋಸ್ಟ್ ಮಾಡುತ್ತೇನೆ" ಎಂದಳು ನಳಿನಿ.

ರಾರ್ಜ ತಾನೇ ಒಂದು ಕಾಗದದಲ್ಲಿ ವಿಷಯವೆಲ್ಲವನ್ನೂ ಬರೆದ. ಕೆಳಗಡೆ ನಳಿನಿ ಕೈಬರಹ ಹಾಕಿದಳು. ಕಾಗದವನ್ನು ಪಕ್ಕದ ಮನೆಯ ಚಿಕ್ಕ ಹುಡುಗನ ಕೈಲಿ ಕೊಟ್ಟು ಎದುರಿಗಿದ್ದ ಪೋಸ್ಟ್ ಸ್ಟ್ಯಾಂಡಿನೊಳಕ್ಕೆ ಹಾಕಲು ಹೇಳಿದಳು ನಳಿನಿ.

ಹುಡುಗನು ಕಾಗದವನ್ನು ತೆಗೆದುಕೊಂಡು ಓಡಿದನು.

ನಳಿನಿ ಪುನಃ ವಿಸ್ಮಿತಳಾದಳು. ಅವಳ ಮನಸ್ಸು ಅವಳಲ್ಲಿರಲಿಲ್ಲ. ಯಾವ ಗ್ರಹಚಾರದಿಂದಲೋ ನಾನು ಈ ಕೆಲಸಕ್ಕೆ ಕೈಹಾಕಿದೆನಲ್ಲಾ ಎಂದು ಕುದಿಯುತ್ತಿದ್ದಳು. ರಾರ್ಜನನ್ನು ನೋಡಿ,

"ರಾರ್ಜ, ನನಗೆ ಕಿಂಚಿತ್ ಧೈರ್ಯವೂ ಇಲ್ಲ. ಆದಷ್ಟೂ ಭಯವು ಹೆಚ್ಚಾಗುತ್ತಿದೆಯೇ ವಿನಹ ಸಮಾಧಾನವಾಗುವಂತೆ ಕಾಣಲಿಲ್ಲ."

"ಭಯಪಡಬೇಡ ನಳಿನಿ. ನಾನು ನಿನ್ನ ಪಕ್ಕದಲ್ಲಿರುವಾಗ ಕಾಲ ಯಮನು ಕೋಣನ ಮೇಲೆ ಕುಳಿತು ಬಂದರೂ ಭಯಪಡದಿರು."

"ಬಾಷಾ ಈ ಕಾಗದವನ್ನು ಓದಿ ಒಂದುವೇಳೆ 'ಅದುವರೆಗೂ ನಾನು ತಡೆಯಲಾರೆ' ಎಂದು ಕಂಟಕತನದಿಂದ ಮಾತನಾಡಿಬಿಟ್ಟರೆ ನನ್ನ ಗತಿ ?"

"ಅವನೇನೂ ಹಾಗೆ ಅನ್ನುವವನಲ್ಲ. ನೀನು ಮಾತ್ರ ಅವನನ್ನು ಕಂಡದ್ದೇ ಕಾಮಪ್ರಚೋದನೆಯುಂಟಾಗುವಂತೆ ಕಣ್ಸನ್ನೆ ಮಾಡಿ, ಕಿರುನಗೆ ಯನ್ನು ಸೂಚಿಸಿ ಅಂಗಗಳನ್ನು ಕುಲುಕಿಸಿದರೆ ಸಾಕು ! ಅವನು ಅಂಗಲಾಚಿ ಬಿಡುತ್ತಾನೆ. ಅವನಿಗಾಗಿ ಆಲೋಚಿಸಬೇಡ. ಅವನಿಂದ ನಿನಗೆ ಯಾವ ಅನ್ಯಾಯವೂ ಆಗುವುದಿಲ್ಲ."

"ಹೋಗಲಿ. ನನ್ನನ್ನು ಕರೆದುಕೊಂಡು ಬೇರೆ ದೂರದ ಊರಿಗೆ ಹೋಗಿಬಿಡಿ."

"ಈಗಲೇ ಹೋಗಬಾರದು ನಳಿನಿ. ನಮ್ಮ ಮೇಲಿನ ಸಂದೇಹವು ಕತ್ತರಿಸಿಹೋಯಿತೆಂದರೆ ಮುಂದೆ ನಾವು ಪಾಶ್ಚಾತ್ಯ ದೇಶಕ್ಕೆ ಬೇಕಾದರೂ ಏರೋಪ್ಲೇನಿನಲ್ಲಿ ಹಾರಬಹುದು."

"ನಮ್ಮ ಮೇಲಿನ ಸಂದೇಹ ತೀರಿಸಿಕೊಳ್ಳುವ ಬಗೆ ?"

"ಅದಕ್ಕಾಗಿ ಮರುಗಬೇಡ."

"ನೀವು ನನ್ನನ್ನು ಬಿಟ್ಟು ಕದಲಬೇಡಿ" ಎನ್ನುತ್ತಾ ಎಳೆಯ ಮಗುವು ತಾಯಿಯನ್ನು ತಬ್ಬಿಕೊಳ್ಳುವಂತೆ ನಳಿನಿ ರಾರ್ಜನನ್ನಾಲಿಂಗಿಸಿಕೊಂಡಳು."

ಸಂಜೆ ನಾಲ್ಕು ಘಂಟೆಯಾಯಿತು. ರಾರ್ಜ ಮನೆಗೆ ಹಿಂತಿರುಗುವುದರಲ್ಲಿದ್ದ. ಆದರೆ ನಳಿನಿ ಆತನನ್ನು ಎಡೆಬಿಡಲಿಲ್ಲ.

"ನನಗೆ ಭಯವಾಗುತ್ತಿದೆ ರಾರ್ಜ. ಈಗ ನಾನಿಲ್ಲಿರುವುದು ಒಬ್ಬಂಟಿಗಳಾಗಿ! ಯಾವ ಸಮಯದಲ್ಲಿ ನನಗೆ ಏನು ಅಪಾಯ ಕಾದಿದೆಯೋ ಹೇಳಲು ಅಸಾಧ್ಯ. ನನ್ನನ್ನು ಬಿಟ್ಟು ಕದಲಬೇಡಿ ರಾರ್ಜ!....ನನ್ನನ್ನು ಬಿಟ್ಟು ಕದಲಬೇಡಿ" ಎಂದು ಬೇಡಿಕೊಂಡಳು.

ನಳಿನಿಯ ಹೃದಯ ಅದುರುತ್ತಿತ್ತು. ಅದ್ಯಾವ ಭಯವೋ ಅವಳನ್ನೂ ಅವಳ ಮನಸ್ಸನ್ನೂ ಕತ್ತರಿಸುತ್ತಿತ್ತು. ಮೈ ಕೈಯೆಲ್ಲವೂ ಅದುರುತ್ತಿತ್ತು.

ರಾರ್ಜ ನಳಿನಿಯ ಸ್ಥಿತಿಯನ್ನು ನೋಡಿದನು. "ಈದಿನ ರಾತ್ರಿ ಇಲ್ಲೇ ಇದ್ದು ನಾಳೆ ಬೆಳಗ್ಗೆ ನಾನು ಮನೆಗೆ ಹೋಗುತ್ತೇನೆ ನಳಿನಿ. ನೀನು ವೃಥಾ ಇಲ್ಲಸಲ್ಲದ ಯೋಚನೆಗಳನ್ನು ಮಾಡಿ ಹೃದಯವಿದ್ರಾವಕವಾಗುವಂತೆ ಮಾಡಿಕೊಳ್ಳುತ್ತಿ. ಹೆದರಬೇಡ. ನಾನು ನಿನ್ನನ್ನು ಬಿಟ್ಟು ಕದಲುವುದಿಲ್ಲ."

"ಬೆಳಗ್ಗೆ ನಾನು ಪುನಃ ಆಸ್ಪತ್ರೆ ಡ್ಯೂಟಿಗೆ ಹೋಗಬೇಕೇ ರಾರ್ಜ."

"ಹೋಗಲೇಬೇಕು ನಳಿನಿ. ನಿನಗೆ ಹೇಳಿದ ಮಾತನ್ನೇ ಎಷ್ಟು ಸಲ ಪುನಃ ಪುನಃ ಒತ್ತಿ ಒತ್ತಿ ಹೇಳುತ್ತಿರಬೇಕು. ನನಗೆ ತುಂಬಾ ಬೇಸರಿಕೆಯಾಗಿದೆ. ನಿನಗೆ ಪ್ರತಿಯೊಂದು ವಿಷಯವನ್ನೂ ಬಿಡಿಸಿ ಬಿಡಿಸಿ ಹೇಳಿಯೂ ಮನಸ್ಸನ್ನು ಹೋದಕಡೆ ಓಡಿಸಿ ಹೆದರಿ ಹಾಳಾಗುತ್ತಿದ್ದೀಯಲ್ಲಾ ನಳಿನಿ. ಯಾವ ಚಿಂತೆಯನ್ನೂ ಮಾಡಬೇಡ. ನಡಿ ಸಿನಿಮಾಕ್ಕೆ ಹೋಗೋಣ."

"ನಾನು ಮನೆ ಬಿಟ್ಟು ನಿಮ್ಮೊಂದಿಗೆ ಒಂದು ಹೆಜ್ಜೆಯನ್ನೂ ಹೊರಗೆ ಇಡಲಾರೆ. ಯಾರಾದರೂ ಕಂಡರೆ ಗತಿ.... ?"

"ಯಾರು ನೋಡಲು ಹೋಗುತ್ತಾರೆ ನಳಿನಿ. ನಿನ್ನ ಸ್ವಂತ ಜನಗಳಂತೂ ಈ ಊರಲ್ಲಿಲ್ಲ. ತಾಯಿ ತಂದೆ ಮೊದಲೇ ಇಲ್ಲ. ಗುರುತು ಕಂಡ ನಾಲ್ಕಾರು ಜನರು ನನ್ನೊಂದಿಗೆ ಬರುವುದನ್ನು ಕಾಣಬಹುದು. 'ಯಾವುದೋ ಪ್ರೈವೇಟ್ ಕೇಸಿತ್ತು. ಹೋಗುತ್ತಿದ್ದೆ' ಎಂದು ಸಂದೇಹಪಟ್ಟು ಕೇಳಿದವರ ಬಳಿ ಹೇಳಿದರಾಯಿತು. ಲೋಕದಲ್ಲಿ ನರ್ಸ್ ಆಗುವುದು ಅತಿ ದುರ್ಲಭ. ಅದರಲ್ಲೂ ದೊಡ್ಡ ಆಸ್ಪತ್ರೆಯ ಫಸ್ಟ್ ವಾರ್ಡ್ ನರ್ಸ್

ಎಂದರೆ ಅದಕ್ಕಿಂತಲೂ ಹೆಚ್ಚಾದ ಪದವಿ ಬೇರೊಂದಿಲ್ಲ. ನರ್ಸಿಗೆ ನಾನಾ ರೋಗಿಗಳು ಸ್ನೇಹಿತರು, ಮನೆತನದವರೂ ಮಾತನಾಡಿಸುತ್ತಲೇ ಇರುತ್ತಾರೆ. ನರ್ಸ್ ಎಂದರೆ ಆಕೆಯ ಬಗ್ಗೆ ಪ್ರತಿಯೊಬ್ಬರಿಗೂ ತಿಳಿದೇ ಇರುತ್ತೆ. ಯಾರೂ ನಿನ್ನನ್ನು ಹೀಯಾಳಿಸಲಾರರು.”

“ಸುಮ್ಮನಿರಿ ರಾಜ್. ನಿಮಗೇನು ಗೊತ್ತಿದೆ. ಊರಿನ ಜನರ ಬಾಯಿ ಮುಚ್ಚುವುದಕ್ಕಾಗಿ ನಿಮ್ಮೊಂದಿಗೆ ಬರುವುದಿಲ್ಲವೆಂದು ಹೇಳಲಿಲ್ಲ. ಯಾರಾದರೂ, ಎಲ್ಲಾದರೂ ಸಿ.ಐ.ಡಿ.ಗಳು ನನ್ನನ್ನು ನಿಮ್ಮನ್ನು ಒಂದಾಗಿರುವುದನ್ನು ಕಂಡು ಸಂದೇಹಗೊಂಡು ಬಿಟ್ಟರೆ ನಮ್ಮ ಗತಿ ಏನಾಗಬೇಕು? ಹೋಗಲಿ, ನಾನು ಸತ್ತರೂ ಚಿಂತೆಯಿಲ್ಲ! ನಿಮಗೇನಾದರೂ ಸಂಭವಿಸಿತೆಂದರೆ ನಿಮ್ಮ ಮನೆಯವರ, ಮಡದಿಯ ಗತಿ ಏನಾಗಬೇಕು? ಯೋಚಿಸಿ ನೋಡಿ ರಾಜ್!”

“ಹೋಗಲಿ, ಮನೆಯಲ್ಲೇ ಇದ್ದುಬಿಡುತ್ತೇನೆ. ನಿನಗೇಕೆ ತೊಂದರೆ” ಎನ್ನುತ್ತಾ ಮಂಚದಮೇಲೆ ಮಲಗಿದನು. ನಳಿನಿಯನ್ನು ಪಕ್ಕಕ್ಕೆ ಎಳೆದುಕೊಂಡನು.

“ಈಗ ನನ್ನ ಮನಸ್ಸಿಗೆ ಸಮಾಧಾನ ರಾಜ್.” ಎಂದಳು ನಳಿನಿ.

೭

ಪತ್ತೇದಾರ ಥಾಮಸ್‌ರವರು ಮಾರನೆ ದಿನ ಪೋಲೀಸ್ ಸ್ಟೇಷನ್ನಲ್ಲಿ ಕುಳಿತಿದ್ದರು. ರಾಮರಾಯರ ಕೊಲೆಯ ವಿಚಾರವಾಗಿ ರಾಜ್ ಯಾವುದಾದರೂ ಸುದ್ದಿಯನ್ನು ತರಬಹುದೆಂದುಕೊಂಡು ಆತನಿಗಾಗಿ ಎದುರು ನೋಡುತ್ತಿದ್ದರು.

ಸುಮಾರು ಮಧ್ಯಾಹ್ನದ ಹೊತ್ತು ಒಂದು ಘಂಟೆಯ ಸಮಯ. ರಾಜ್ ಪೋಲೀಸ್ ಸ್ಟೇಷನ್‌ಗೆ ಕಾರಿನಿಂದ ಬಂದಿಳಿದ. ಇನ್ಸ್‌ಪೆಕ್ಟರ್ ಬಜ್ಜಯ್ಯನವರೂ ಅಲ್ಲೇ ಕುಳಿತಿದ್ದರು.

ರಾಜ್‌ನನ್ನು ಕಂಡದ್ದೇ ಥಾಮಸ್‌ರವರು ಎದ್ದು ಬಹಳ ಆದರದಿಂದ ಬರಮಾಡಿಕೊಂಡರು. ಕೆಲಹೊತ್ತು ಒಬ್ಬರಿಗೊಬ್ಬರು ಮಾತನಾಡಲಿಲ್ಲ. ರಾಜ್‌ನೂ ಸಹಾ ಎದುರಿಗೆ ಬಜ್ಜಯ್ಯನವರು ಕುಳಿತಿರುವುದನ್ನು ಕಂಡು ಥಾಮಸ್‌ರವರೊಂದಿಗೆ ಯಾವ ಮಾತನ್ನೂ ಹೇಳಲಿಲ್ಲ. ಥಾಮಸ್ ಮತ್ತು

ರಾರ್ಜ್ ಒಬ್ಬರಿಗೊಬ್ಬರು ಮುಖಗಳನ್ನು ನೋಡಿಕೊಳ್ಳುತ್ತಿದ್ದುದು ಬಜ್ಜಯ್ಯನವರ ದೃಷ್ಟಿಗೆ ಬಿತ್ತು.

ನನ್ನಿಂದ ನಿಮ್ಮಿಬ್ಬರಿಗೆ ತೊಂದರೆಯೇನಾದರೂ ಇರಬೇಕೆಂದು ಕಾಣುತ್ತೆ. ನೀವು ಮಾತನಾಡುತ್ತಿರಿ. ನಾನು ಈಗಲೇ ಬಂದುಬಿಡುತ್ತೇನೆ" ಎಂದು ಹೇಳಿ ಬಜ್ಜಯ್ಯನವರು ಹೊರಟರು. ರಾರ್ಜ್ ತಡೆದರೂ ಅವರು ನಿಲ್ಲಲಿಲ್ಲ.

ಬಜ್ಜಯ್ಯನವರು ಹೋದನಂತರ ಥಾಮಸ್ ರಾರ್ಜನನ್ನು ಕುರಿತು,

"ಏನು ಸಾರ್. ಮೊನ್ನೆ ರಾತ್ರಿ ನಾನು ನಿಮ್ಮಲ್ಲಿ ತಿಳಿಸಿದ ವಿಷಯವೇನಾಯಿತು ? ಅದರ ನೈಜತೆ ಎಷ್ಟು ಮಟ್ಟಿಗೆ .... ?" ಎಂದರು.

ಅವರಾಡಿದ ಮಾತನ್ನು ಕೇಳಿ ರಾರ್ಜ್ ಉತ್ತರಕೊಡಲು ಸ್ವಲ್ಪ ಹಿಂದು ಮುಂದು ಯೋಚಿಸುವವನಂತೆ ನಟಿಸಿದ. ಆತನ ಮುಖದಲ್ಲಿ ದುಃಖವು ಉಕ್ಕಿ ಉಕ್ಕಿ ಬರುತ್ತಿದ್ದಂತೆ ಕಾಣಿಸಿತು. ಕಣ್ಣಿನಲ್ಲಿ ಒಂದೆರಡು ತೊಟ್ಟು ಕಣ್ಣೀರು ಹರಿಯುವುದರಲ್ಲಿತ್ತು. ಆದರೆ ಅದನ್ನು ಅಲ್ಲಿಯೇ ಹೇಗೋ ಕೆಳಗುದುರದಂತೆ ತಡೆಗಟ್ಟಿದನು. ಎದುರುಗಿದ್ದ ಥಾಮಸ್‌ರವರು ರಾರ್ಜನನ್ನು ನೋಡಿ ಮರುಗುವಂತಿತ್ತು ಆತನ ಅಭಿನಯ.

"ಏಕೆ ಸಾರ್, ಬಹಳ ದುಃಖದಲ್ಲಿದ್ದೀರೆಂದು ಕಾಣುತ್ತೆ. ಕಾರಣವೇನು ?"

ರಾರ್ಜ್ ಕೋಟು ಜೋಬಿನಲ್ಲಿದ್ದ ಕರ್ಚೀಫನ್ನು ತೆಗೆದು ಬಾಯಿಗೆ ಹಾಕಿ ತುರುಕಿಕೊಂಡು ಗಳಗಳನೆ ಅಳುವವನಂತೆ ನಟಿಸಿದ. ಥಾಮಸ್‌ರವರು ಆಶ್ಚರ್ಯಬಿದ್ದರು.

"ಆದದ್ದೇನು ಮಿಸ್ಟರ್ ರಾರ್ಜ್. ನನ್ನ ಬಳಿ ತಿಳಿಸಿ."

ರಾರ್ಜ್ ಸ್ವಲ್ಪ ಸಮಾಧಾನ ಮಾಡಿಕೊಂಡವನಂತೆ ಎದೆಯನ್ನು ನೇವರಿಸಿಕೊಂಡು,

"ನಾನೇನು ಹೇಳಲಿ ಸಾರ್. ಒಂದು ಕಡೆ ಕರ್ತವ್ಯ, ಮತ್ತೊಂದು ಕಡೆ ಧ್ಯೇಯ. ನನ್ನ ಕಣ್ಣಿನಲ್ಲಿ ನಾನೇ ಬೆರಳು ಚುಚ್ಚಿಕೊಳ್ಳಲೇ ?"

"ಏನಾಯಿತು ರಾರ್ಜ್. ಜಾಗ್ರತೆ ಹೇಳಿ. ನಡೆದಾದಮೇಲೆ ಯೋಚಿಸಿ ಫಲವೇನು ?"

"ಯೋಚನೆ ಮಾಡಲೇಬೇಕಾಗಿದೆ ಸಾರ್. ನನ್ನ ಹಣೇಬರಹ

ನನ್ನನ್ನು ಕಾಡಿಸದೇ ಬಿಡುತ್ತದೆಯೇ? ಈ ಹೃದಯಕ್ಕೆ ಶಾಂತಿಯಿಲ್ಲ ಸಾರ್....ಶಾಂತಿಯಿಲ್ಲ" ಎಂದು ಗದ್ಗದ ಸ್ವರದಲ್ಲಿ ಹೇಳಿದ ರಾರ್ಜ.

"ವಿಷಯ ತಿಳಿಸಿ ಮಿಸ್ಟರ್ ರಾರ್ಜ" ಎಂದರು ಥಾಮಸ್.

"ನನ್ನ ಹೆಂಡತಿ ಶಾಂತಾ.... !"

"ಹೌದು, ಆಕೆ ಏನಾದರೂ ಹೇಳಿದಳೇ ?"

"ಹೇಳಿದಳು ಸಾರ್...."

"ಏನೆಂದು ಹೇಳಿದಳು ಮಿಸ್ಟರ್ ರಾರ್ಜ ?"

"ನಾನೇ ಕೊಲೆಮಾಡಿದೆನೆಂದು...."

"ಆ್ಞಂ. ಅವಳೇ ಕೊಲೆಮಾಡಿದಳೆಂದು ಹೇಳಿದಳೇ ?"

"ಹೌದು ಸಾರ್. ಆಕೆ ಮೊದಲು ಈ ವಿಷಯವನ್ನು ಹೇಳಲು ಮರೆ ಮಾಚಿ ಬಹಳ ಹಿಂಸೆ ಕೊಟ್ಟಳು. ನನ್ನ ಯುಕ್ತಿ ಚಮತ್ಕಾರದಿಂದ ಕೊನೆಗೆ ಆಕೆಯ ಬಾಯಿಂದಲೇ ತಾನೇ ಕೊಲೆ ಮಾಡಿರುವಳೆಂದು ಹೇಳಿದಳು. ವಂಚಕಿ. ಆಕೆಗೆ ರವರವಾದಿ ನರಕಗಳಿಗಿಂತಲೂ ಕೀಳು ನರಕ ಸಿಕ್ಕಲಿ. ನಾನೇನು ಮಾಡಲಿ ಸಾರ್. ನನ್ನ ತಂದೆಯವರನ್ನು ಅನ್ಯಾಯವಾಗಿ ಕೊಂದುಹಾಕಿದಳು ಘಾತಕಿ. ಆಕೆಯನ್ನು ಖೂನಿ ಮಾಡುವವರೆಗೂ ನನ್ನ ಮನಸ್ಸಿಗೆ ಶಾಂತಿಯಿಲ್ಲ."

"ಹಾಗೆಲ್ಲಾ ಹುಚ್ಚುತನದಿಂದ ಖೂನಿಗೀನಿ ಮಾಡಿಬಿಡಬೇಡಿ ರಾರ್ಜ. ಆಕೆ ಮಾಡಿದ ಪಾಪಕೆಲಸಕ್ಕೆ ತಕ್ಕ ಪ್ರಾಯಶ್ಚಿತ್ತ ಅವಳೇ ಅನುಭವಿಸುತ್ತಾಳೆ. ನೀವೇನೂ ಆಕೆಗೆ ಹಿಂಸೆ ಕೊಡಬೇಡಿ. ಒಂದುಕಡೆ ಸೋದರಮಾವ, ಮತ್ತೊಂದು ಕಡೆ ಗಂಡನ ತಂದೆ. ಇಷ್ಟು ಬಂಧುತ್ವವಿದ್ದೂ ಅವರನ್ನು ವಿಷಕೊಟ್ಟು ಕೊಲ್ಲಬೇಕೆಂದರೆ ಕಾರಣ ?"

"ಅವರಿಗೆ ಮಾತ್ರವಲ್ಲ ಸಾರ್. ಇನ್ನೆರಡು ದಿನ ಕಳೆದರೆ ನನಗೂ ಅದೇ ತರಹ ಮಾಡಲು ಅವಳು ನಿರ್ಧರಿಸಿಕೊಂಡಿದ್ದಾಳೆಂದು ಕಾಣುತ್ತೆ. ನನ್ನ ದುರದೃಷ್ಟ. ಏನೇನು ಆಗಬೇಕೆಂದಿದೆಯೋ ದೇವರೇ ಬಲ್ಲ."

"ಹಾಗಾದರೆ ನಡೆಯಿರಿ. ಆಕೆಯನ್ನು ಇಲ್ಲಿಗೆ ಕರೆತರೋಣ !"

"ಸಾರ್. ಆಕೆಯನ್ನು ಇಲ್ಲಿಗೆ ಕರೆತಂದರೆ ನನ್ನ ಮಾನ ಹೋಗುವು ದಿಲ್ಲವೇ ಸಾರ್. ರಾಮರಾಯರ ಮಗ ರಾರ್ಜನ ಹೆಂಡತಿ ಶಾಂತಾ ಪೋಲೀ ಸರ ವಶಳಾದಳೆಂದರೆ ನನಗೆಷ್ಟು ಅವಮಾನವಾಗುತ್ತೆ ಸಾರ್. ಹೀಗಾಗಬಹು

ದೆಂದು ಯೋಚಿಸಿ ನೆನ್ನೆಯಿಂದ ತಡೆದು ವಿಷಯವನ್ನು ನಿಮ್ಮಲ್ಲಿ ತಿಳಿಸದಂತೆ ಸುಮ್ಮನಿದ್ದೆ. ಕೊನೆಗೆ ನಿಮ್ಮಲ್ಲಿ ಇದ್ದ ರಹಸ್ಯವನ್ನು ಮರೆಮಾಚದೆ ಹೇಳಿ ಬಿಡೋಣವೆಂದು ಬಂದೆ. ಆಕೆಯನ್ನು ಇಲ್ಲಿಗೆ ಕರೆತರಲೇಬೇಕೇ ಸಾರ್ !"

"ಖಂಡಿತ ಕರೆದುಕೊಂಡು ಬರಬೇಕು ಮಿಸ್ಟರ್ ರಾಜ್. ಕೇವಲ ಒಬ್ಬ ಹೆಂಗಸು ತನ್ನ ಮನೆಯ ದೊಡ್ಡ ತಲೆಯನ್ನೇ ವಿಷಹಾಕಿ ಕೊಂದು ಹಾಕಿದಳೆಂದರೆ ಬೇರೆಯವರನ್ನು ಸುಮ್ಮನೆ ಬಿಡುತ್ತಾಳೆಯೇ ! ಹೌದು. ಆಕೆ ವಿಷವನ್ನು ಹಾಕಲು ಕಾರಣ ?"

"ಕಾರಣ ಕೇಳಿದರೆ ಆಕೆ ಹೇಳುವ ಉತ್ತರ ಇದೊಂದೇ. ಆಕೆಯನ್ನು ನನ್ನ ತಂದೆ ರಾಮರಾಯರು ಒಂದು ದಿನ ರಾತ್ರಿ ಎಳೆದರಂತೆ. ಅದಕ್ಕಾಗಿ ಎಂದು ಹೇಳುತ್ತಾಳೆ ಸಾರ್."

"ಆಕೆ ಹೇಳುವ ಈ ಮಾತಿನಲ್ಲಿ ನಿಮಗೆ ನಂಬಿಕೆಯಿದೆಯೇ !"

"ನೋಡಿ ಸಾರ್. ನಮ್ಮ ತಂದೆಗೆ ಎರಡು ಮದುವೆ. ಒಬ್ಬ ಸೂಳೆ. ಮನುಷ್ಯ ಕಟ್ಟುಮಸ್ತಾಗಿದ್ದರು. ರೂಪದಲ್ಲೂ ಗುಣದಲ್ಲೂ ಏನೂ ಕಡಿಮೆ ಇರಲಿಲ್ಲ. ನಾನು ನಿಜವೆಂದಾಗಲಿ ಸುಳ್ಳೆಂದಾಗಲಿ ಹೇಗೆ ಹೇಳುವುದಕ್ಕಾಗುತ್ತದೆ. ಒಂದುಕಡೆ ಹೆಂಡತಿ—ಅವಳು ತನ್ನ ಮಾನವನ್ನು ಸೂರೆಗೊಳ್ಳಲು ಬಂದ ಎಂಬುದಾಗಿ ತನ್ನ ಮಾನ ಬಿಟ್ಟು ನಾಚಿಕೆ ಬಿಟ್ಟು ಗಂಡನ ಬಳಿ ಹೇಳುತ್ತಾಳೆಯೇ ? ಅಲ್ಲದೆ ನನ್ನ ತಂದೆ—ಮಗನ ಹೆಂಡತಿಯಾದ ಸೊಸೆಯನ್ನು ಮಗಳೆಂಬ ಧೋರಣೆಯಲ್ಲಿ ನೋಡಿಕೊಳ್ಳದೆ ಮಂಚದಮೇಲೆ ಆಕೆಯನ್ನು ಎಳೆದು ತಂದು ಮಲಗಿಸಿಕೊಳ್ಳುತ್ತಾರೆಯೇ ? ನಾನು ಯಾರ ಕಡೆ ತೀರ್ಪು ಕೊಡಲಿ ಸಾರ್. ದಯವಿಟ್ಟು ನೀವೇ ಹೇಳಿ."

"ಈ ವಿಷಯ ಬಹಳ ಕರತಲಾಮಲಕವಾಗಿದೆ. ಶಾಂತಳ ಹತ್ತಿರ ಖಂಡಿತವಾದ ಮಾತು ಕೇಳಬೇಕಾಗಿತ್ತು."

"ಖಂಡಿತವಾಗಿ ಕೇಳುವುದೇನಿದೆ ಸಾರ್. ಮೊನ್ನೆಯ ರಾತ್ರಿ ಆಕೆಯ ಕೆನ್ನೆಗಳನ್ನು ಊದಿಸಿಬಿಟ್ಟದ್ದೇನೆ ಸಾರ್. ಇಲ್ಲದಿದ್ದರೆ ಆಕೆ ನಿಜವಾಗಿಯೂ ಹೇಳುತ್ತಿದ್ದಳೇ ?"

"ಈಗ ಆಕೆ ಮನೆಯಲ್ಲಿದ್ದಾಳೆಯೇ ?"

"ಹೌದು ಸಾರ್. ಮನೆಯಲ್ಲಿಯೇ ಇದ್ದಾಳೆ."

"ಆಕೆಯ ಬಳಿ ಮಿಕ್ಕ ವಿಷಯಗಳನ್ನು ತಿಳಿದುಕೊಂಡರಾಯಿತು."

"ಸಾರ್, ಒಂದು ಉಪಕಾರ ಮಾಡುತ್ತೀರಾ ಸಾರ್."

"ಏನದು ಹೇಳಿ."

"ಏನೂ ಇಲ್ಲ. ಮೊದಲು ನನ್ನನ್ನು ಇಲ್ಲಿಯೇ ನಿಮ್ಮ ರಿವಾಲ್ವರಿನಿಂದ ಹೊಡೆದು ನಂತರ ನನ್ನ ಹೆಂಡತಿ ಶಾಂತಳನ್ನು ಸೆರೆಹಿಡಿಯಿರಿ. ನನ್ನೆದುರಿಗೆ ಆಕೆಯನ್ನು ಎಳೆದು ತಂದರೆ ನನ್ನ ಹೃದಯ ಕುದಿಯಲಾರದೇ ?"

"ಮನಸ್ಸನ್ನು ಹುಣ್ಣು ಮಾಡಿಕೊಳ್ಳಬೇಡಿ ರಾರ್ಜ. ಆಗಾಗ ಏನೇನು ನಡೆಯಬೇಕೋ ಹಾಗೆಯೇ ನಡೆಯುತ್ತದೆ. ನಡಿಯಿರಿ ನಿಮ್ಮ ಮನೆಗೆ ಹೋಗಿ ಶಾಂತಳನ್ನು ನೋಡೋಣ."

"ಆಕೆಯ ಬಳಿ ನೀವು ಏನು ಕೇಳಿದರೂ 'ನಾನು ನಿರಪರಾಧಿ. ನಾನು ಯಾವ ಪಾಪವನ್ನೂ ಅರಿಯದವಳು' ಎಂದು ಹೇಳುತ್ತಾಳೆ. ಆಕೆಯ ಬಳಿ ಕೇಳುವುದೂ ಬಿಡುವುದೂ ಎರಡೂ ಒಂದೇ."

"ಅದಿರಲಿ. ರಾಮರಾಯರಿಗೆ ವಿಷಕುಡಿಸಿದ್ದು ಯಾರೆಂದು ಕೇಳಿದಿರಾ ?"

"ಆ ವಿಷಯವೇ....ಈಗ ಲಾಕಪ್ಪಿನಲ್ಲಿದ್ದಾನಲ್ಲ ಸಾರ್ ಷಣ್ಮುಗಂ. ಆತನೊಂದಿಗೆ ಹೇಳಿ ಮಾಡಿಸಿದಳಂತೆ! ಆಸ್ಪತ್ರೆಯಲ್ಲಿದ್ದ ಔಷಧಿಗಳಲ್ಲೇ ಹುಡುಕಾಡಿ ವಿಷ ಹೊಂಚಿಕೊಂಡು ತಂದು ನನ್ನ ತಂದೆಯವರಿಗೆ ಕುಡಿಸಿದ ನಂತೆ ಷಣ್ಮುಗಂ. ಆತನಿಗೆ ಶಾಂತ ಎರಡು ಸಾವಿರ ಲಂಚ ಬೇರೆ ಕೊಟ್ಟಿದ್ದಾಳೆ. ಅದೂ ಅಲ್ಲದೆ ಪ್ರತಿದಿನವೂ ನನ್ನ ತಂದೆಯವರನ್ನು ನೋಡಿಕೊಂಡು ಬರುವ ನೆಪದಿಂದ ಆಸ್ಪತ್ರೆಗೆ ಹೋಗಿ ಷಣ್ಮುಗಂನೊಂದಿಗೆ ಸರಸ ಸಲ್ಲಾಪದಿಂದಿದ್ದು ಬರುತ್ತಿದ್ದಳೆಂದು ಆಕೆಯೇ ನಾಚಿಕೆಯಿಲ್ಲದೆ ಹೇಳುತ್ತಾಳೆ ಸಾರ್. ನನ್ನ ವಂಶ ದೊಡ್ಡದು. ಕೀರ್ತಿಗಂತೂ ಕೊನೆಯಿಲ್ಲ. ನನ್ನ ತಂದೆ ದೊಡ್ಡ ಮೇಧಾವಿ. ಹಾಗಿದ್ದೂ ಈಕೆ ನಮ್ಮ ಮಾನ ಮರ್ಯಾದೆಯೆಲ್ಲವನ್ನೂ ಹಾಳುಮಾಡಲು, ಕೊನೆಗೆ ನಮ್ಮೆಲ್ಲರ ಪ್ರಾಣ ತೆಗೆಯಲು ಮಾರಿಯಂತೆ ಬಂದು ನಮ್ಮ ಮನೆ ಸೇರಿಕೊಂಡಳು. ಪಾಪಿಷ್ಟ ಮುಂಡೆ. ಒಂದು ಕೆಲಸ ಮಾಡಲೇ ಸಾರ್. ಆಕೆ ಮಾಡಿದ ಪಾಪಕ್ಕೆ ಪ್ರಾಯಶ್ಚಿತ್ತ ಹುಡುಕಿಬಿಡಲೇ ಸಾರ್ !"

"ನೀವೇನು ಮಾಡಲು ಹೋಗುತ್ತೀರಿ ಸಾರ್ ?"

"ಹೊಡಿಯುವುದಿಲ್ಲ, ಬಡಿಯುವುದಿಲ್ಲ. ನಮ್ಮ ತಂದೆಗೆ ಆಕೆ ವಿಷ

ಕೊಟ್ಟು ಸಾಯಿಸಿದಂತೆ, ನಾನೂ ಆಕೆಗೆ ಯಾವ ಪದಾರ್ಥದದ್ಲಾದರೂ ವಿಷ ಹಾಕಿ ಕುಡಿಸಿಬಿಡುತ್ತೇನೆ. ಅವಳು ಮಾಡಿದ ಪಾಪ ಅವಳು ಅನುಭವಿಸಲಿ" ಎಂದನು ರಾರ್ಜ.

"ಬಹಳ ಚೆನ್ನಾಗಿದೆ ನಿಮ್ಮ ಯೋಚನೆ. ನಿಜವಾಗಿಯೂ ನೀವು ಹಾಗೆ ಮಾಡಿದಿರೆಂದರೆ ನೀವು ಜೈಲಿನ ಕಂಬಿಗಳನ್ನು ಎಣಿಸಿಬಿಡಬೇಕಾಗುತ್ತೆ. ಸುಮ್ಮನೆ ಆತುರಪಟ್ಟು ಮಾತನಾಡಿದಂತೆ ಕೆಲಸವನ್ನು ಮಾಡಿ ಮುಗಿಸಿಬಿಡಬೇಡಿ ಮಿಸ್ಟರ್ ರಾರ್ಜ. ನಡೆಯಿರಿ. ನಿಮ್ಮ ಮನೆಯ ಕಡೆ ಹೋಗಿ ಶಾಂತಳನ್ನು ವಿಚಾರಿಸೋಣ!"

"ಮೊದಲು ಷಣ್ಮುಗಂನನ್ನು ಕರೆಯಿಸಿ. ಅವನಿಂದ ವಿಷಯಗಳನು ಕೇಳಿ ತಿಳಿದುಕೊಳ್ಳೋಣ."

ಷಣ್ಮುಗಂನನ್ನು ಕರೆದುಕೊಂಡು ಬರಲು ಇಬ್ಬರು ಕಾನ್ಸ್ಟೇಬಲರು ಹೊರಟರು. ಸುಮಾರು ಇಪ್ಪತ್ತು ನಿಮಿಷಗಳಲ್ಲಿಯೇ ಷಣ್ಮುಗಂನನ್ನು ಕರೆತಂದು ನಿಲ್ಲಿಸಿದರು.

"ರಾಮುರಾಯರನ್ನು ಸಾಯಿಸಲು ವಿಷ ತಂದುಕೊಟ್ಟವರು ಯಾರು ಷಣ್ಮುಗಂ ?" ಎಂದರು ಥಾಮಸ್.

"ಸಾರ್, ನಾನು ಏಟು ತಿಂದು ತಿಂದು ಸಾಕಾಗಿಹೋಗಿದೆ. ನನ್ನ ಮೈಯಲ್ಲಿರುವ ಪ್ರತಿಯೊಂದು ಮೂಳೆಯೂ ಪುಡಿಪುಡಿಯಾಗಿದೆ. ಇನ್ನು ಮೇಲೆ ನನ್ನನ್ನು ಹೊಡೆಯಬೇಡಿ. ನಾನು ನಿಜವಾಗಿಯೂ ತಪ್ಪಿತಸ್ಥನೇ ಇರಬೇಕೆಂದು ನಿಮ್ಮ ಮನಸ್ಸಿಗೆ ನಿರ್ಧರವಾಗಿದ್ದರೆ ನನಗೆ ಫಾಸಿ ಆರ್ಡರೋ ಅಥವಾ ಜೀವಾವಧಿ ಶಿಕ್ಷೆಯೋ ವಿಧಿಸಿ. ಇಲ್ಲವೇ ಒಂದಿಷ್ಟು ವಿಷವಾದರೂ ತಂದುಕೊಡಿ. ಕುಡಿದು ಜನ್ಮ ಸಾರ್ಥಕಪಡಿಸಿಕೊಳ್ಳುತ್ತೇನೆ. ನನ್ನನ್ನು ವೃಥಾ ಹೊಡೆದು ಚಿತ್ರಹಿಂಸೆ ಮಾಡಬೇಡಿ, ಪತ್ತೇದಾರರೇ."

"ಕೇಳಿದ್ದಕ್ಕೆ ಉತ್ತರ ಕೊಡು ಷಣ್ಮುಗಂ."

"ಉತ್ತರವೇನೆಂದು ಕೊಡಲಿ ಸಾರ್. ನಾನು ಯಾವ ಪಾಪವನ್ನೂ ಅರಿಯದವನೆಂದು ಹೇಳಿದರೆ ನೀವು ನಂಬುತ್ತೀರೇನು? ನೀವು ಕೇಳುವ ಪ್ರಶ್ನೆಗೆಲ್ಲಾ 'ಹೌದು' 'ನಾನೇ ಮಾಡಿದ್ದು' ಎಂದು ಹೇಳಿದರೆ ನಿಮಗೆ ಸಂತೋಷವಾಗಬಹುದಲ್ಲವೆ? ಕೇಳಿ. ಈಗ ಕೇಳಿ. ಯಾವ ಪ್ರಶ್ನೆಗಾದರೂ ಉತ್ತರ ಕೊಡಲು ತಯಾರಾಗಿದ್ದೇನೆ."

"ಸಾರ್. ಈತನನ್ನು ಇನ್ನು ಹೆಚ್ಚಾಗಿ ಪ್ರಶ್ನಿಸಿ ಪ್ರಯೋಜನವಿಲ್ಲ. ಸುಮ್ಮನೆ ಸದ್ದಿಲ್ಲದಂತೆ ಅವನನ್ನು ಕಳುಹಿಸಿಬಿಡಿ. ದೊಡ್ಡ ಕವಿಯಂತೆ ಮಾತನಾಡುತ್ತಿದ್ದಾನೆ ನೋಡಿ. ಈತನೊಂದಿಗೆ ಮಾತನಾಡಿ ಪ್ರಯೋಜನ ವಾಗದು. ಅದೂ ಅಲ್ಲದೆ ತಪ್ಪಿತಸ್ಥನು ನಾನೇ ಎಂದು ಒಪ್ಪಿಕೊಳ್ಳುವುದಾಗಿ ಅವನು ಹೇಳಿದಮೇಲೆ ಪುನಃ ಪುನಃ ಅವನನ್ನು ಏಕೆ ಪೀಡಿಸಬೇಕು ಪತ್ತೇದಾರರೇ! ದಯವಿಟ್ಟು ಅವನನ್ನು ಕಳುಹಿಸಿಬಿಡಿ. ಅವನ ಮುಖವನ್ನು ನೋಡಲು ನನಗೆ ನಾಚಿಕೆಯಾಗಿದೆ. ದ್ರೋಹಿ" ಎಂದನು ರಾಜರ್.

ರಾಜರ್ ಆಡಿದ ಮಾತುಗಳನ್ನು ಕೇಳಿದನಂತರ ಷಣ್ಮುಗಂ, ಶಾಂತಳ ಮಾತಿಗೆ ಮರುಳಾಗಿ ಶಾಂತ ಹೇಳಿದಂತೆ ವಿಷ ಕುಡಿಸಿಯೇ ಇರಬೇಕು. ಅದಕ್ಕಾಗಿಯೇ ಷಣ್ಮುಗಂ ಡ್ಯೂಟಿ ಬೆಳಿಗ್ಗೆ ಆರು ಘಂಟೆಗೆ ಮುಗಿದಿದ್ದೇ ತಡ, ಆರೂವರೆ ಘಂಟೆಗೆಲ್ಲಾ ರಾಮರಾಯರು ತಣ್ಣಗಾಗಿ ಹೋಗಿದ್ದರು. ಷಣ್ಮುಗಂ ನಿಸ್ಸಂದೇಹವಾಗಿಯೂ ತಪ್ಪಿತಸ್ತನೇ ಇರಬೇಕು. ಸುಮ್ಮನೆ ಇವನನ್ನು ವಿಚಾರಿಸಿ ಫಲವೇನಿದೆ. ಶಾಂತಳನ್ನು ನೋಡಿ ಆಕೆಯ ಬಾಯಿ ಏನು ಬರುತ್ತದೆ ಎಂಬುದನ್ನು ತಿಳಿದುಕೊಳ್ಳೋಣ ಎಂಬುದಾಗಿ ಭಾವಿಸಿಕೊಂಡು ಷಣ್ಮುಗಂನನ್ನು ಪುನಃ ಕಾನ್‌ಸ್ಟೇಬಲರನ್ನು ಕರೆದು ಲಾಕಪ್ಪಿನಲ್ಲಿಡುವುದಾಗಿ ಹೇಳಿ ರಾಜರ್‌ನನ್ನು ಕರೆದುಕೊಂಡು ಕಾರಿನಲ್ಲಿ ಕುಳಿತು ಶೇಷಾದ್ರಿಪುರದ ಕಡೆ ಹೊರಟರು.

ರಾಜರ್ ಮನೆ ಮುಂದೆ ಕಾರು ನಿಂತಿತು. ಕಾರಿನಿಂದಿಳಿದ ಥಾಮಸ್, ರಾಜರ್ ಇಬ್ಬರೂ ಗೇಟನ್ನು ತೆರೆದುಕೊಂಡು ಮನೆಯೊಳಕ್ಕೆ ಪ್ರವೇಶಿಸಿದರು.

ಗೇಟಿನಲ್ಲಿದ್ದ ಜವಾನನು ಜೋತುಮುಖ ಹಾಕಿಕೊಂಡು ಯಾವುದೋ ಕಳೆದುಕೊಂಡವನಂತೆ ತಲೆಯಮೇಲೆ ಕೈಯನ್ನಿಟ್ಟು ಕುಳಿತಿದ್ದ. ಆದರೆ ಅವನ ಕಷ್ಟ ನಷ್ಟ ನಮಗೇಕೆಂದುಕೊಂಡು ರಾಜರ್ ಆತನನ್ನು ವಿಚಾರಿಸದೆ ಮನೆಯೊಳಕ್ಕೆ ಹೋಗಿ ಶಾಂತಳಿಗಾಗಿ ಒಳಕೋಣೆಗೆ ಹೋದ.

ಒಳಕೋಣೆಗೆ ಹೋಗಲು ಥಾಮಸ್‌ರವರು ಹಿಂದೇಟುಹಾಕಿದರು.

"ಬನ್ನಿ ಸಾರ್. ತಲೆಗೆ ಮಿಂಚಿಹೋದಮೇಲೆ ಒಳಕೋಣೆಗೆ ಬಂದರೇನು? ಹೊರಕೋಣೆಗೆ ಬಂದರೇನು? ಘಾತಕಿಯ ತಲೆಯ ಜುಟ್ಟನ್ನು ಎಳೆದುಕೊಂಡು ಬರೋಣ" ಎನ್ನುತ್ತಾ ಥಾಮಸ್‌ರ ಕೈಯನ್ನು ಹಿಡಿದೆಳೆದುಕೊಂಡು ಒಳಕೋಣೆಗೆ ಹೋದನು.

"ಶಾಂತಾ....ಶಾಂತಾ....ಶಾಂತಾ...." ಎಂದು ಎರಡು ಮೂರು ಬಾರಿ ಆರ್ಭಟಿಸಿದನು. ಉತ್ತರ ಬರಲಿಲ್ಲ.

ಹಿತ್ತಿಲ ಬಾಗಿಲ ಕಡೆ ಹೋಗಿ ನೋಡಿದನು. ಅಲ್ಲಿಯೂ ಶಾಂತ ಕಾಣಲಿಲ್ಲ.

ಮಹಡಿಯ ಮೇಲೆ ಹೋಗಿ ಹುಡುಕಾಡಿದ. ಅಲ್ಲಿಯೂ ಕಾಣಲಿಲ್ಲ.

ಪುನಃ ಮಹಡಿಯಿಂದ ಕೆಳಗಿಳಿದು ಕೆಳಗಿನ ವರಾಂಡಾ, ಅಡಿಗೆಮನೆ, ಹಾಲು, ಸ್ನಾನದ ಮನೆ ಪ್ರತಿಯೊಂದು ಕೊಠಡಿಯನ್ನೂ ಥಾಮಸ್‌ರವರನ್ನು ಜೊತೆಯಲ್ಲಿ ಎಳೆದುಕೊಂಡೇ ಒಂದೊಂದು ಕೊಠಡಿಯನ್ನಾಗಿ ನೋಡಿದನು. ಶಾಂತ ಎಲ್ಲೂ ಕಾಣಿಸಲಿಲ್ಲ.

ಶಯ್ಯಾಗೃಹಕ್ಕೆ ಹೋಗಿ ನೋಡಿದರು. ಅಲ್ಲೂ ಪತ್ತೆ ಇಲ್ಲ ಶಾಂತ.

ಥಾಮಸ್‌ರವರು ಅವಾಕ್ಕಾದರು. ರಾಜ್ ಕಣ್ಣೀರ್ಗರೆಯುವಂತೆ ನಟಿಸಿದ.

"ಈಗ ಮಾಡುವುದೇನಿದೆ ಸಾರ್. ಶಾಂತಾ ಎಲ್ಲೂ ಪತ್ತೆಯಿಲ್ಲವಲ್ಲಾ! ನಾನೇನು ಮಾಡಲಿ ಸಾರ್. ಕೊನೆಗೆ ನನಗೂ ಚಕ್ಕರ್ ಕೊಟ್ಟುಬಿಟ್ಟದ್ದಾಳಲ್ಲಾ" ಎನ್ನುತ್ತಾ ಗೇಟಿನ ಬಳಿ ಬಂದು ಜವಾನನನ್ನು ಕುರಿತು ರಾಜ್,

"ಶಾಂತಾ ಎಲ್ಲೋ ?"

"ಶಾಂತಮ್ಮನವರು 'ಈಗ ಬಂದುಬಿಡುತ್ತೇನೆ' ಎಂದು ಹೇಳಿ ಈಗಲೇ ಐದು ನಿಮಿಷಕ್ಕೆ ಮುಂಚೆ ಯಾರೋ ಮೀಸೆ ಇಟ್ಟುಕೊಂಡಿದ್ದ ತಾತನೊಂದಿಗೆ ಹೊರಟುಹೋದರು. ಬಂದುಬಿಡಬಹುದು."

"ಮೀಸೆ ಇಟ್ಟುಕೊಂಡಿರುವ ಮನುಷ್ಯ ಯಾರೋ ಇದ್ದಾರೆ. ನಮ್ಮ ಪೈಕಿ ? ನಮ್ಮ ಮನೆತನದವರ ಪೈಕಿ ಮೀಸೆ ಇಟ್ಟುಕೊಂಡಿರುವವರ್‍ಯಾರೂ ಇಲ್ಲ. ಹಳ್ಳಿಯಲ್ಲಿರುವವರಲ್ಲೂ ಯಾರೂ ಮೀಸೆ ಇಟ್ಟಿರುವ ಸಂಬಂಧೀಕರು ಇಲ್ಲವಲ್ಲಾ. ಇವಳು ಯಾರೊಂದಿಗೋ ಹೋಗಿಬಿಟ್ಟದ್ದಾಳೋ !" ಎಂದು ಕೊರಗಿದ ರಾಜ್.

"ಕೊರಗಬೇಡಿ ಮಿಸ್ಟರ್ ರಾಜ್. ಮತ್ತೊಂದು ಸಲ ಮನೆಯಲ್ಲಿ ಹುಡುಕಿ ನೋಡೋಣ ಬನ್ನಿ" ಎಂದು ಸಲಹೆ ಕೊಟ್ಟರು ಥಾಮಸ್.

ಅಷ್ಟು ಹೊತ್ತಿಗೆ ಇನ್ಸ್‌ಪೆಕ್ಟರ್ ಬಜ್ಜಯ್ಯನವರೂ ಅಲ್ಲಿಗೆ ಬಂದು ಸೇರಿದರು.

ಪುನಃ ಪ್ರತಿಯೊಂದು ಕೋಣೆಯನ್ನೂ ಹುಡುಕಿದ ಮೇಲೆ ಮಲಗುವ ಕೋಣೆಯಲ್ಲಿ ಹುಡುಕಾಡಿದರು. ಶಾಂತ ಕಾಣಿಸಲಿಲ್ಲ. ಗೇಟಿನ ಜವಾನನ ಮಾತಿನಂತೆ ಯಾರೊಂದಿಗೋ ಹೊರಟುಹೋದಳೆಂದು ತೀರ್ಮಾನಿಸಿದರು ಥಾಮಸ್.

ಇನ್ಸ್‌ಪೆಕ್ಟರ್ ಬಜ್ಜಯ್ಯನವರು ಮಂಚದ ಮೇಲೆ ಬಿದ್ದಿದ್ದ ಕಾಗದವನ್ನು ತೆಗೆದುನೋಡಿ, 'ಇಗೋ ನೋಡು ಥಾಮಸ್. ಇಲ್ಲೊಂದು ಕಾಗದ ಬಿದ್ದಿದೆ' ಎಂದು ಹೇಳುತ್ತಾ ಕಾಗದ ಕೊಟ್ಟರು. ಕಾಗದವನ್ನು ರಾಜ್ ಕೈಗೆ ತೆಗೆದು ಕೊಂಡು ನೋಡಿದ. ಥಾಮಸ್‌ರವರು ಕಾಗದದಲ್ಲಿ ಏನು ಬರೆದಿದೆಯೋ ಎಂಬುದನ್ನು ಓದೋಣವೆಂದು ರಾಜ್ ಕೈಲಿದ್ದ ಕಾಗದವನ್ನು ತೆಗೆದುಕೊಂಡು ಓದಿದರು. ಆ ಕಾಗದದಲ್ಲಿ—

"ಪ್ರಾಣೇಶ್ವರ ರಾಜ್‌ರವರಿಗೆ,

ನಾನು ನಿಮ್ಮನ್ನು ಬಿಟ್ಟು ಅಗಲಿ ಹೋದುದು ತುಂಬಾ ಸಂಕಟದ ವಿಷಯವೇ! ಲೋಕದಲ್ಲಿ ಯಾರಿಗೆ ಯಾರೂ ಹೊಣೆಯಲ್ಲ. ನಾನು ನಿಮ್ಮ ತಂದೆಗೆ ವಿಷಕೊಟ್ಟು ಕೊಂದುಹಾಕಿದೆ ಎಂಬ ಸುದ್ಧಿಯು ನಿಮಗೆ ತಿಳಿದು ಹೋದ ನಂತರ ನಾನು ನಿಮ್ಮಲ್ಲಿ ಇನ್ನು ಮುಂದೆ ಎಷ್ಟು ಒಳ್ಳೆಯವಳಾಗಿ ವರ್ತಿಸಿದರೂ ನನ್ನ ಮೇಲಿನ ಸಂದೇಹ ನಿಮ್ಮನ್ನು ಬಿಡಲಾರದು. ನನ್ನನ್ನು ಇನ್ನು ಮುಂದೆ ತಪ್ಪಿತಸ್ಥರನ್ನು ಕಾಣುವ ಕಣ್ಣಿ"ಂದ ನೋಡಲು ಮೊದಲು ಮಾಡುವಿರೆಂದು ನನಗೆ ಅರ್ಥವಾಯಿತು. ಇನ್ನು ನಾನು ಇಲ್ಲೇ ಇದ್ದರೆ ನೀವಾಗಿ ನೀವೇ ನನ್ನ ಮೇಲಿನ ದ್ವೇಷದಿಂದಲೂ, ತಂದೆಯನ್ನು ಕೊಲೆ ಮಾಡಿದ ತಾಟಕಿ ಎಂಬುದಾಗಿ ನೆನೆದು ಪೋಲೀಸ್‌ಗೆ ಕಂಪ್ಲೇಟ್ ಕೊಟ್ಟು ನನ್ನನ್ನು ಛಡಿಯೇಟು ಹೊಡಿಸಿ ಕಾರಾಗೃಹದ ಕರ್ಮದೇವತೆಯನ್ನಾಗಿ ಮಾಡಿಸಿದರೂ ಮಾಡಿಸುವಿರೆಂದು ನೆನೆದು ಇಂದು ನಾನು ನನ್ನ ರಹಸ್ಯಪ್ರಿಯತನನೊಂದಿಗೆ ಬಹು ದೂರ ಹೊರಟುಬಿಟ್ಟೆ. ನನ್ನನ್ನು ಹುಡುಕಿ ಪ್ರಯೋಜನವಿಲ್ಲ. ಬಹಳ ತೊಂದರೆಯನ್ನು ತೆಗೆದುಕೊಳ್ಳಬೇಡಿ. ಹಾಗೆ ಒಂದು ವೇಳೆ ಹುಡುಕಿದರೂ ವ್ಯರ್ಥ ನೋವಾಗಿ ಸಂಕಟಕ್ಕೀಡಾಗುವಿರೇ ವಿನಃ ಗೆಲುವು ಸಿಕ್ಕಲಾರದು. ನನಗೆ ಮದುವೆ ಮಾಡಿಕೊಂಡ ಗಂಡನೆಂಬ ಧೋರಣೆಯಿಂದ ನಿಮಗೆ ಈ ಸಲಹೆ ಕೊಟ್ಟಿದ್ದೇನೆ. ನಿಮ್ಮ ತಂದೆಯವರಿಗೆ ವಿಷ ಕೊಟ್ಟವಳೂ ನಾನೇ. ಷಣ್ಮುಗಂ ವಿಷಪ್ರಯೋಗಿಸಲು ಸಹಕರಿಸಿದವನು.

ಷಣ್ಮುಗಂನಿಗೆ ಹೆಚ್ಚು ತೊಂದರೆ ಕೊಡಬೇಡಿ. ಅತಿ ಜಾಗ್ರತೆ ಷಣ್ಮುಗಂ ಈ ಲೋಕದಿಂದ ಪಾರಾಗುತ್ತಾನೆ. ಅವನಿಗೆ ನೀವೂ ಹಿಂಸೆ ಕೊಡಬೇಡಿ. ಅಂತೂ ಪೆಟ್ಟಿಗೆಯಲ್ಲಿದ್ದ ಹಣದಲ್ಲಿ ನನಗೆಷ್ಟು ಬೇಕೋ ಅಷ್ಟನ್ನು ತೆಗೆದು ಕೊಂಡಿದ್ದೇನೆ. ನೀವು ನನ್ನನ್ನು ಹುಡುಕಲು ಪ್ರಯತ್ನಪಡುತ್ತೀರೆಂದು ತಿಳಿದರೆ ನಿಮ್ಮ ಜೀವ ನಿಮ್ಮ ಹೃದಯದಿಂದ ಬೇರ್ಪಡಿಸೀತು. ಜೋಕೆ.

ಇಂತಿ ನಿಮ್ಮ ಪ್ರೇಯಸಿ,
ಶಾಂತ."

ಕಾಗದವನ್ನು ಥಾಮಸ್‌ರವರು ಜೋರಾಗಿಯೇ ಬಜ್ಜಯ್ಯನವರಿಗೂ ರಾಜ್‌ಗೂ ಕೇಳಿಸುವಂತೆ ಓದಿದರು. ರಾಜ್ ಸಂಕಟಪಟ್ಟವನಂತೆ ನಟಿಸಿದ. ಬಜ್ಜಯ್ಯನವರೂ ಹಣೆ ಚಚ್ಚಿಕೊಂಡರು. ರಾಜ್‌ನನ್ನು ನೋಡಿ,

"ಹೆದರಬೇಡಿ ರಾಜ್. ನಿಮ್ಮ ಪ್ರಾಣವನ್ನು ತೆಗೆದುಕೊಳ್ಳುತ್ತಾಳಂತೆ ಘಾತಕಿ. ಅವಳು ಹೇಗೆ ತೆಗೆದುಕೊಳ್ಳುತ್ತಾಳೆಯೋ ನೋಡೋಣ. ಗಂಡನಿಗೇ ಗುಂಡು ಹಾರಿಸುವ ಪುಂಡಳನ್ನು ಕೆಂಡದ ಗುಂಡಿಯಲ್ಲಿ ಹಾಕುವ ವರೆವಿಗೂ ನನ್ನ ಮನಸ್ಸಿಗೆ ಸಮಾಧಾನವಿರಲಾರದು" ಎಂದು ಹೇಳಿದರು ಭಜ್ಜಯ್ಯ.

ರೈಲ್ವೆ ಸ್ಟೇಷನ್‌ಗೂ ನಗರದ ನಾನಾ ಕಡೆಯ ಪೋಲೀಸ್ ಸ್ಟೇಷನ್‌ಗಳಿಗೂ ಮಿಕ್ಕ ಎಲ್ಲಾ ಕಡೆಗೂ ಸುದ್ದಿಯನ್ನು ಫೋನ್ ಮೂಲಕ ತಿಳಿಸಿದರು.

ಅಕ್ಕಪಕ್ಕದ ಮನೆಯವರು ರಾಜ್ ಹೆಂಡತಿ ಶಾಂತ ಓಡಿಹೋದಳು ಎಂಬುದಾಗಿ ಮೃತ್ಯು ಗಂಟೆಯನ್ನು ಬಾರಿಸಿದರು.

ರಾಜ್ 'ಮನೆಯಿಂದ ಹೊರಗೆ ಬಂದು ಜನಗಳಿಗೆ ಮುಖ ತೋರಿಸಲು ನಾಚಿಕೆಯಾಗುತ್ತದೆ ಪತ್ತೇದಾರರೇ. ನಾನು ಇಲ್ಲೇ ಇರುತ್ತೇನೆ ಏನಾದರೂ ವಿಷಯವಿದ್ದರೆ ಯಾರ ಕೈಲಾದರೂ ಹೇಳಿ ತಿಳಿಸಿ' ಎಂದು ಹೇಳಿದ.

ಬಜ್ಜಯ್ಯನವರಿಗಂತೂ ಶಾಂತ ಒಂದು ವೇಳೆ ಸಿಕ್ಕಿದರೆ ಸೀಳಿಬಿಡೋಣ ಎನಿಸುತ್ತಿತ್ತು.

ಇದೆಂತಹ ಹಾಳಾದ ವಂಶವಪ್ಪಾ. ಶುದ್ಧ ಪುಂಡರಂಡೇರು ಸೇರಿರುವ ವಂಶ. ಮನೆಯ ದೊಡ್ಡ ತಲೆಗೇ ವಿಷಹಾಕಿಬಿಟ್ಟಳಲ್ಲಾ ಅವಿವೇಕಿ ರಂಡೆ ! ಎಂದು ಜನಗಳ ಕೂಗಾಟ ಹೆಚ್ಚಾಯಿತು. ರಾಜ್ ಮಾತ್ರ ಯಾರು ಏನೆಂದರೆ ತನಗೇನಾಗಬೇಕು ಎಂದುಕೊಂಡು ಕಾಲಿನ ಮೇಲೆ ಕಾಲು ಹಾಕಿ

ಸಿಗರೇಟಿನ ಹೊಗೆ ಬಿಡುತ್ತಾ ಕುಳಿತುಬಿಟ್ಟ. ಥಾಮಸ್ ಮತ್ತು ಬಜ್ಜಯ್ಯ ಹೊರಟುಹೋದರು.

೮

ರಾತ್ರಿ ಎಂಟು ಘಂಟೆಯ ಸಮಯ. ರಾಜ಼್ ನಳಿನಿಯನ್ನು ನೋಡಲು ಹೋದ. ನಳಿನಿ ಆಗ ತಾನೆ ಆಸ್ಪತ್ರೆಯಿಂದ ಮನೆಗೆ ಹಿಂದಿರುಗಿದ್ದಳು. ರಾಜ಼್ ಬಾಗಿಲನ್ನು ತಟ್ಟಿದ. ಬಾಗಿಲು ತೆಗೆದು ರಾಜ಼್‌ನನ್ನು ಮನೆಯೊಳಕ್ಕೆ ಕರೆದುಕೊಂಡು ಥಟ್ಟನೆ ಬಾಗಿಲನ್ನು ಮುಚ್ಚಿ ಹಾಗೆಯೇ ರಾಜ಼್‌ನನ್ನು ಅಪ್ಪಿಕೊಂಡಳು.

"ರಾಜ಼್ ಈ ರಾತ್ರಿಯೆಲ್ಲವೂ ಇಲ್ಲೇ ನನ್ನ ಪಕ್ಕದಲ್ಲೇ ಇರಬೇಕು. ಎಲ್ಲೂ ಹೋಗಬಾರದು."

"ಆಗಲಿ. ಆಸ್ಪತ್ರೆಯಲ್ಲಿ ಬಾಷಾ ನಿನಗೆ ತೊಂದರೆಕೊಟ್ಟನೇ ?"

"ಏನೂ ಇಲ್ಲ."

"ಮಾತನಾಡಿಸಲೇ ಇಲ್ಲವೇ ?"

"ಇಲ್ಲ. ಮಧ್ಯಾಹ್ನದವರೆಗೂ ಸುಮ್ಮನೆಯೇ ಇದ್ದ. ಮಧ್ಯಾಹ್ನ ಅವನ ಕೈಗೆ ನೆನ್ನೆ ಬರೆದ ಕಾಗದ ಬಂದಿರಬೇಕು. ಕಾಗದ ಓದಿದ ನಂತರ ನನ್ನ ಕಡೆ ಅದೊಂದು ವಿಧವಾಗಿ ನಗುನಗುತ್ತಾ ಪ್ರೇಮವಿದ್ದಂತೆ ಸೂಚನೆ ತೋರಿಸುತ್ತಿದ್ದ."

"ಬೇರೇನೂ ವಿಷಯವಿಲ್ಲವಲ್ಲಾ !"

"ಒಂದು ವಿಷಯ. ಆಸ್ಪತ್ರೆಯಲ್ಲಿರುವ ಡ್ಯೂಟಿ ಡಾಕ್ಟರ್ ಪುಟ್ಟಣ್ಣ ನವರು ಮೆಡಿಕಲ್ ಆಫೀಸರ್ ಚಕ್ರಪಾಣಿಯವರೊಂದಿಗೆ 'ತಾವು ರಾಮ ರಾಯರು ಸಾಯುವ ಹಿಂದಿನ ರಾತ್ರಿ ನಾಲ್ಕು ಘಂಟೆಗೆ ಬಂದು ನೋಡಿ ಕೊಂಡು ಹೋದರೆಂದೂ, ಆಗ ರಾಮರಾಯರು ನಿರಾಯಾಸವಾಗಿ ನಿದ್ರೆ ಮಾಡುತ್ತಿದ್ದರೆಂದೂ' ಹೇಳಿದರಂತೆ. ಚಕ್ರಪಾಣಿಯವರು ನಮ್ಮಲ್ಲಿ ಯಾರನ್ನೂ ಏನೂ ಕೇಳಲಿಲ್ಲ. ವಿಷಯವೇನೋ ಸರಿಯಾಗಿ ಅರ್ಥವಾಗದೆ ಇದೆ. ಇದರಲ್ಲೇನೋ ರಹಸ್ಯ ನಡೆಯುತ್ತಿದೆ. ಸಂಜೆ ಐದು ಘಂಟೆಯ ಹೊತ್ತಿಗೆ ಬಾಷಾ ಪುಟ್ಟಣ್ಣನವರೊಂದಿಗೆ ನಿಂತು ದಿಕ್ಕುಗಳನ್ನು ಗುರ್ತಿಸಿ, ಬೆರಳನ್ನು ತೋರಿಸಿ ಮಾತನಾಡುತ್ತಿದ್ದ."

"ಅವರೇನು ಮಾತನಾಡುತ್ತಿದ್ದರೆಂಬುದನ್ನು ನೀನು ಗಮನಿಸಲಿಲ್ಲವೆಂದು ಕಾಣುತ್ತೆ. ಅಲ್ಲವೇ ನಳಿನಿ ?"

"ಹೌದು. ನಾನು ಅದನ್ನು ಗಮನಿಸಲಿಲ್ಲ. ಗಮನಿಸಲಾದರೂ ಸಾಧ್ಯವಿದೆಯೇ ? ನಾನು ಡ್ಯೂಟಿಯಲ್ಲಿದ್ದೆ."

"ನಿನ್ನ ಮೇಲೆ ಆಸ್ಪತ್ರೆಯಲ್ಲಿ ಮತ್ಯಾರಿಗೂ ಸಂದೇಹವಿಲ್ಲವೇ ?"

"ಬೇರೆ ಯಾರೂ ನನ್ನ ಮೇಲೆ ಸಂದೇಹಪಡುತ್ತಿಲ್ಲ. ಅದಕ್ಕೆ ಬದಲಾಗಿ 'ತಪ್ಪು ಮಾಡಿದ ಗಂಡನನ್ನು ಹೆಂಡತಿಯೇ ಹಿಡಿದುಕೊಟ್ಟಿದ್ದಾಳೆ' ಎಂಬುದಾಗಿ ಹೊಗಳಿಕೆಯ ಮಾತನ್ನು ಆಡುತ್ತಿದ್ದಾರೆ. ಆ ಮಾತು ಎತ್ತಿದರೆ ನನ್ನ ಮೈಯೆಲ್ಲವೂ ಉರಿಯುತ್ತದೆ."

"ಸರಿ. ಅದು ಹೋಗಲಿ. ಇನ್ನು ಮುಂದೆ ನಿನಗೆ ಯಾವ ಭಯವೂ ಇಲ್ಲ ನಳಿನಿ. ರಾಮರಾಯರನ್ನು ಕೊಲೆ ಮಾಡಿದವಳು ಸಿಕ್ಕಿ, ಕಾಗದ ಬರೆದಿಟ್ಟು, ಪುನಃ ಪರಾರಿಯಾಗಿದ್ದಾಳೆ. ಆಕೆ ಬಹಳ ಜಾಗರೂಕತೆಯಿಂದ ಕೆಲಸ ಮಾಡಿದ್ದಾಳೆ. ಇನ್ನು ನಾಳೆ ದಿನ ಮೆಡಿಕಲ್ ಆಫೀಸರಿಗೂ ವಿಷಯ ತಿಳಿದುಬಿಡಬಹುದು. ನಂತರ ನಿಮ್ಮ ಆಸ್ಪತ್ರೆಯಲ್ಲಿ ಸಂದೇಹಕ್ಕೆ ಈಡಾಗುವಂತೆ ಯಾರೂ ಇರುವುದಿಲ್ಲ."

"ರಾಮರಾಯರನ್ನು ಕೊಲೆಮಾಡಿದ್ದು ಹೆಂಗಸೇ ?"

"ಹೌದು, ಹೆಂಗಸು"

"ಕೊಲೆ ಮಾಡಿದ್ದೇನೆಂಬದಾಗಿ ತಿಳಿಸಲು ಕಾಗದ ಬರೆದಿಟ್ಟು ಪರಾರಿಯಾಗಿದ್ದಾಳೆಯೇ ?"

"ಹೌದು."

"ಈಗ ಆಕೆ ಎಲ್ಲಿದ್ದಾಳೆ ?"

"ನನಗೆ ತಿಳಿದಿದ್ದರೆ ಆಕೆಯನ್ನಿಷ್ಟುಹೊತ್ತಿನವರೆಗೂ ಬಿಡುತ್ತಿದ್ದೆನೆ ?"

"ಅದಿರಲಿ. ಕಾಗದ ಬರೆದಿದ್ದಾಳಲ್ಲಾ ! ಕೆಳಗಡೆ ಆಕೆಯ ಸಹಿ ಹಾಕಿರಲಿಲ್ಲವೆ ?"

"ಹಾಕಿದ್ದಿತು."

"ಏನೆಂದು ?"

"ಶಾಂತ ಎಂದು."

"ಹ್ಞಾಂ ! ಶಾಂತಾ !"

"ಹೌದು, ಶಾಂತಾ."

"ನಿಮ್ಮ ಹೆಂಡತಿ ಶಾಂತಮ್ಮನವರೇ ?"

"ಹೌದು, ನನ್ನ ಹೆಂಡತಿ ಶಾಂತಳೇ !"

"ಛೆ, ಛೆ. 'ಆಕೆ ಹೀಗೆ ಕಾಗದ ಬರೆದಿಟ್ಟುಹೋಗಿದ್ದಾಳೆ' ಎಂದು ನನ್ನ ಬಳಿ ಠ್ಸೋಕ್ ಮಾಡಬೇಡಿ. ಆಕೆಗೆ ಅಷ್ಟು ಧೈರ್ಯವಿರಲಾರದು. ಆ ಪಾತ್ರಾಭಿನಯಕ್ಕೆ ಬೇರೆ ಯಾರನ್ನೋ ನೇಮಿಸಿರಬೇಕು."

"ಹಾಗಲ್ಲ ನಳಿನಿ. ಆ ಕೊಲೆಯ ಸಂಬಂಧವಾಗಿ ನೀನು ನಿನ್ನ ಗಂಡನ ಮೇಲೆ ಗುಮಾನಿ ಬರುವಂತೆ ಮಾತನಾಡಿ ಷಣ್ಮುಗಂನನ್ನು ಸಿಕ್ಕಿಸಿದೆ. ನಾನು ನನ್ನ ಹೆಂಡತಿ ಶಾಂತ ತಾನೇ ಕೊಲೆ ಮಾಡಿರುವಂತೆ ಹೇಳಿದ ಹಾಗೆ ಪತ್ತೇದಾರ ಥಾಮಸ್ ಬಳಿ ತಿಳಿಸಿ ಆಕೆಯು ಕೊಲೆ ಮಾಡಿದವಳಾಗಿ ನಿರೂಪಿಸಿದೆ."

"ಅವರು ಶಾಂತಮ್ಮನವರನ್ನು ವಿಚಾರಿಸಲು ಬರಲಿಲ್ಲವೇ ?"

"ಬಂದರು."

"ಮತ್ತೆ ಸಿಕ್ಕಲಿಲ್ಲವೇ ?"

"ಸಿಕ್ಕುವುದಕ್ಕೆ ಆಕೆ ಮನೆಯಲ್ಲಿದ್ದರೆ ತಾನೇ ?"

"ಮತ್ತೆಲ್ಲಿಗೆ ವರ್ಗಾಯಿಸಿದಿರಿ ?"

"ಬೇರೊಂದು ಜಾಗವಿದೆ. ಅಲ್ಲಿ ಯಾರನ್ನು ಮರೆಮಾಚಿಟ್ಟರೂ ಎಂತಹ ಕಿಲಾಡಿ ಪತ್ತೇದಾರನು ಬಂದರೂ ಹಿಡಿಯಲು ಸಾಧ್ಯವಿಲ್ಲ."

"ಅದ್ಯಾವ ಜಾಗ ರಾಜ್ ?"

"ಅದು ಒಂದು ರೌಡಿಗಳ ಗುಂಪು. ಯಾವ ಪೋಲೀಸರಾಗಲೀ, ಸಿ.ಐ.ಡಿ.ಗಳಾಗಲೀ, ಪತ್ತೇದಾರರಾಗಲೀ ಅವರ ಹತ್ತಿರ ಸುಳಿಯುವುದಿಲ್ಲ."

"ಹಾಗೆ ಒಂದುವೇಳೆ ಎಡೆಗುಂದದೆ ಹೋದರೆ ?"

"ಚೂರಿಯ ಇರಿತದಿಂದ ಪ್ರಾಣತ್ಯಾಗ ಮಾಡಬೇಕಾಗುತ್ತದೆ."

"ಬಹಳ ಆಶ್ಚರ್ಯವಾಗಿದೆ ನಿಮ್ಮ ಮಾತು !"

"ನನ್ನ ಮಾತು ಎಷ್ಟು ಆಶ್ಚರ್ಯವೋ ನಡತೆಯೂ ಅಷ್ಟೇ ಆಶ್ಚರ್ಯ."

"ಒಂದು ಮಾತು ರಾಜ್. ನಿಮ್ಮ ನಡತೆಯೂ ಮಾತುಗಳೂ ನನ್ನಲ್ಲಿ ವ್ಯಂಗ್ಯವಾಗಿ ನಡೆಯದಂತೆ ಅನುಗ್ರಹಿಸಬೇಕು."

"ನನ್ನ ಪ್ರಾಣ ಹೋದರೂ ನಿನ್ನನ್ನು ಯಾವ ಕಷ್ಟಕ್ಕೂ ಗುರಿಮಾಡುವವನಲ್ಲ."

"ಮೊದಲು ಆ ರೌಡಿಗಳ ಗುಂಪಿನ ವಿವರವನ್ನೂ ಶಾಂತಮ್ಮನವರ ವಿಷಯವನ್ನೂ ಸಂಪೂರ್ಣವಾಗಿ ತಿಳಿಸಿ. ಅದರಿಂದ ನನ್ನ ಮನಸ್ಸಿಗೆ ಶಾಂತಿಯುಂಟಾಗಬಹುದು."

"ಕೇಳು ನಳಿನಿ. ನೆನ್ನೆಯ ದಿನ ರಾತ್ರಿ ಸುಮಾರು ಹತ್ತು ಘಂಟೆಯ ಮೇಲೆ ಶಾಂತಳನ್ನು ಜಟಕಾ ಗಾಡಿಯಲ್ಲಿ ಕೂರಿಸಿಕೊಂಡು ರಹಸ್ಯಮಂದಿರದಲ್ಲಿ ಕಳ್ಳರಗುಂಪಿನ ವಶಕ್ಕೆ ಒಪ್ಪಿಸಿಬಂದೆ. ಆ ರಹಸ್ಯಮಂದಿರವು ಇಲ್ಲಿಂದ ಕೇವಲ ಏಳು ಮೈಲಿಗಳು ಮಾತ್ರವೇ! ಅದನ್ನು ಕಂಡುಹಿಡಿಯಬೇಕೆಂದರೆ ಬ್ರಹ್ಮನಿಂದಲೂ ಸಾಧ್ಯವಿಲ್ಲವೆನ್ನಬಹುದು. ಸುತ್ತಲೂ ಬೆಟ್ಟಗುಡ್ಡಗಳೂ, ಅಲ್ಲಲ್ಲಿ ಮುಳ್ಳಿನ ಪೊದರುಗಳೂ, ಒಂದು ದೊಡ್ಡ ಕೆರೆಯೂ ಆ ಜಾಗಕ್ಕೆ ಅನ್ವಯಿಸಿದಂತಿದೆ. ಅಲ್ಲಿ ಯಾವ ನರಪಿಳ್ಳೆಯೂ ಅಧಿಕ ಸಂಚಾರಮಾಡುವುದಿಲ್ಲ. ಮಾಡಲೂ ಭಯ.

"ಆ ಕಳ್ಳರಗುಂಪಿ ನಯಜಮಾನ ಹೆಸರಾಂತ ಢಾಕೂ ರಜಾಕ್ ಎಂದು. ಆತನ ಕೈಕೆಳಗೆ ಮಂತ್ರವಾದಿ, ದೊಡ್ಡ ದೊಡ್ಡ ಪೈಲ್ವಾನರು, ಮಟ್ಟ ಮದ್ಯಾಹ್ನ ಬಿಚ್ಚುಗತ್ತಿಯಿಂದ ಯಾರನ್ನಾದರೂ ಇರಿದು ಹೋಗುವಂತಹ ಎದೆಗುಂದದ ಪುಂಡ ಪೋಕರಿಗಳು, ರಖಂ ವಾರಿ ರಮಣಿಯರೂ, ಒಂದೆರಡು ಕಾರುಗಳೂ, ಪಿಸ್ತೂಲು ಮೊದಲಾದುವುಗಳು ಆತನಲ್ಲಿವೆ. ಆತನೂ ಸಹ ಎಂತಹ ದೊಂಬಿ ನಡೆಯುತ್ತಿದ್ದರೂ ಮುಂದೆ ನುಗ್ಗಿ ಜಯಶಾಲಿಯಾಗಿಯೇ ಹಿಂದಿರುಗುತ್ತಾನೆ. ಅಪಜಯವೆಂಬುದು ಆತನ ಜೀವನದಲ್ಲಿ ಹಗಲುಗನಸು.

"ರಜಾಕ್‌ನ ತಂಗಿ ಒಬ್ಬಳಿರುವಳು. ಅವಳೇ ಬೀಬೀಜರ್ಾ. ನನಗೆ ಮದುವೆಯಾಗುವ ಮೊದಲಿನಿಂದಲೂ ಬೀಬೀಜರ್ಾ ನನಗೆ ಪರಿಚಯಸ್ಥಳು. ದೊಡ್ಡಮನುಷ್ಯರ, ಶ್ರೀಮಂತರ, ಧನಮಧಾಂಧರ ಮನಸ್ಸನ್ನು ಕೆರಳಿಸಿ ಕಾಮದಾಸೆಯನ್ನು ತೋರಿಸಿ ಅ ಂಗಾಂಗಳನ್ನು ಮುಟ್ಟಿಸಿ ಅವರು ಸ್ವಲ್ಪ ಏಮಾರಿದರೆಂದರೆ ಆಕೆಯ ಸೊಂಟದಲ್ಲಿರುವ ಬಾಕುವಿನಿಂದ ಪ್ರಾಣ ತೆಗೆದುಬಿಡುತ್ತಾಳೆ. ಆದರೆ ನನ್ನನ್ನು ಮಾತ್ರ ಆಕೆ ಒಂದೂ ಮಾಡುವುದಿಲ್ಲವೆಂದು ಸತ್ಯವಾಡಿ ಹೇಳಿದ್ದಾಳೆ. ನನ್ನ ಮೇಲೆ ಆಕೆಗೆ ಅದೊಂದು ವಿಧವಾದ ಪ್ರೇಮ, ಅಷ್ಟೊಂದು ಆಸೆ.

"ಆಕೆಯು ನನಗೆ ಪ್ರಥಮ ಮಿಲನವಾದದ್ದು ಸುಮಾರು ಎಂಟು

ವರ್ಷದ ಹಿಂದೆ ನಾನು ಕಾಲೇಜಿನಲ್ಲಿ ಓದುತ್ತಿದ್ದಾಗ. ನನಗೂ ಆಕೆಗೂ ಯಾವುದೋ ಒಂದ "ಋಣಾನುಬಂಧವಿರಬೇಕು. ಅದರ ದೆಸೆಯಿಂದ ಪರಿಚಯವಾಯಿತು. ಪ್ರಣಯ ಹಾದಿಯಲ್ಲಿ ಕಾಲಿಕ್ಕಿಸಿತು.

"ಆಕೆಯು ಪ್ರಣಯದ ಔತಣವನ್ನು ಬಡಿಸುತ್ತೇನೆಂದು ಸಂಜ್ಞೆಯ ಮೂಲಕ ಪ್ರತಿದಿನವೂ ನನ್ನನ್ನು ಬೋಧನೆ ಮಾಡುತ್ತಿದ್ದಳು. ನಾನು ಔತಣವನ್ನು ಸ್ವೀಕರಿಸಲು ಭಯಪಡುತ್ತಿದ್ದೆ. ಕೊನೆಗೆ ಆಕೆಯ ಬಲವಂತದಿಂದ ಆಕೆ ಕರೆದುಕೊಂಡು ಹೋದ ಮರೆಯಾದ ಯಾರೂ ಇಲ್ಲದ ಸ್ಥಳದಲ್ಲಿ ನಮ್ಮಿಬ್ಬರ ಪರಸ್ಪರ ಅಂಗಗಳು ಒಂದಕ್ಕೊಂದು ರುಚಿಕಂಡಿತು. ನಾನು 'ಬೀಬಿಜಾನ್' ಎಂದೆ. ಆಕೆ 'ರಾಜ್' ಎಂದಳು."

"ಅಂದಿನಿಂದ ಕಾಲೇಜಿಗೆ ಹೋಗುವುದನ್ನು ನಿಲ್ಲಿಸಿದೆ. ಬೀಬೀಜಾನ್ ನನ್ನನ್ನು ಆಕೆಯ ಏಳು ಮೈಲಿ ಆಚೆ ಇರುವ ರಹಸ್ಯ ಮಂದಿರಕ್ಕೆ ಕರೆದುಕೊಂಡು ಹೋದಳು. ಆಕೆಯ ಅಣ್ಣ ರಜಾಕ್ ಬೀಬಿಜಾನ್ ಮೇಲೆ ಕೋಪಗೊಂಡು ನನ್ನನ್ನು ಇರಿದುಬಿಡಲು ಚಾಕುವನ್ನೆತ್ತಿಕೊಂಡ. ಆಗ ಬೀಬಿಜಾನ್ ಅಣ್ಣನ ಬಳಿ ನನ್ನನ್ನು ಕೊಲ್ಲಬಾರದೆಂದೂ ನನ್ನ ಮೇಲೆ ಆಕೆಗೆ ಇಷ್ಟವಾಗಿದೆಯೆಂದೂ, ಅದು ತಡೆಯಲು ದಾರಿ ಹುಡುಕಿದರೆ ಬೀಬೀಜಾನ್ ತನ್ನ ಹೆಣವನ್ನೇ ಕಾಣಬೇಕಾಗುತ್ತದೆಂದೂ ಅಣ್ಣನ ಬಳಿ ಹೇಳಿದಳು.

"ರಜಾಕ್ ನನ್ನನ್ನು ನಿಂದಿಸಿದ. ಚಾಕುವನ್ನು ತೆಗೆದು ಬಿಸಾಕಿದ. ಈ ಸ್ಥಳವನ್ನು ಯಾರಿಗೂ ತೋರಿಸಬಾರದು. ಹಾಗೆ ಒಂದು ವೇಳೆ ತೋರಿಸಿದರೆ, ತೋರಿಸಲು ಪ್ರಯತ್ನಪಟ್ಟರೆ, ತೋರಿಸಬೇಕೆಂಬ ನೆನೆಪು ಮನಸ್ಸಿಲ್ಲಿ ಉಂಟಾದ ದಿನವೇ ತಿಳಿದುಹೋಗುತ್ತೆ. ನಂತರ ನೀನು ಯಮನ ರಾಜ್ಯದಲ್ಲೊಬ್ಬ ಪ್ರಜೆಯಾಗಲೇಬೇಕು ಎಂದು ಎಚ್ಚರಿಕೆ ಕೊಟ್ಟರು.

"ಇಂದಿನವರೆಗೂ ಆ ರಹಸ್ಯಮಂದಿರವನ್ನು ನಾನಾರಿಗೂ ತೋರಿಸಿಲ್ಲ. ಅವರು ಈ ಊರನ್ನೇ ಬಿಟ್ಟು ಅವರ ಸ್ವಂತ ಊರಿಗೆ ಹೋಗಿದ್ದರು.

"ಆಗ ಆ ರಹಸ್ಯ ಮಂದಿರವು ಮುಚ್ಚಲ್ಪಟ್ಟು ಹಾಳು ಬಿದ್ದು ಹೋಗುತ್ತಿತ್ತು. ಆಗಲೂ ನಾನು ಆ ರಹಸ್ಯ ಮಂದಿರದ ಸುದ್ದಿಯನ್ನು ಯಾರಿಗೂ ಪರಿಚಯಮಾಡಿಕೊಡಲಿಲ್ಲ.

"ನೀನು ನನ್ನ ಜೀವನದ ಭಾಗಿನಿ ಎಂಬುದರ ಮೇಲೆ ನಿನ್ನಲ್ಲಿ ಈ ವಿಷಯು ಮಾತ್ರವಲ್ಲ, ಇನ್ನೂ ನನ್ನ ಜೀವನದಲ್ಲಿನ ಆಗುಹೋಗುಗಳೇನಿ

ದೆಯೋ ಅದೆಲ್ಲವನ್ನೂ ಅಂಜದೆ ತಿಳಿಸಲು ಕಾದಿದ್ದೇನೆ.

"ರಜಾಕ್ ನನ್ನನ್ನು ಆತನ ತಂಗಿಯ ಗಂಡ ಎಂದು ನನ್ನ ಮೇಲೆ ಅದೆಷ್ಟೋ ಪ್ರೀತಿ ವಿಶ್ವಾಸಗಳನ್ನಿಟ್ಟಿದ್ದಾನೆ. ನನ್ನ ತಂದೆಯ ಕೊಲೆಯು ರಜಾಕನ ಕೈಯಿಂದಲೇ ಮುಗಿಸಬೇಕೆಂಬ ಅಭಿಪ್ರಾಯವಿತ್ತು. ಆದರೆ ಅಂತಹ ಕ್ರೂರ ಮೃಗದವನ ಕೈಲಿ ಕೊಟ್ಟು ಕುತ್ತಿಗೆ ಕುಯ್ಯಿಸುವುದಕ್ಕಿಂತಲೂ ಬೇರೆ ಮಾರ್ಗವನ್ನು ಹುಡುಕುವುದೇ ಲೇಸೆಂದುಕೊಂಡು ನಿನ್ನ ಉಪಕಾರ ವನ್ನು ಬಯಸಿದೆ.

"ಅದಿರಲಿ. ಮುಂದೆ ಹೇಳುತ್ತೇನೆ ಕೇಳು ನಳಿನಿ. ಈಗ ಶಾಂತ ರಜಾಕನ ರಹಸ್ಯ ಮಂದಿರದಲ್ಲಿದ್ದಾಳೆ. ಅಲ್ಲಿರುವ ಗುಂಪುಕಳ್ಳರು, ಕೇಡಿ ಗಳೂ, ಡಾಕುಗಳು, ರಜಾಕನು, ಮತ್ತು ಮೃತ್ಯುದೇವತೆ ಬೀಬೀಜಾ಼ ಮೊದಲುಗೊಂಡು ಶಾಂತಳನ್ನು ಧರ್ಮದೇವತೆಯಂತೆ ನೆನೆದು ಕೊಂಡಾಡು ತ್ತಿದ್ದಾರೆ.

"ಅಲ್ಲಿ ಆಕೆಯ ಶೀಲಕ್ಕೆ ಯಾವ ಭಂಗವೂ ಬಾರದಿರುವಂತೆ ರಜಾಕ್ ಕಾವಲುಕಾಯುತ್ತಿರುತ್ತಾನೆ. ಶಾಂತಳು ತನ್ನ ಒಡಹುಟ್ಟಿದ ತಂಗಿಯೆಂದೇ ಭಾವಿಸಿದ್ದಾನೆ. ಬೀಬೀಜಾನಳೂ ವಿಶ್ವಾಸವಿಟ್ಟಿದ್ದಾಳೆ.

"ಈಗ ಆ ರಹಸ್ಯ ಮಂದಿರದಲ್ಲಿ ಆಕೆ ಇರುವುದು ನನ್ನ ನಿನ್ನ ವಿನಃ ಮತ್ಯಾರಿಗೂ ತಿಳಿಯದು.

"ಶಾಂತ ತಾನೆ ಕೊಲೆಮಾಡಿದವಳಂತೆ ಕಾಗದ ಬರೆದು ಮಂಚದ ಮೇಲಿಟ್ಟು ಆಕೆಯನ್ನು ಮೊದಲು ರಜಾಕನ ಸನ್ನಿಧಿಯುಲ್ಲಿ ಒಪ್ಪಿಸಿ ನಂತರ ಪೋಲೀಸ್ ಸ್ಟೇಷಿಗೆ ಹೋಗಿ ಪತ್ತೇದಾರ ಥಾಮಸರಿಗೆ ಶಾಂತಳು ತಾನೇ ಕೊಲೆಮಾಡಿದವಳೆಂದು ಒಪ್ಪಿಕೊಂಡಿದ್ದಾಳೆಂದೂ ತಿಳಿಸಿದೆ. ಅವರು ಕೋಪಾ ವೇಶದೊಂದಿಗೆ ಶಾಂತಳನ್ನು ನುಂಗುವಂತೆ ಹಾರಿಬಿದ್ದರು.

"ಅವರ ಮಾತಿಗೆ ನಾನು ಕೋಪಗೊಳ್ಳಲಿಲ್ಲ. ನಡೆಯಬೇಕಾದ ಕಾರ್ಯ ಸುಗಮವಾಗಿ ನಡೆದುಹೋಗಬೇಕಾದ್ದು ನಮಗೆ ಬೇಕಾದ್ದ ಮೊದಲನೆಯ ಕೆಲಸವೆಂದುಕೊಂಡು ಶಾಂತಳನ್ನು ಎಷ್ಟು ನಿಂದಿಸಿದರೂ ಅದಕ್ಕೆ ನಾನು ದುಡುಕಿ ಯಾವ ಮಾತನ್ನೂ ಆಡಲಿಲ್ಲ.

"ಥಾಮಸ್‌ರವರು ಶಾಂತಳನ್ನು ನೋಡುವ ಸಲುವಾಗಿ ನಮ್ಮ ಮನೆಗೆ ಬಂದರು. ಶಾಂತ ಅಗೋಚರಳಾಗಿದ್ದಳು. ಆಕೆಯನ್ನು ಪುನಃ ಕಂಡು

ಹಿಡಿಯಬೇಕೆಂದು ಇನ್ಸ್‌ಪೆಕ್ಟರ್ ಬಜ್ಜಯ್ಯನವರೂ ಬಂದು ಹುಡುಕಾಡಿದರು. ಕೊನೆಗೆ ನನ್ನ ದುರದೃಷ್ಟವೆಂದು ನೆಪವಿಟ್ಟುಕೊಂಡು ಅಭಿನಯಿಸಿದ ಅಭಿನಯದಿಂದ ನನ್ನ ಮೇಲೆ ಕರುಣೆ ತೋರಿಸಿ, ನನಗೆ ಸಮಾಧಾನ ಹೇಳಿ, ಅವರು ಪತ್ತೆ ಮಾಡಲು ಪೋಲೀಸ್ ಕಂಪ್ಲೇಂಟ್ ಮತ್ತು ಏನೇನೋ ಕೆಲಸ ಮಾಡಿ ಶಾಂತಳನ್ನು ಹಿಡಿಯಲು ಮೊದಲಾದರು. ಆದರೆ ಮತ್ತೊಂದು ವಿಷಯ ನಳಿನಿ ! ಶಾಂತ ಬರೆದ ಹಾಗೆ ಮಂಚದ ಮೇಲಿರಿಸಿದ್ದ ಕಾಗದವನ್ನು ನಾನು ಶೋಕಗೊಂಡವನಂತೆ ಅಭಿನಯಿಸುವ ಸಮಯದಲ್ಲಿ ಆ ಕಾಗದವನ್ನು ನಾನೇ ಕೈಗೆ ತೆಗೆದುಕೊಂಡು ಜೋಬಿನಲ್ಲಿಟ್ಟುಕೊಂಡೆ. ಆ ಕಾಗದವನ್ನು ಅವರೇ ಇಟ್ಟುಕೊಂಡಿರುವುದಾಗಿ ಅವರ ಭಾವನೆಯಿರಬೇಕು. ನಾನು ಆ ಕಾಗದವನ್ನು ಒಲೆಯಲ್ಲಿ ಹಾಕಿ ಧಗಧಗಿಸಿಬಿಟ್ಟೆ.

"ಈಗ ರಾಮರಾಯರನ್ನು ಕೊಲೆಮಾಡಿದವಳು ಶಾಂತ. ಆಕೆಯು ನೈಜ ಸ್ಥಿತಿಯನ್ನು ತನ್ನ ಗಂಡನ ಬಳಿ ಮುಂದಿಟ್ಟು ಯಾರಿಗೂ ಸಿಕ್ಕದಂತೆ ಪರಾರಿಯಾಗಿದ್ದಾಳೆ. ಶಾಂತಳು ರಾಮರಾಯರಿಗೆ ವಿಷಕೊಟ್ಟು ಕೊಲ್ಲಲು ಸಹಕರಿಸಿದ ಷಣ್ಮುಗಂ ಪೋಲೀಸ್ ಸ್ಟೇಷನ ಲಾಕಪ್ಪಿನಲ್ಲಿ ನರಳುತ್ತಿದ್ದಾನೆ. ಎಂಬುದಾಗಿ ಇನ್ಸ್‌ಪೆಕ್ಟರ್ ಬಜ್ಜಯ್ಯನವರು ತಮ್ಮ ಪೋಲೀಸ್ ರಿಪೋರ್ಟ್ ಬುಕ್ಕಿನಲ್ಲಿ ಬರೆದುಕೊಂಡರು. ಅಂತೂ ಆ ಸುದ್ಧಿಯನ್ನು ಇಂದು ನಾಳೆಯೊಳಗಾಗಿ ಪ್ರತಿಯೊಂದು ಪೇಪರಿನಲ್ಲೂ ಪ್ರಕಟಿಸಲು ಸುದ್ಧಿಯನ್ನು ಹಂಚಬಹುದು ಎಂದು ಕಾಣುತ್ತೆ ನಳಿನಿ. ಹೇಗಿದೆ ಈ ನಾಟಕ" ಎಂದು ನಳಿನಿ ಬಳಿ ರಾಜ್ ಭಾಷಣ ಮಾಡಿದ.

ರಾಜ್ ಮಾತುಗಳನ್ನು ಕೇಳುತ್ತಾ ಸ್ತಂಭಿಭೂತಳಾಗಿ ಕುಳಿತಿದ್ದಳು ನಳಿನಿ. ಆಕೆಗೆ ಅಳು ಉಕ್ಕಿ ಉಕ್ಕಿ ಬರುತ್ತಿತ್ತು. ರಾಜ್ ಮಾತ್ರ ತಾನು ವೀರ, ಧೀರ, ಶೂರ ಎಂದು ಅವನನ್ನು ಅವನೇ ಹೊಗಳಿಕೊಳ್ಳುತ್ತಿದ್ದ. ಅವನು ಮಾಡಿದ ನಯವಂಚಕ ಕೆಲಸಗಳೆಲ್ಲವನ್ನೂ ಒಂದೊಂದನ್ನಾಗಿ ಬಿಡಿಸಿ ಹೇಳುತ್ತಿದ್ದ. ಅದೆಲ್ಲವನ್ನೂ ಕೇಳಲು ನಳಿನಿಗೆ ಬೇಸರಿಕೆ. ಆದರೆ ಈಗ ರಾಜ್‌ನ ಮಾತಿಗೆ ತಲೆಬಾಗಬೇಕಾದ ಪ್ರಮೇಯವಿದೆ.

ಬೀಬೀಜಾ಼ ತನ್ನ ಪ್ರಣಯಿಗಳಲ್ಲೊಬ್ಬಳು. ಆಕೆ ಎಂಟು ವರ್ಷದ ಹಿಂದಿನಿಂದಲೂ ಪರಿಚಯಸ್ಥಳು ಎಂದು ರಾಜ್ ಹೇಳಿದ ಮಾತುಗಳನ್ನು ಕೇಳಿದ ನಂತರ ಆಕೆಯ ಹೃದಯ ಛಿದ್ರಛಿದ್ರವಾಯಿತು.

ಇಷ್ಟು ಹೊತ್ತು ರಾಜ್ ಆಡಿದ ಪ್ರತಿಯೊಂದು ಮಾತುಗಳಿಗೂ ನಳಿನಿ ಒಂದು ಬಾರಿಯಾದರೂ 'ಊಂ' ಅನ್ನಲಿಲ್ಲ. ಯಾವ ಅಡ್ಡ ಪ್ರಶ್ನೆಯನ್ನೂ ಹಾಕಲಿಲ್ಲ. ಉತ್ತರ ಕೊಡಲೇ ಇಲ್ಲ.

ಬೀಬೀಜಾನ್ ಮತ್ತು ತಾಳಿ ಕಟ್ಟಿದ ಹೆಂಡತಿ, ಸಾಕಿ ಸಲಹಿ ದೊಡ್ಡವ ನನ್ನಾಗಿ ಮಾಡಿದ ತಂದೆ ಇವರನ್ನೆಲ್ಲಾ ಏಮಾರಿಸಿದ ಇವನು ನನ್ನನ್ನು ಕಾಪಾಡುತ್ತಾನೆನ್ನುವುದು ನನ್ನ ಭ್ರಾಂತಿ. ಈ ಲೋಕದಲ್ಲಿ ಹುಟ್ಟಿದ್ದಕ್ಕೂ ಮತ್ತು ನಯವಂಚಕ ಪಿಶಾಚಿಯೊಬ್ಬನ ಮಾತನ್ನು ಕೇಳಿದ್ದಕ್ಕೂ ನನಗೆ ಇದೂ ಬೇಕು – ಇನ್ನೂ ಬೇಕು ಎಂದುಕೊಂಡಳು. ಆಕೆಯ ಕಣ್ಣುಗಳಿಂದ ಕಣ್ಣೀರು ತೊಟ್ಟಿಕ್ಕಿತು.

ರಾಜ್ ನಳಿನಿಯ ಪಕ್ಕದಲ್ಲಿ ಕೂತು ಆಕೆಯ ತೋಳನ್ನು ಅದುಮುತ್ತಾ ಕೇಳಿದ:—

"ನಳಿನಿ. ಏಕೆ ನನ್ನ ಮಾತಿಗೆ ಉತ್ತರ ಕೊಡಲೊಲ್ಲೆಯೆನ್ನುತ್ತೀಯೆ."

ನಳಿನಿ ಉತ್ತರ ಕೊಡಲಿಲ್ಲ. ಕಣ್ಣಿಂದ ಸುರಿಯುತ್ತಿದ್ದ ಕಂಬನಿಯನ್ನು ಒರೆಸಿಕೊಂಡಳು.

ರಾಜ್ ನಳಿನಿಯ ಕಣ್ಣು ಒದ್ದೆಯಾಗಿರುವುದನ್ನು ಕಂಡ. ಅವನಿಗೆ ಆಶ್ಚರ್ಯವಾಯಿತು.

"ನಳಿನಿ, ನಾನು ಹೇಳಿದ ಮಾತುಗಳು ನಿನ್ನನ್ನು ಅಳುವಂತೆ ಮಾಡಿಸಿತೇ? ಅದೇನು ಅಷ್ಟು ಕರ್ಣಕಠೋರವಾಗಿದೆಯೇ ನನ್ನ ಮಾತುಗಳು? ನಾನು ಹೇಳಿದ ಮಾತನ್ನು ಕೇಳಿ ಒಂದುವೇಳೆ ಆನಂದವನ್ನು ತಾಳಲಾರದೆ ಆನಂದ ಕಣ್ಣೀರನ್ನು ಸುರಿಸುತ್ತಿರುವಿಯೇನು?"

ನಳಿನಿ ಪುನಃ ರಾಜ್ ಮಾತಿಗೆ ಉತ್ತರ ಕೊಡಲಿಲ್ಲ.

"ಸರಿ, ಈಗ ನಾನು ಬಂದ ಹೊತ್ತು ಸರಿಯಿಲ್ಲವೆಂದು ಕಾಣುತ್ತೆ. ನಾನು ಬರುತ್ತೇನೆ" ಎಂದು ಎದ್ದು ಹೊರಟ. ಬಾಗಿಲ ಬಳಿ ಹೋದ. ಬಾಗಿಲನ್ನು ತೆಗೆದು ಹೊರಗೆ ಕಾಲಿಟ್ಟ. ಆಗಲೂ ನಳಿನಿ ಮಾತನಾಡಲಿಲ್ಲ.

ರಾಜ್ ಮನಸ್ಸು ಕೊಡಲಿಯಿಂದ ಕಡಿದಂತಾಯಿತು. ನಳಿನಿ ತನ್ನ ಮೇಲೆ ಏನೋ ಅಪಾರ್ಥ ಮಾಡಿಕೊಂಡಿದ್ದಾಳೆ. ಆಕೆ ಇನ್ನು ಮುಂದೆ ಮೊದಲಿನಂತೆ ವರ್ತಿಸಲಾರಳು. ಆಕೆಗೆ ನನ್ನ ಮೇಲೆ ಕೋಪ ಉಕ್ಕಿದೆ. ಯಾವುದೋ ಹಳೆಯ ಜ್ಞಾಪಕಗಳೆಲ್ಲವನ್ನೂ ನೆನೆದು ಮನಸ್ಸು ಹುಣ್ಣುಮಾಡಿ

ಕೊಂಡಿದ್ದಾಳೆ. ಅದು ಮಾಗಿದ ಹೊರತು ನನ್ನಲ್ಲಿ ಆಕೆಗೆ ವಿಶ್ವಾಸವಿಲ್ಲ, ಪ್ರೇಮವಿಲ್ಲ, ಎಂದುಕೊಂಡನು. ಸರಿ, ಇನ್ನೊಂದು ಗಂಟೆ ಕಳೆದು ಪುನಃ ಬಂದರಾಯಿತು ಎಂದುಕೊಂಡು ಬಾಗಿಲನ್ನು ಮುಚ್ಚಿಕೊಂಡು ಹೋಗುವುದ ರಲ್ಲಿದ್ದನು. ಅಷ್ಟರಲ್ಲಿ ರಜಾಕನ ಶಿಷ್ಯ ಮಜೀದ್ ಎದುರ್ಗೊಂಡ. ರಾರ್ಜ ಮಜೀದನನ್ನು ಕಂಡು ಮನೆಯೊಳಗೆ ಬರುವಂತೆ ಕಣ್ಸನ್ನೆ ಮಾಡಿದ. ಬೀದಿ ಯಲ್ಲಿ ಒಬ್ಬಿಬ್ಬರು ಆ ಕಡೆಯಿಂದ ಈ ಕಡೆಗೆ ಬರುತ್ತಿದ್ದರು. ಅವರು ಹೊರಟು ಹೋದನಂತರ ಮಜೀದನು ಸುತ್ತಲೂ ನೋಡಿಕೊಂಡು ಸರ್‍ರನೆ ಮನೆಯೊಳಗೆ ನುಗ್ಗಿದ.

ನಳಿನಿ ಮಜೀದನನ್ನು ನೋಡಿದಳು. ರಾರ್ಜ ಅವನನ್ನಕರೆದುಕೊಂಡು ಬಂದಿರುವಂತೆ ತಿಳಿದುಕೊಂಡಳು.

"ಬೀದಿಯಲ್ಲಿ ಹೋಗುವ ಭಿಕಾರಿಗಳನ್ನೆಲ್ಲಾ ಮನೆಯೊಳಗೆ ಸೇರಿಸ ಬೇಡಿ ರಾರ್ಜ. ಹಾಗೆ ಮಾತನಾಡಬೇಕೆಂಬ ಇಷ್ಟವಿದ್ದರೆ ನಿಮ್ಮ ಮನೆಗೆ ಕರೆದುಕೊಂಡು ಹೋಗಿ. ಇದೆಂತಹ ಅನಿಷ್ಟ ಜೀವನ" ಎಂದು ಗೊಣ ಗುಟ್ಟಿದಳು.

"ಕ್ಷಮಿಸು, ನಳಿನಿ. ಒಂದೆರಡು ಕ್ಷಣ ಸ್ವಲ್ಪ ತಡೆದುಕೊ. ವಿಷಯ ಬಹಳ ಮುಖ್ಯವಾದದ್ದು. ತಲೆಹೋಗುವ ವಿಷಯ. ಏನು ಮಾಡಲೂ ಸಾಧ್ಯವಿಲ್ಲ. ಕಾಲವ್ಯತ್ಯಾಸಕ್ಕೆ ಕತ್ತೆ ಕಾಲಿಗೂ ಕೈಮುಗಿಯಬೇಕೆನ್ನುವುದು ಸುಳ್ಳಲ್ಲ."

ನಳಿನಿ ಮರುಮಾತನಾಡಲಿಲ್ಲ.

"ಮಜೀದ್, ನೀನು ಬಂದ ವಿಷಯ ?"

"ಏನೂ ಇಲ್ಲ ಮಾಲೀಕ್. ಪೋಲೀಸರು ನಮ್ಮ ರಹಸ್ಯ ಮಂದಿರದ ದಾರಿಯ ಕಡೆಯೂ ಸಂಚರಿಸುತ್ತಿದ್ದಾರೆ. ಅನೇಕ ಸಿ.ಐ.ಡಿ.ಗಳು ಹೊಂಚು ಹಾಕುತ್ತಿದ್ದಾರೆ. ಅಂದು ಬೀಬೀಜಾರ್ ರೈಲ್ವೆ ಸ್ಟೇರ್ಷನಿಂದ ಒಬ್ಬನನ್ನು ಕರೆತಂದು, ದುಡ್ಡು ಸರಿಯಾಗಿ ಕೊಡದ ಕಾರಣದಿಂದ ಕೊಲೆಮಾಡಿ ರೇಸ್ ಕೋರ್ಸ್ ದಾರಿಯಲ್ಲಿ ಮಲಗಿಸಿಬಿಟ್ಟಿದ್ದಳು. ಆ ಕೇಸನ್ನು ಕಂಡುಹಿಡಿಯು ವುದಕ್ಕೂ ಶಾಂತಮ್ಮನವರನ್ನು ಪತ್ತೆ ಹಚ್ಚುವುದಕ್ಕೂ ಸುತ್ತಾಡುತ್ತಿದ್ದಾರೆ. ಶಾಂತಮ್ಮನವರನ್ನು ಈ ರಾತ್ರಿ ಬೇರೆ ಊರಿಗೆ ಸಾಗಿಸಿಬಿಡೋಣವೆಂದು ರಜಾಕ್ ಅಭಿಪ್ರಾಯ. ನಿಮ್ಮ ಅಭಿಪ್ರಾಯ ತಿಳಿದು ಬಾ ಎಂದರು. ಅಷ್ಟೆ."

"ನಾನು ಇನ್ನು ಎರಡು ಘಂಟೆಯಲ್ಲಿ ಮುಖೇನ ನೋಡುತ್ತೇನೆಂದು ಹೇಳು. ಪ್ರತಿಯೊಂದು ವಿಷಯವೂ ಅಲ್ಲೇ ಪ್ರಸ್ತಾಪವಾಗಲಿ" ಎಂದು ಹೇಳಿ ಮಜೀದನ ಕೈಗೆ ಎರಡು ರೂಪಾಯಿನ ನೋಟೊಂದನ್ನಿಟ್ಟು ಕಳುಹಿಸಿದನು.

ಮಜೀದನು ಸಲಾಂ ಹೊಡೆದು ಹೊರಟುಹೋದನು.

ರಾಜ್ಞ ತಲೆಯಮೇಲೆ ಕೈಯಿಟ್ಟು ಕುಳಿತುಕೊಂಡ. ಆತನಿಗೆ. ಬುದ್ಧಿ ಭ್ರಮಣೆಯಾಯಿತು. ಮಜೀದನ ಮಾತಿನಿಂದ ಆತನು ಸಂಕಟಕ್ಕೀಡಾದ.

"ಮುಂದೆ ಮಾಡುವ ಯೋಚನೆಯೇನು?" ಎಂದಳು ನಳಿನಿ.

"ಸತ್ತುಹೋಗೋಣ ಎನ್ನಿಸುತ್ತಿದೆ ನನಗೆ."

"ಜ್ಞಾನಮಾರ್ಗಕ್ಕೆ ದಾರಿ ಕಾಣುತ್ತಿದೆಯೆಂದು ಕಾಣುತ್ತೆ."

"ಹೌದು. ಮಾಡಿದ ಪಾಪಕಾರ್ಯವು ಪದೇಪದೇ ಎದುರುನಿಲ್ಲುತ್ತಿದೆ. ಈಗ ಅದರ ಪ್ರತಿಫಲವು ತಿಳಿಯುತ್ತಿದೆ ನಳಿನಿ."

"ನೀವೇ ಹೀಗೆ ಭಯಪಟ್ಟರೆ ನನ್ನ ಗತಿ ಹೇಗಾಗಬೇಕು ರಾಜ್ಞ."

"ಅದು ದೇವರಿಗೇ ಗೊತ್ತು."

" ನನ್ನನ್ನು ಕೈಬಿಡಬೇಡಿ ರಾಜ್ಞ" ಎಂದಳು ನಳಿನಿ.

" ಅದಿರಲಿ ನಳಿನಿ. ನಾನು ಈಗ ಅತಿ ಜಾಗ್ರತೆ ರಜಾಕನನ್ನು ನೋಡಲು ಹೋಗಬೇಕು. ಇನ್ನು ಎರಡು ಗಂಟೆಯಲ್ಲಿ ಬಂದು ನೋಡುವುದಾಗಿ ಮಜೀದನ ಕೈಲಿ ಹೇಳಿಕಳುಹಿಸಿರುವುದು ನಿನಗೆ ತಿಳಿದೇ ಇದೆ. ಇಲ್ಲಿಂದ ಕಾಲ್ನಡಿಗೆಯಲ್ಲಿ ಏಳು ಮೈಲಿ ನಡೆಯಬೇಕೆಂದರೆ ಕನಿಷ್ಠಪಕ್ಷ ಒಂದೂವರೆ ಗಂಟೆಯಾದರೂ ಬೇಕು.ಕಾರು ತೆಗೆದುಕೊಂಡು ಜಾಗ್ರತೆ ಹೋಗುವ ಹಾಗಿಲ್ಲ. ಅಲ್ಲದೆ ಆಕಡೆ ಈ ಸಮಯದಲ್ಲಿ ಕಾರು ಹೋದರೆ ಪೋಲೀಸರು ಗುರ್ತಿಸಿ ಕೊಳ್ಳದೆ ಬಿಡರು. ನಾನು ಹೊರಡುತ್ತೇನೆ. ನೋಡು, ನೆನ್ನೆಯದಿನ ನಡೆದಿರುವ ವಿಷಯವನ್ನೆಲ್ಲಾ ನಿನಗೆ ತಿಳಿಸಿರುವೆನು. ಮುಂದೆ ಹೆಚ್ಚು ವಿಷಯ ನಿನಗೆ ಬೇಕಾಗುವಂತಿದ್ದರೆ ನಾಳೆ ಖಂಡಿತ ಸಂಜೆ ಏಳು ಗಂಟೆಗೆ ಬಂದು ತಿಳಿಸುತ್ತೇನೆ" ಎಂದು ನಳಿನಿಯ ಬಳಿ ಹೇಳಿ ಹೊರಟನು ರಾಜ್ಞ.

ಆಗ ರಾತ್ರಿ ಎಂಟೂವರೆ ಆಗಿತ್ತು. ಒಂದೆರಡು ಬಿಸ್ಕತ್ ಒಂದು ಗುಟುಕು ಟೀ ಕುಡಿದು ಮಂಚದ ಮೇಲೆ ಬಿದ್ದಳು ನಳಿನಿ. ಆಕೆಗೆ ಭೂಲೋಕದಲ್ಲಿದ್ದಂತೆ ಜ್ಞಾಪಕವಿರಲಿಲ್ಲ. ಸುಮ್ಮನೆ ನಾನಾ ಕಡೆ ಸುತ್ತು ಹಾಕುತ್ತಿದ್ದಿತು ಅವಳ ಯೋಚನೆ.

೯

ರಾರ್ಜ ರಹಸ್ಯ ಮಂದಿರದ ಬಳಿ ಬಂದು ನೋಡಿದ. ಬಾಗಿಲು ಮುಚ್ಚಿದ್ದಿತು. ಬಾಗಿಲು ತಟ್ಟಿದ. ಬಾಗಿಲು ತೆಗೆಯಲ್ಪಟ್ಟಿತು. ಬಾಗಿಲನ್ನು ತೆಗೆದು ಒಳಗೆ ಕರೆದುಕೊಂಡು ಹೋದನು ಮಜೀದ್.

ಬೀಬಿಜಾನ್ ರಾರ್ಜನನ್ನು ಎದುರುಗೊಂಡಳು.

"ರಾರ್ಜ. ಏಕೆ ಇಷ್ಟು ತಡವಾಗಿ ಬಂದಿರಿ? ನಿಮ್ಮನ್ನು ಕಾಣಲು ಅಣ್ಣ ರಜಾಕ್ ಕಾದುಕಾದು ಈಗ ತಾನೆ ಬ್ಯಾಂಕ್ ಕೊಳ್ಳೆ ಹೊಡೆಯಲು ಗುಂಪನ್ನು ಕರೆದುಕೊಂಡು ಹೊರಟ. ನೀವು ಇಷ್ಟು ನಿಧಾನವಾಗಿ............

"ನಿನಗೆಲ್ಲಾ ವಿಷಯವು ತಿಳಿದಿದ್ದೂ ಪುನಃ ಪುನಃ ಅದೇ ವಿಷಯವನ್ನೇ ಕೇಳುತ್ತೀಯಲ್ಲಾ ಬೀಬೀ. ಆ ನರ್ಸ್ ನಳಿನಿಯನ್ನು ಕಂಡು ಆಕೆಯ ಬಳಿ ಆಸ್ಪತ್ರೆಯಲ್ಲಿ ಯಾರ್ಯಾರು ನಮ್ಮ ವಿಷಯದ ಬಗ್ಗೆ ಏನೇನು ಮಾತನಾಡಿ ಕೊಳ್ಳುತ್ತಿದ್ದರೆಂಬುದನ್ನು ತಿಳಿದುಕೊಂಡು ಬರಲು ಹೋಗಿದ್ದೆ. ಪಾಪ! ಮಾಡಬಾರದ ಕೆಲಸವನ್ನು ಆಕೆ ಮಾಡಿರುವುದು ಇದೇ ಮೊದಲನೆಯದೆಂದು ಕಾಣುತ್ತೆ. ಸುಮ್ಮನೆ ಹೆದರಿ ಸಾಯುತ್ತಾಳೆ. ಆಸ್ಪತ್ರೆಯ ಕೆಲಸವನ್ನು ಬಿಡಿಸಿಬಿಟ್ಟು ಇಲ್ಲಿಗೇ ಆಕೆಯನ್ನು ಕರೆದುಕೊಂಡು ಬರಬೇಕೆಂಬ ಯೋಚನೆ ನನಗಿದೆ. ಆದರೆ ಆಕೆ ಈಗ ಇಲ್ಲಿಗೆ ಬಂದರೆ ಆಸ್ಪತ್ರೆಯವರಿಗೂ ಒಂದು ಅಳಿಯದ ಸಂದೇಹ ಅಂಟಿಕೊಳ್ಳುತ್ತದೆಯಲ್ಲವೇ?"

"ಹೌದು. ಅದೂ ನ್ಯಾಯವೇ. ಒಂದೆರಡು ದಿನ ಆಕೆ ಅಲ್ಲೇ ಇರಲಿ. ಕಾಲಕ್ರಮೇಣ ಆಕೆಯನ್ನು ಇಲ್ಲಿಗೇ ಕರೆಯಿಸಿಕೊಂಡರಾಯಿತು. ರಾರ್ಜ.... ಇನ್ನೊಂದು ಮಾತು. ಆ ನರ್ಸ್ ನಳಿನಿಯೊಂದಿಗೆ ಮೊಹಬತ್-ಅದೂ-ಇದೂ-ಏನೂ ಇಟ್ಟುಕೊಂಡಿಲ್ಲವಲ್ಲವೇ?"

"ಇಲ್ಲ ಬೀಬೀ. ನಾನು ಆತರಹ ಮೂರ್ಖನಲ್ಲ. ನಿನ್ನ ಮೇಲಿನ ಅಭಿಮಾನದಿಂದ ನನ್ನ ಹೆಂಡತಿಯಲ್ಲೂ ಅಷ್ಟೊಂದು ಆಸೆಯಿಟ್ಟಿಲ್ಲ. ಆಕೆ ಯೊಂದಿಗೆ ಸಂಪರ್ಕವೂ ಇಲ್ಲದವನಂತೆ ಇದ್ದೇನೆ. ಬೇಕಾದರೆ, ನಿನಗೆ ಸಂದೇಹವಿದ್ದರೆ ಶಾಂತಳನ್ನೇ ಕೇಳು ಬೀಬಿಜಾನ್. ನಾವಿಬ್ಬರೂ ಈಕ್ಷಣದ ಪ್ರಿಯ-ಪ್ರೇಯಸಿಯರಲ್ಲ. ನಮ್ಮ ಪ್ರೀತಿ ಬಹಳ ಹಿಂದಿನದು. ದೀರ್ಘಕಾಲದ ವರೆವಿಗೂ ಅಳಿಯದೆ ನಿಲ್ಲುವಂತಹುದು. ನಮ್ಮಿಬ್ಬ ರಹೃದಯಗಳೆರಡಾದರೂ ಜೀವ ಮಾತ್ರ ಒಂದೇ" ಎಂದನು ರಾರ್ಜ.

ಬೀಬೀಜಾನಳು ರಾಜರ್ ಆಡಿದಮಾತಿಗೆ ಸಿಕ್ಕಿ ಸೊರಗಿಹೋದಳು."ಆಜಾ ಪ್ಯಾರೇ" ಎನ್ನುತ್ತಾ ರಾಜರ್‌ನ್ನ ಹಾಗೆಯೇ ಬಿಗಿದಪ್ಪಿಕೊಂಡಳು. ಎದುರು ಗಿದ್ದ ಮಜೀದನು ನಾಚಿಕೊಂಡು ಒಳಗೆ ಹೊರಟನು.

"ಬೀಬೀ, ಶಾಂತ ಎಲ್ಲಿದ್ದಾಳೆ?"

"ಒಳಗಡೆ ಕೋಣೆಯಲ್ಲಿದ್ದಾಳೆ."

"ಅವಳೇನೂ ಗೋಳಾಡಲಿಲ್ಲವೇ?"

"ನಾನು ಆಕೆಗೆ ಸಮಾಧಾನದ ಮಾತುಗಳನ್ನು ಹೇಳಿಕೊಂಡಿದ್ದೇನೆ. ಅವಳೂ ಸುಮ್ಮನಿದ್ದಾಳೆ. ಇನ್ನೊಂದು ವಿಷಯ ರಾಜರ್. ನೀವು ಆಕೆ ಯಲ್ಲಿ!ಏಕೆ ಪಳಗದೆ ಇದ್ದೀರಿ. ನಾನು ಇದ್ದಮಾತ್ರಕ್ಕೆ ಅವಳೊಂದಿಗೆ ಸಂಪರ್ಕ ನಡೆಸಬಾರದೆಂಬ ಕಾನೂನೇನಾದರೂ ಇದೆಯೇ? ಇಂದು ನಾನು ಹೇಳಿದ್ದೇನೆ. ಇಂದಿನಿಂದ ಶಾಂತಳೊಂದಿಗೆ ನೀವು ಪ್ರೇಮಿಸಬೇಕು."

"ಆಗಲಿ ಬೀಬೀಜಾ಼ನ್. ನೀನು ಆಜ್ಞೆಮಾಡಿದ ನಂತರ ನನ್ನದೇನಿದೆ. ಹಾಗೆಯೇ ನಿನ್ನಿಷ್ಟದಂತೆಯೇ ನಡೆಯುತ್ತೇನೆ."

"ನರ್ಸ್ ನಳಿನಿಯನ್ನು ಸಫಾ ಮಾಡಿಬಿಡೋಣವೇ?"

"ಬೇಡ ಬೀಬೀಜಾನ್. ಆಕೆ ಏನನ್ನೂ ಅರಿಯದವಳು. ಆಕೆ ಯಾರೊಂದಿಗೂ ರಹಸ್ಯವನ್ನು ಪರಸ್ಯಮಾಡುವುದಿಲ್ಲವೆಂದು ಹೇಳಿದ್ದಾಳೆ. ಹಾಗೆ ಒಂದು ವೇಳೆ ವಿಷಯ ಹೇಳಲು ಪ್ರಯತ್ನಿಸಿದಳೆಂದರೆ ಖಂಡಿತ ಮೃತ್ಯು ದೇವತೆಯ ಬಾಯಿಗೆ ತುತ್ತಾಗುತ್ತಾಳೆ." ಎಂದನು ರಾಜರ್.

"ಷಣ್ಮುಗಂನನ್ನು ಏನು ಮಾಡುತ್ತೀರಿ?"

"ಗುಂಪು ಕಳ್ಳರನ್ನು ಕಳುಹಿಸಿ ಆತನನ್ನು ಬಿಡುಗಡೆ ಮಾಡಿಸಿಕೊಂಡು ಬರಲು ಏರ್ಪಾಡು ಮಾಡುತ್ತೇನೆ."

"ರಾತ್ರಿ ಎರಡು ಗಂಟೆಯ ಒಳಗಾಗಿ ನಮ್ಮ ಅಣ್ಣ ರಜಾಕ್ ಇಲ್ಲಿಗೆ ಬಂದು ಸೇರುತ್ತೇನೆ ಎಂದು ಹೇಳಿ ಹೋಗಿದ್ದಾನೆ. ಈಗ ಹತ್ತೂವರೆ ಯಾಗುತ್ತಾ ಬಂದಿದೆ. ನೀವು ನನ್ನಲ್ಲಿರುತ್ತೀರೋ ಅಥವಾ ಶಾಂತ...."

"ನಿನ್ನಲ್ಲಿಯೇ ಇರುತ್ತೇನೆ ಬೀಬೀ. ಶಾಂತಾಗೆ ನಾಳೆಯಿಂದ........ ಗೊತ್ತಾಯಿತೆ? ಒಂದು ವಿಷಯ ನಿನ್ನನ್ನು ಕೇಳಬೇಕೆಂದಿದ್ದೇನೆ. ನಿನಗೆ ಕೋಪ ಬಂದರೂ ಬರಬಹುದು. ಕೇಳಲೇ?"

"ಓಹೋ ಕೇಳಿ ಅದಕ್ಕೇನಂತೆ."

"ರೇಸ್ ಕೋರ್ಸಿನ ಪಕ್ಕದ ರೋಡಿನಲ್ಲಿ ಯಾರಿಗೋ ಕೊಲೆಮಾಡಿ ಹಾಕಿರುವಂತೆಯೂ, ಕೊಲೆಮಾಡಿದವಳು ಬೀಬಿಜಾನ್ ಎಂಬುದಾಗಿ ನಿನ್ನ ಹೆಸರು ಆ ಕೊಲೆಯ ವಿಷಯದಲ್ಲಿ ಅಡ್ಡಬೀಳುತ್ತಿದೆ. ಕಾರಣವೇನೆಂಬುದು ನನಗೆ ಸರಿಯಾಗಿ ತಿಳಿಯದಾಗಿದೆ. ಅದರ ವಿಷಯವೇನು ಬೀಬೀ ?"

"ಅರೆ ಬಿಡಿ ಆ ಖಾಲಿ ಮಾತನ್ನು. ಯಾವನೋ ಕಾರೈಕುಡಿ ಚೆಟ್ಟಿಯಾರ್ ಬೆಂಗಳೂರಿಗೆ ಬಂದಿದ್ದ. ಅಂದು ನಮ್ಮ ಗುಂಪಿಗೇ ಒಂದು ದರಿದ್ರ ಹಿಡಿದಿತ್ತು. ಕೈಲಿ ದುಡ್ಡಿಲ್ಲದೆ ನರಳುತ್ತಿದ್ದೆವು. ರೈಲ್ವೆ ಸ್ಟೇಷನ್ನಿನ ಬಳಿ ಯಾರಾದರು ಏಮಾರಿದವರು ಸಿಕ್ಕುತ್ತಾರೇನೋ ಎಂದು ಹೊಂಚು ಹಾಕಲು ಹೋಗಿದ್ದೆ. ಆ ಚೆಟ್ಟಿಯಾರ್ ಹರಾಮ್ ನನ್ನ ಮೇಲೆಯೇ ಕಣ್ಣು ಹಾಕಿದ. ಆಸೆ ತೋರಿಸಿ ಕರೆದುಕೊಂಡು ರೇಸ್‌ಕೋರ್ಸ್ ಕಡೆ ಹೋದೆ. ಕತ್ತಲ ಮರೆಯಲ್ಲಿ ನನ್ನನ್ನು ಹಾಕಿ ತಬ್ಬಿಕೊಂಡು ಮುತ್ತಿಡಲು ಪ್ರಯತ್ನಿಸಿದ. ನನ್ನ ಸೊಂಟದಲ್ಲಿದ್ದ ಚಾಕು ಅವನ ಹೊಟ್ಟೆಯಲ್ಲಿ ಪ್ರವೇಶಿಸಿತು. ಕೂಗಲು ಮೊದಲಾದ. ಬಟ್ಟೆಯನ್ನು ಉಂಡೆಮಾಡಿ ಬಾಯಿಯಲ್ಲಿಟ್ಟೆ. ಹೊರಳಾಡಿ ಕಣ್ಣುಮುಚ್ಚಿದ. ಒಂದೆರಡು ಮೂರು ಸಾವಿರ ರೂಪಾಯಿಗಳ ರೊಕ್ಕ, ಮಿಕ್ಕ ಟ್ರಂಕು ಬೆಡ್ಡು ಎಲ್ಲವೂ ಸೇರಿ ಹತ್ತು ಸಾವಿರದ ಸಮೀಪಕ್ಕೆ ಬಂದಿತು ಲೆಖ್ಖ. ಪೋಲೀಸರೂ ಪತ್ತೇದಾರರೂ ಅಬ್ಬಬ್ಬಾ !........... ನನ್ನ ಮೇಲೆ ದಬ್ಬಾಳಿಕೆ ನಡೆಸಲು ಹೊಂಚುಹಾಕಿಕೊಂಡು ಬಂದರು. ಅಷ್ಟರಲ್ಲಿ ನಾನು ರಹಸ್ಯಮಂದಿರವನ್ನು ಬಲು ಬೇಗನೆ ಬಂದು ಸೇರಿದೆ."

"ಬೀಬೀ ನೀನು ಕೊಲೆಮಾಡುವ ಕೆಟ್ಟ ಕೆಲಸವನ್ನು ಬಿಟ್ಟುಬಿಡು."

"ಹಾಗಾದರೆ ನೀವೂ ಸಹಾ ಕೊಲೆಮಾಡುವುದನ್ನು ಬಿಟ್ಟುಬಿಡಿ."

"ನಾನು ಕೊಲೆ ಮಾಡಿದ್ದೇನೆಯೇ ?"

"ಮಾಡಲಿಲ್ಲವೇ ಮತ್ತೆ. ತಂದೆಯನ್ನು ತೀರಿಸಿಬಿಟ್ಟದ್ದೀರಿ."

"ಹೋಗಲಿ, ನೀನು ಮಾತ್ರ ಇನ್ನು ಮುಂದೆ ಕೊಲೆ ಮಾಡಲು ಹೋಗಬೇಡ."

"ಆಗಲಿ ಅದಕ್ಕೇನು. ನನಗೆ ಬೇಕಾದಾಗ ಧನ ಸಿಕ್ಕಿತೆಂದರೆ ಸಾಕು. ಕೊಲೆಯನ್ನು ಮಾಡುವುದೇ ಇಲ್ಲ" ಎಂದಳು.

ಒಂದು ಪ್ಲೇಟಿನಲ್ಲಿ ಕೋಳಿ ಪಲಾವ್, ಈರುಳ್ಳಿ ಚಟ್ನಿಯನ್ನು ತಂದು ಟೇಬಲ್ಲಿನ ಮೇಲಿಟ್ಟನು ಮಜೀದ್.

ರಾಜ್ಜ್ ಬಹಳ ಸಂತೋಷದಿಂದ ಪ್ಲೇಟನ್ನು ಹತ್ತಿರಕ್ಕೆಳೆದುಕೊಂಡನು.

"ಪಲಾವ್ ತಿಂದು ಬಹಳ ದಿನವಾಯಿತು ಬೀಬೀ" ಎಂದನು ರಾಜ್ಜ್.

"ಹೌದು, ನೀವು ಈ ಕಡೆ ಬಾರದೆ ಇದ್ದರೆ ಅದು ನಮ್ಮ ತಪ್ಪೇನು ?"

"ನನ್ನದೇ ತಪ್ಪೆಂದುಕೋ"

"ರೇ, ಮಜೀದ್. ಏಕ್ ಕಪ್ ಚಾ ಲಾರೇ" ಎಂದಳು ಬೀಬೀಜಾ.

ಒಂದು ಚಾಪ್ಸ್, ಎರಡು ರೊಟ್ಟಿ, ಎರಡು ಖೈಮಾ, ಎಲ್ಲ ವನ್ನೂ ತಂದು ಇಟ್ಟನು.

ರಾಜ್ಜನ ಆನಂದಕ್ಕೆ ಪಾರವೇ ಇಲ್ಲ. ಎಲುಬುಗಳನ್ನೂ ಪುಡಿಪುಡಿ ಮಾಡಿದನು. ಅಂದು ಆತನ ನಾಲಗೆಗೆ ಆ ಮಾಂಸಾಹಾರವು ಸ್ವಲ್ಪ ಮಟ್ಟಿಗೆ ಹರ್ಷಗೊಳಿಸಿತು.

ಗಂಟೆ ರಾತ್ರಿ ಹನ್ನೊಂದೂವರೆಯಾಯಿತು. ಅದುವರೆಗೂ ರಾಜ್ಜ್ ಶಾಂತಳನ್ನು ನೋಡಿರಲಿಲ್ಲ. ಇದ್ದಕ್ಕಿದ್ದಂತೆ ರಜಾಕನ ಸೇವಕರಲ್ಲೊಬ್ಬನು ಓಡಿಬಂದು,

"ಬೀಬೀಮಾ, ಬ್ಯಾಂಕ್ ಕೊಳ್ಳೆಹೊಡೆಯಲು ಹೋದ ಜಾಗದಲ್ಲಿ ಬ್ಯಾಂಕಿಗೆ ಕಾವಲಾಗಿದ್ದ ಘೂರ್ಕಾ ಜವಾನರಿಗೆ ಎಚ್ಚರವಾಗಿ ರಜಾಕ್ ಸಾಹೇಬರು ಸಿಕ್ಕಿಬಿದ್ದಹಾಗೆ ಕಾಣುತ್ತೆ. ರಜಾಕ್‌ಸಾಹೇಬರು ಬ್ಯಾಂಕ್ ಬಳಿ ಹೋದವರು ಇನ್ನೂ ಕಣ್ಣಿಗೆ ಕಾಣಿಸಲಿಲ್ಲ. ಗುಂಪಾಗಿ ಹೋದ ಪ್ರತಿ ಯೊಬ್ಬರೂ ದಿಕ್ಕಾಪಾಲಾಗಿ ಚೆದುರಿ ಹೋಗಿದ್ದಾರೆ. ವಿಷಯವೇನೆಂಬುದು ಇನ್ನೂ ನನಗೆ ವ್ಯಕ್ತವಾಗಲ್ಲ. ಏನಾದರೂ ಸರಿ, ದಯವಿಟ್ಟು ಈಗ ನೀವು ಬೇಗನೇ ಬನ್ನಿ. ಯಾವುದಾದರೂ ಉಪಕಾರವಾಗುವ ಯೋಚನೆ ಮಾಡ ಬಹುದು" ಎಂದನು. ಅವನು ಮಾತನಾಡುವುದನ್ನು ನೋಡಿದರೆ ಅವನು ಬಹಳ ದೂರದಿಂದ ಪೋಲೀಸರ ಕೈಗೆ ಸಿಕ್ಕದೆ ಓಡಿಬಂದಿದ್ದಾನೆಂದು ತಿಳಿದು ಕೊಳ್ಳಬಹುದಾಗಿತ್ತು. ಆತನು ಉಬ್ಬಸ ಬಿಡುತ್ತಿದ್ದನು. ಬೀಬೀಜಾ ಚಕಿತಳಾದಳು. ಆಕೆಗೆ ಬಂದು ಹೇಳಿದ ಸೇವಕ ಅಬ್ದುಲ್ಲಾವಿನ ಮಾತು ಗಳಿಂದ ಅಷ್ಟು ನಂಬಿಕೆಯುಂಟಾಗಲಿಲ್ಲ.

ರಜಾಕನು ಮಹಾ ರಾಜಾಧಿರಾಜರ ಮನೆಗಳಲ್ಲಿ ಕನ್ನ ಹಾಕಿ ಕಣ್ಣಿಗೆ ಮಣ್ಣೆರಚಿ ಬಂದಿರುವ ಹೆಸರಾಂತ ರೌಡಿ. ಅವನು ಕೇವಲ ಒಂದು ಚಿಕ್ಕ ಬ್ಯಾಂಕ್ ಕೊಳ್ಳೆಹೊಡೆಯಲು ಹೋಗಿ ಪೋಲೀಸರ ಕೈಗೋ ಅಥವಾ ಕಾವ

ಲಿರುವ ಘೂರ್ಖಾ ಜವಾನರ ಕೈಗೋ ಸಿಕ್ಕಿರಬೇಕೆಂದು ಹೇಳುವುದು ಬರೀ ಊಹೆ ಇರಬೇಕು; ನಿಜವಾಗಿಯೂ ಸಿಕ್ಕಿರಲಾರ. ಆದರೂ ನಾವು ಒಂದು ಬಾರಿ ಆ ಸ್ಥಳಕ್ಕೆ ಹೋಗಿಬರುವುದು ಲೇಸು ಎಂದುಕೊಂಡು,

"ರಾಜ್ಜ. ಅಣ್ಣ ರಜಾಕನಿಗೆ ಯಾವುದೋ ಅಪಾಯ ಸಂಭವಿಸಿದೆ ಎಂಬುದಾಗಿ ಅಬ್ದುಲ್ಲಾ ಬಂದು ಹೇಳಿದ್ದಾನೆ. ಅದು ಎಷ್ಟರಮಟ್ಟಿಗೆ ನಿಜವೋ ಸುಳ್ಳೋ ಎಂಬುದನ್ನು ಹೋಗಿ ನೋಡಿಕೊಂಡು ಬಂದುಬಿಡುತ್ತೇನೆ. ನೀವು ಇಲ್ಲಿಯೇ ಒಂದರ್ಧ ಗಂಟೆ ಕುಳಿತು ವಿರಾಮ ತೆಗೆದುಕೊಳ್ಳುತ್ತಿರಿ" ಎಂದು ಹೇಳಿ ಅಬ್ದುಲ್ಲಾವಿನೊಂದಿಗೆ ಹೊರಡಲನುವಾದಳು.

ಕಬ್ಬಿಣದ ಪೆಟ್ಟಿಗೆಯಲ್ಲಿದ್ದ ರಿವಾಲ್ವರೊಂದನ್ನು ತೆಗೆದು ಅದರಲ್ಲಿ ಬುಲೆಟ್‌ಗಳನ್ನು ತುಂಬಿ ಸಿದ್ಧಮಾಡಿ ಸೊಂಟದಲ್ಲಿ ಸಿಕ್ಕಿಸಿಕೊಂಡಳು.

ಸುರಂಗಮಾರ್ಗದ ಬಾಗಿಲನ್ನು ತೆಗೆದು ಹೊರಗೆ ಕಾಲಿಡುವಷ್ಟರಲ್ಲಿ ರಜಾಕ್ ಎದುರು ಬಂದ.

"ಬೀಬೀಜಾ, ಹನ್ನೊಂದು ಗಂಟೆಯಾಗಿದೆ. ಈ ಅರ್ಧರಾತ್ರಿಯಲ್ಲಿ ಎಲ್ಲಿಗೆ ಹೋಗುತ್ತಿರುವೆ?"

ಬೀಬೀಜಾನಳಿಗೆ ನಗು ಬಂದಿತು. ಅಬ್ದುಲ್ಲಾನ ಕಿವಿಯನ್ನು ಹಿಂಡಿದಳು.

"ಅಣ್ಣಾ, ನೀನು ಬ್ಯಾಂಕ್ ಕೊಳ್ಳೆಹೊಡೆಯಲು ಹೋದ ಸಮಯದಲ್ಲಿ ಯಾರ ಕೈಗೋ ಸಿಕ್ಕಿಬಿದ್ದಿ. ನಿನ್ನನ್ನು ಬಿಡಿಸಿಕೊಂಡು ಬರಲು ನನ್ನನ್ನು ಬಾ ಎಂದು ಈ ಅಬ್ದುಲ್ಲಾ ಪೀಡಿಸಿದ. ಅದಕ್ಕಾಗಿ ಹೊರಟುಬಂದೆ" ಎಂದಳು ಬೀಬೀಜಾ.

"ಈ ಅಬ್ದುಲ್ಲಾ ಮಾಡುವ ಕೆಲಸವೇ ಹೀಗೆ. ಅಲ್ವೋ, ನಾನು ಬೀಬೀಜಾನಳನ್ನು ಸಹಕರಿಸಲು ಕರೆದುಕೊಂಡು ಬಾ ಎಂದು ಹೇಳಿಕಳುಹಿಸಿದೆನೇನೋ" ಎಂದು ಬೆನ್ನಿನಮೇಲೆ ಮೆಲ್ಲನೆ ತಟ್ಟಿದನು. ಅಬ್ದುಲ್ಲಾ ಓಡಿದ.

"ಅಣ್ಣಾ ಮತ್ತೊಂದುವಿಷಯ, ರಾಜ್ಜ ಇಲ್ಲಿಗೆ ಬಂದಿದ್ದಾರೆ. ಈಗ ಒಂದು ಗಂಟೆಯಾಯಿತು ಅವರು ಇಲ್ಲಿಗೆ ಬಂದು. ನಿನ್ನನ್ನು ನೋಡಲು ಬಂದಿದ್ದಾರೆ ಅಣ್ಣ" ಎಂದಳು.

"ಬರಲಿ ಬೀಬೀ. ನಾವು ಅಂದುಕೊಂಡಿರುವ ರಹಸ್ಯ ಅವನಲ್ಲಿ ತಿಳಿಸಬೇಡ. ಮೆಲ್ಲಮೆಲ್ಲನೆ ನಾವು ಮಾಡುವ ಕೆಲಸವನ್ನು ಮಾಡುತ್ತಾ ಬರೋಣ."

"ಹೌದು ಶಾಂತಳನ್ನು ಕರೆದುಕೊಂಡು ಹೋದಿರಲ್ಲ. ಆಕೆಯನ್ನು ಏನುಮಾಡಿದಿರಿ?"

"ಮಾಡುವುದೇನಿದೆ! ನಾನೊಂದೆರೆಡುಬಾರಿ ಮೂಸಿನೋಡಿ, ಬಾಗ್ದಾದಿನಿಂದ ಬಂದಿದ್ದ ಪಠಾಣನಿಗೆ ಹತ್ತು ಸಾವಿರಕ್ಕೆ ಮಾರಿದ್ದೇನೆ."

"ಅಣ್ಣಾ, ಅಯ್ಯೋ, ಈಗ ರಾಜ್ ಆಕೆಯನ್ನು ನೋಡಬೇಕೆಂದು ಕಾತರಿಸಿಕೊಂಡಿದ್ದಾನೆ. ಹೋಗಿ ಹೋಗಿ ಈ ಕೆಲಸ ನೀನೇಕೆ ಮಾಡಿದಿ. ಅಣ್ಣಾ ಇದು ಶುದ್ಧ ತಪ್ಪು. ಆ ಪಠಾಣನ ಅಡ್ರಸನ್ನು ಕೊಡು. ನಾನೇ ಹೋಗಿ ಶಾಂತಳನ್ನು ಕರೆದುಕೊಂಡು ಬರುತ್ತೇನೆ" ಎಂದು ಗದುರಿಸಿದಳು.

"ಸುಮ್ಮನೆ ಹೇಳಿದರೆ ಆಗಲೇ ನೀನು ನನ್ನನ್ನು ಇರಿದುಬಿಡುವವಳಂತೆ ನೋಡುತ್ತೀಯಲ್ಲ ಬೀಬೀ. ನಿನಗೆ ತಿಳಿಸದೆಯೇ ಶಾಂತಳನ್ನು ಮಾರಲು ನನಗೆ ಹಕ್ಕಿದೆಯೇ. ಅದೂ ಅಲ್ಲದೆ ಆಕೆ ನಿನ್ನ ಸವತಿ....ನಿನ್ನನ್ನು ಮಾರಿದರೂ ಆಕೆಯನ್ನು ಮಾರಿದರೂ ಒಂದೇ ಅಲ್ಲವೆ ?"

"ಮತ್ತೇಕೆ ಸುಮ್ಮನೆ ನನ್ನನ್ನು ಚುಚ್ಚುಮಾತುಗಳನ್ನಾಡಿ ಗೋಳಾಡಿಸುತ್ತೀ ?"

"ನಿನ್ನ ಮನಸ್ಸು ಹೇಗಿದೆಯೆಂಬುದನ್ನು ಪರಿಶೋಧಿಸಲು ಹಾಗೆಮಾಡಿದೆ. ನನಗೆ ನೀವಿಬ್ಬರೂ ತಂಗಿಯರೇ. ಆದರೆ ಬೇರೆಯವರ್ಯಾರಾದರೂ ಹೀಗೆ ನನ್ನ ಬಳಿ ಹೆಂಡತಿಯನ್ನು ತಂದು ಬಿಟ್ಟಿದ್ದರೆ ಅಂತಹವಳನ್ನು ಹಿಂದೆ ಹೇಳಿದಂತೆ ಮಾಡುತ್ತಿದ್ದೆ, ಅಷ್ಟೆ."

"ಹೋಗಲಿ ನಡಿ ಅಣ್ಣಾ, ರಾಜ್‌ನನ್ನ ನೋಡೋಣ."

"ಈಗ ಸುಸ್ತಾಗಿದ್ದೇನೆ. ಬೆಳಗೆದ್ದು ಮಾತನಾಡಿಕೊಳ್ಳೋಣವಂತೆ. ನೀನು ರಾಜ್‌ನನ್ನು ಉಪಚರಿಸುತ್ತಿರು. ಅವನು ಇಲ್ಲಿಗೆ ಬಂದು ಬಹಳ ದಿನಗಳಾಯಿತು. ಎಲ್ಲಿ ಈ ಸೇವಕರು ? ಒಬ್ಬರೂ ಕಣ್ಣಿಗೆ ಕಾಣಿಸುತ್ತಿಲ್ಲವಲ್ಲಾ. ಇನ್ನೂ ಇಲ್ಲಿಗೆ ಯಾರೂ ಬಂದಿಲ್ಲವೇ ?"

"ಯಾರೂ ಬಂದಿಲ್ಲವಣ್ಣಾ ಮೊದಲು ಅಬ್ದುಲ್ಲಾ, ಎರಡನೆಯವರು ನೀನೇ. ಮತ್ಯಾರೂ ಇಲ್ಲಿಗೆ ಹೆಜ್ಜೆಯಿಟ್ಟಿಲ್ಲ." ಎನ್ನುತ್ತಿದ್ದಳು ಬೀಬೀಜಾನ್.

ನಾಲ್ಕೈದು ಜನರು ಒಬ್ಬ ವ್ಯಕ್ತಿಯನ್ನು ಕಪ್ಪುಬಟ್ಟೆಯಿಂದ ಪ್ಯಾಕ್ ಮಾಡಿ ಕರೆದುಕೊಂಡು ಬರುತ್ತಿರುವಂತೆ ಕಾಣಿಸಿತು. ಆ ಮೂಟೆ ಕಟ್ಟಿದ ವ್ಯಕ್ತಿಯನ್ನು ನೆಲದಮೇಲೆ ಧೊಪ್ಪನೆ ಹಾಕಿದರು.

ಊಂಗುಟ್ಟಿಕೊಂಡುನರಳುವ ಶಬ್ದ ಕೇಳಿಸಿತು.

"ರಹಸ್ಯ ಮಂದಿರದಲ್ಲಿ ಸ್ವಲ್ಪ ಬೆಳಕಿತ್ತು. ಮತ್ತೊಂದು ಮೇಣದ ಬತ್ತಿಯನ್ನು ತಂದಿಟ್ಟು ಹೊತ್ತಿಸಿದಳುಬೀಬೀಜರ್ಾ.ಕೆಳಗೆ ಬಿದ್ದ ವ್ಯಕ್ತಿಯ ಕೂಗನ್ನು ಕೇಳಿ ರಾಜ್ ಓಡಿಬಂದುನಿಂತ. ರಾಜ್‌ನನ್ನು ಬೀಬೀಜರ್ಾ ಎಳೆದುಕೊಂಡು ಹೋದಳು.

"ಬಾಳಿ ಬದುಕಲಿರುವ ನೀವು ಇಂತಹ ಘೋರ ದೃಶ್ಯಗಳನ್ನು ನೋಡ ಬಾರದು ರಾಜ್" ಎಂದಳು ಬೀಬೀಜರ್ಾ.

"ಬೀಬೀ. ಆ ಧ್ವನಿಯನ್ನು ನಾನು ಎಲ್ಲೋ ಕೇಳಿದಂತಿದೆ. ನೋಡಿ ದರೆ ಏನಾಗಿಬಿಡುತ್ತೆ ?"

"ಅದೆಲ್ಲಾ ನೋಡಬಾರದು. ನನ್ನ ಜೀವದ ಆಧಾರಕ್ಕೆ ನಾನು ಇಂತಹ ಅಘೋರಗಳನ್ನು ತೋರಿಸಲಾರೆ" ಎಂದುಬಿಟ್ಟಳು.

ಮಂಚದ ಮೇಲೆ ಕರೆದುಕೊಂಡು ಹೋಗಿ ಮಲಗಿಸಿದಳು. ಕೆನ್ನೆಯ ಮೇಲೆ ತುಟಿಯನ್ನಿಟ್ಟು ಮುದ್ದಿಸಿ,

"ನನ್ನ ರಾಜ್. ಜೋಕೆಯಿಂದ ಮಲಗಿರು. ಎದ್ದು ಬರಬಾರದು. ಹುಷಾರ್ !" ಎಂದು ಆಜ್ಞೆ ಮಾಡಿ ಬಂದಳು ಬೀಬೀಜರ್ಾ.

ಕೆಳಗೆ ಬಿದ್ದಿದ್ದ ವ್ಯಕ್ತಿಯ ಮೇಲೆ ಮುಚ್ಚಿದ್ದ ಕಪ್ಪು ಬಟ್ಟೆಯನ್ನು ನೆಲ್ಲನೆ ಬಿಚ್ಚಿದರು. ಬಾಯಿಯಲ್ಲಿದ್ದ ಬಟ್ಟೆಯನ್ನು ತೆಗೆದರು.

ರಜಾಕ್ ಆ ವ್ಯಕ್ತಿಯನ್ನು ನೋಡಿ ಬೆಚ್ಚಿಬಿದ್ದ. "ಹ್ಞಾಂ. ಪೋಲೀಸ್ ಇನ್‌ಸ್ಪೆಕ್ಟರ್ ಬಜ್ಜಯ್ಯ" ಎಂದ.

"ಹೌದು, ಬಜ್ಜಯ್ಯನವರೇ ಮಾಲೀಕ್. ಇವರು ಪೋಲೀಸ್ ಪಡೆ ಯೊಂದಿಗೆ ನಮ್ಮನ್ನು ಸೆರೆಹಿಡಿಯಲು ಪ್ರಯತ್ನಪಟ್ಟು ಬಂದರು. ನಾವು ಇವರನ್ನೇ ಸೆರೆಹಿಡಿದು ತಂದೆವು" ಎಂದರು ನೆರೆದಿದ್ದ ಸೇವಕರು.

"ಇನ್‌ಸ್ಪೆಕ್ಟರೇ, ನೋಡಿ. ಈಗಲೂ ಹೇಳುತ್ತೇನೆ. ನೀವು ನನ್ನ ಕಡೆ ಸೇರುತ್ತೇನೆ ಎಂಬುದಾಗಿ ಒಂದು ಮಾತನ್ನು ತಿಳಿಸಿಬಿಡಿ. ಅದೂ ಅಲ್ಲದೆ ನನ್ನ ತಂಟೆಗೆ ಬರುವುದಿಲ್ಲ ಎಂದು ಒಮ್ಮೆ ಹೇಳಿಬಿಡಿ ಇನ್‌ಸ್ಪೆಕ್ಟರೇ. ನಿಮ್ಮನ್ನು ನನ್ನ ಜೀವ ಕಂಡಹಾಗೆ ಕಾಣುತ್ತೇನೆ" ಎಂದನು ರಜಾಕ್.

ಇನ್‌ಸ್ಪೆಕ್ಟರ್ ಬಜ್ಜಯ್ಯನವರಿಗೆ ಮಾತನಾಡುವುದಕ್ಕೂ ಆಗುತ್ತಿರಲಿಲ್ಲ. ಆ ಗುಂಪುಕಳ್ಳರು ಹೊಡೆದುಬಡೆದು ಮೇಲಿಂದ ನೆಲಕ್ಕೆ ಕುಕ್ಕಿದುದರಿಂದಲೋ

ಏನೋ ಮೈಯೆಲ್ಲವೂ ಒಂದೇ ನೋವು. ತಲೆಗೆ ಪೆಟ್ಟಾಗಿತ್ತು. ಬಾಯಿ ಒಣಗಿಹೋಗಿತ್ತು.

ನಿಂತಿದ್ದ ಸೇವಕರಲ್ಲೊಬ್ಬ ಒಂದು ಗ್ಲಾಸಿನಲ್ಲಿ ಸ್ವಲ್ಪ ನೀರನ್ನು ತಂದು ಕುಡಿಸಿದ. ಬಜ್ಜಯ್ಯನವರಿಗೆ ಸ್ವಲ್ಪ ಸ್ಮೃತಿ ಬಂತು. ಎದುರಿಗೆ ನೋಡಿದರೆ ರೌಡಿ ರಜಾಕ್ ನಿಂತಿರುವುದು ಕಾಣಿಸಿತು. ಎದ್ದು ರಜಾಕ್‌ನ ಮೇಲೆ ಬಿದ್ದು ಹೊಡೆಯಲು ಮುಂದಾದರು ಬಜ್ಜಯ್ಯ. ಪಕ್ಕದಲ್ಲಿದ್ದ ಕಳ್ಳರು ಬಜ್ಜಯ್ಯನವರನ್ನು ಹಿಡಿದೆಳೆದು ನಿಲ್ಲಿಸಿದರು.

ರಜಾಕ್ ಬಜ್ಜಯ್ಯನವರನ್ನು ನೋಡಿ, "ಇನ್ಸ್ಪೆಕ್ಟರೇ, ಹಿಂದೆ ನೀವು ನನಗೊಂದು ಉಪಕಾರ ಮಾಡಿದ್ದಿರಿ. ಅದಕ್ಕಾಗಿ ನಿಮ್ಮನ್ನು ಈಗ ಸುಮ್ಮನೆ ಬಿಟ್ಟಿದ್ದೇನೆ. ಇಲ್ಲವಾಗಿದ್ದರೆ ನಿಮ್ಮ ತಲೆಯು ನಿಮ್ಮ ದೇಹವನ್ನಗಲಿ ಅದೆಷ್ಟೋ ನಿಮಿಷಗಳಾಗುತ್ತಿತ್ತು" ಎಂದು ಹೇಳಿದನು.

ಬಜ್ಜಯ್ಯನವರನ್ನು ಒಂದು ಗುಹೆಯ ಮಧ್ಯೆ ಗೋಣೀಚೀಲ ಕೊಟ್ಟು ಮಲಗುವಂತೆ ಹೇಳಿದರು.

ಇದೆಲ್ಲವನ್ನೂ ಬೀಬೀಜಾನ್ ಮರೆಯಿಂದಲೇ ನೋಡಿಕೊಂಡು ಪುನಃ ರಾಜನ್ ಮಲಗಿದ್ದ ಮಂಚದಮೇಲೆ ತಾನೂ ಆತನ ಪಕ್ಕದಲ್ಲಿಯೇ ಮಲಗಿ ಬಿಟ್ಟಳು.

ರಜಾಕನು ಸೇವಕ ಕಳ್ಳರನ್ನು ಕರೆದು, "ಒಟ್ಟು ಎಷ್ಟು ಸಿಕ್ಕಿದೆಯೋ" ಎಂದ.

"ಹನ್ನೆರಡು ಸಾವಿರವಿರಬೇಕು" ಎಂದರು.

ಸರಿಯಾಗಿ ಲೆಖ್ಖಮಾಡಿ ಹೇಳೋ ಸೈತಾನ್. ದೊಡ್ಡ ಲಕ್ಷಾಧೀಶ್ವರನ ಮಗ. ಲೆಖ್ಖ ಕೇಳಿದರೆ ಹನ್ನೆರಡು ಸಾವಿರವಿರಬೇಕು ಎಂದು ಹೇಳುತ್ತಾನೆ. ಸರಿಯಾಗಿ ಸಿಕ್ಕಿದ್ದನ್ನು ಹೇಳು."

"ಅಷ್ಟೇ ಮಾಲೀಕ್. ಸರಿಯಾಗಿ ಹನ್ನೆರಡು ಸಾವಿರವೇ !" ಎಂದು ಹಣದ ಗಂಟನ್ನು ರಜಾಕನ ಕೈಲಿ ಕೊಟ್ಟರು ಮಿಕ್ಕ ಕಳ್ಳರು.

ದುಡ್ಡನ್ನು ಕಬ್ಬಿಣದ ಪೆಟ್ಟಿಗೆಯಲ್ಲಿ ಮುಚ್ಚಿಟ್ಟು, ಮಿಕ್ಕ ಕಳ್ಳರೆಲ್ಲರಿಗೂ ಹೋಗಿ ಮಲಗುವಂತೆ ಹೇಳಿ, ರಜಾಕ್ ತಾನೂ ಆ ಕೋಣೆಯ ಬಾಗಿಲನ್ನು ಮುಚ್ಚಿ ಮಂಚದ ಮೇಲೆ ಬಿದ್ದನು.

ರಜಾಕನಿಗೆ ನಿದ್ದೆ ಹತ್ತಲಿಲ್ಲ. ಇನ್ಸ್ಪೆಕ್ಟರ್ ಬಜ್ಜಯ್ಯನನ್ನು ಮುಖ

ಮುಚ್ಚಿ ತಂದಿದ್ದರೂ ಆತನೇನು ಸಾಮಾನ್ಯನಲ್ಲ. ಆತನು ನಮ್ಮ ರಹಸ್ಯ ಮಂದಿರದ ದಾರಿಯನ್ನು ಅಲ್ಪ ಸ್ವಲ್ಪ ಅರಿತೇ ಇರುತ್ತಾನೆ. ಅವನು ಹೇಗಾದರೂ ಮಾಡಿ ಇಲ್ಲಿಂದ ತಪ್ಪಿಸಿಕೊಂಡು ಹೋಗಲು ಪ್ರಯತ್ನಪಡಬಹುದು. ನನ್ನ ಮೇಲೆ ಈಗ ಎರಡು ಮೂರು ಕೇಸುಗಳು ಹೊಂಚುಹಾಕುತ್ತಿವೆ. ನಿಜದಲ್ಲೂ ಇನ್ನು ಮುಂದೆ ಈ ಊರು ನನಗೆ ಲಾಯಕ್ಕಲ್ಲ. ರಾಜ್‌ನನ್ನೂ ನಮ್ಮೊಂದಿಗೆ ಕರೆದುಕೊಂಡು ಹೋಗುವುದೇ ಲೇಸು. ರಾಜ್‌ನಿಲ್ಲದೆ ಬೀಬೀಜಾನ್ ಬದುಕಲಾರಳು. ಶಾಂತಳನ್ನೂ ಮತ್ತು ನಮ್ಮ ಪರಿವಾರವೆಲ್ಲವನ್ನೂ ಕರೆದುಕೊಂಡು ಎಲ್ಲಿಗಾದರೂ ಗುರುತುಸಿಕ್ಕದ ಕಡೆ ಹೊರಟುಬಿಡಬೇಕು. ಮಲೆನಾಡಿನ ಬೆಟ್ಟಗಳ ಮಧ್ಯೆ ಯಾವುದಾದರೂ ಒಳ್ಳೆಯ ಜಾಗವನ್ನು ಗೊತ್ತುಮಾಡಿಕೊಂಡು ಅಲ್ಲಿಯೇ ವಾಸಮಾಡುವುದು ಒಳ್ಳೆಯದು. ಈಗ ಬಜ್ಜಯ್ಯನನ್ನು ಬಿಟ್ಟರೆ ನನ್ನನ್ನು ನಿರ್ನಾಮ ಮಾಡುವವರೆಗೂ ಬಿಡಲಾರ. ಆತನನ್ನು ಕೊಂದುಹಾಕಲು ನನಗೆ ಇಷ್ಟವಿಲ್ಲ.

ಹೋಗಲಿ, ಬಜ್ಜಯ್ಯನನ್ನು ನಾವು ಹೋಗುವ ಕಡೆಗೆ ಕರೆದುಕೊಂಡು ಹೋಗುವುದೇ ಲೇಸು. ಇನ್ನು ಒಂದೆರಡು ವರ್ಷ, ಇರುವ ದುಡ್ಡಿನಲ್ಲೇ ಕಾಲ ಕಳೆದುಬಿಡಬೇಕು. ದುಡ್ಡು ಸಾಲದೇ ಹೋಗುವ ಪಕ್ಷದಲ್ಲಿ ಬೀಬೀಜಾನ್ ಮತ್ತು ರಾಜ್ ಸಹಾಯಮಾಡುವುದರಲ್ಲಿ ಸಂದೇಹವಿಲ್ಲ. ಒಂದು ವೇಳೆ ನಾವು ಹೋಗುವ ದಾರಿಯಲ್ಲಿ ಯಾರಾದರೂ ನಮ್ಮನ್ನು ಗುರ್ತಿಸಿಕೊಂಡರೆ ? ಥಾಮಸ್ ನನ್ನ ಮೇಲೆ ಇಟ್ಟಿರುವ ದ್ವೇಷ ಅಷ್ಟಿಷ್ಟಲ್ಲ. ಅಂದು ಥಾಮಸ್ ನನ್ನನ್ನು ನಿಜವಾಗಿಯೂ ತೀರಿಸಿಬಿಡುತ್ತಿದ್ದ. ಅದನ್ನು ತಡೆಗಟ್ಟಿದವನು ಜಬ್ಬಯ್ಯನೇ ! ಎಂದುಕೊಳ್ಳುತ್ತಿದ್ದನು. ಆತನ ಮನಸ್ಸು ಯಾವ್ಯಾವುದೋ ದೃಶ್ಯಗಳನ್ನು ಕಂಡು ಕಂಡು ಮರೆತುಬಿಡುತ್ತಿತ್ತು.

ರಾತ್ರಿ ಎರಡು ಗಂಟೆಯ ಸಮಯ. ಢಂ ಢಂ ಢಂ ಎಂದು ಗುಂಡು ಹಾರಿಸಿದ ಶಬ್ಧ ಕೇಳಿಸಿತು. ರಜಾಕ್‌ಗೆ ಆಗತಾನೆ ಸ್ವಲ್ಪ ನಿದ್ದೆ ಬಂದಿತ್ತು. ಗುಂಡು ಹಾರಿದ ಶಬ್ಧ ಕೇಳಿ ಥಟ್ಟನೆ ಎದ್ದು ನಿಂತು ಗುಂಡು ಹಾರಿ ಬಂದದ್ದು ಯಾವಕಡೆ ಎಂಬುದಾಗಿ ಯೋಚಿಸಿ ನೋಡಿದ. ಮೆಲ್ಲನೆ ಕೋಣೆಯ ಬಾಗಿಲನ್ನು ತೆಗೆದ.

ಇನ್ಸ್‌ಪೆಕ್ಟರ್ ಬಜ್ಜಯ್ಯ ಮಲಗಿರುವ ಸ್ಥಳವನ್ನು ನೋಡಿ ಬರೋಣ. ಅವನು ಇಲ್ಲಿಗೆ ಬಂದಾಗ ಅವನ ಜೇಬು ಶೋಧನೆ ಮಾಡಿರಲಿಲ್ಲ. ಒಂದು

ವೇಳೆ ಅವನೇ ಗುಂಡು ಹಾರಿಸಿ ನನ್ನ ಸೇವಕರನ್ನು ಕೊಂದು ಇಲ್ಲಿಂದ ಓಡಿ ಹೋಗಲು ಯತ್ನಿಸಿದ್ದರೂ ಯತ್ನಿಸಿರಬೇಕು ಎಂದು ಕೊಂಡು ಬಜ್ಜಯ್ಯ ಮಲಗಿದ್ದ ಕಡೆಗೆ ಹೋದನು ರಜಾಕ್.

ಬಜ್ಜಯ್ಯನವರು ಸುಖವಾಗಿ ನಿದ್ದೆಮಾಡುತ್ತಿದ್ದರು. ಅವರನ್ನು ಕಾವಲು ಕಾಯುತ್ತಿದ್ದ ಸೇವಕರು ಅವರ ಕೆಲಸವನ್ನು ಚಾಚೂ ತಪ್ಪದೆ ನೆರ ವೇರಿಸುತ್ತಿದ್ದರು.

ರಜಾಕನು ಮೆಲ್ಲನೆ ಸೇವಕರ ಬಳಿ ಹೋಗಿ,

"ಈಗ ಗುಂಡಿನ ಶಬ್ಧ ಕೇಳಿಬಂದಿತಲ್ಲ. ಅದು ಯಾವ ಕಡೆಯಿಂದ ಬಂದಿರಬೇಕು ಎಂಬುದನ್ನು ತಿಳಿದುಕೊಂಡಿರಾ ?"

"ಗುಂಡು ಹಾರಿದ ಶಬ್ಧ ಕೇಳಿಬಂದಿತು ಮಾಲೀಕ್. ಅದು ಯಾವ ಕಡೆಯಿಂದ ಬಂದಿತೆಂಬುದನ್ನು ಸರಿಯಾಗಿ ತಿಳಿದುಕೊಳ್ಳಲಾಗಲಿಲ್ಲ. ಆದರೂ ಗುಹೆಯಾಚೆ ಗುಂಡು ಹಾರಿಸಿರಬೇಕೆಂದು ನನ್ನ ಅಭಿಪ್ರಾಯ" ಎಂದನು ಅವರಲ್ಲೊಬ್ಬ.

"ಸರಿ, ಯಾವನಾದರೊಬ್ಬನು ನನ್ನೊಂದಿಗೆ ಬನ್ನಿ" ಎಂದು ಒಬ್ಬನನ್ನು ಜೊತೆಗೆ ಕರೆದುಕೊಂಡು ಹೊರಟನು.

ಬಾಗಿಲ ಬಳಿ ಹೋಗಿ, ಬಾಗಿಲ ರಂಧ್ರದಿಂದ ನೋಡಿದನು. ಬಾಗಿ ಲನ್ನು ತೆರೆದು ಒಂದು ಉದ್ದವಾದ ಕೋಲನ್ನು ತೆಗೆದುಕೊಂಡು, ಅದರಮೇಲೆ ಬಿಳಿ ರುಮಾಲನ್ನು ಸುತ್ತಿ, ಒಂದು ಬಿಳೀ ಬಟ್ಟೆಯನ್ನು ಹೊದಿಸಿ ಬಾಗಿಲ ಮರೆಯಿಂದ ಮತ್ತೊಂದು ಕೋಲನ್ನು ಅದಕ್ಕೆ ಲಗತ್ತಿಸಿ, ಮನುಷ್ಯ ನಡೆದು ಕೊಂಡು ಬರುವ ಹಾಗೆ ಅದನ್ನು ಬಾಗಿಲ ಹೊರಗಡೆ ಬಿಟ್ಟನು ರಜಾಕ್.

ಕತ್ತಲೆ ಕವಿದಿದ್ದುದರಿಂದ ಯಾರಾದರೂ ಆ ಕೋಲನ್ನೂ ಅದನ್ನು ಆವರಿಸಿರುವ ಬಿಳೀ ಬಟ್ಟೆ ರುಮಾಲನ್ನೂ ನೋಡಿದರೆ ನಿಜವಾಗಿಯೂ ಯಾರೋ ಘಾತಕನೆಂದು ತಿಳಿದುಕೊಳ್ಳಬೇಕು. ರಜಾಕ್ ಮತ್ತು ಮತ್ತೊ ಬ್ಬನು ಒಳಗಡೆಯೇ ಇದ್ದರು. ಬಾಗಿಲ ರಂದ್ರದಲ್ಲಿ ಕಣ್ಣಿಟ್ಟು ಯಾವ ಕಡೆ ಯಿಂದ ಯಾರು ಬರುತ್ತಾರೋ ಎಂಬುದನ್ನು ಗಮನಿಸುತ್ತಿದ್ದರು.

ದೂರದಲ್ಲಿ ಯಾರೋ ಬ್ಯಾಟರಿ ಹಾಕಿ ನೋಡಿಡಂತೆ ತೋಚಿತು. ಅದನ್ನು ಗಮನಿಸಿ ನೋಡುವಷ್ಟರಲ್ಲೇ ಎರಡು ಮೂರು ಬಾರಿ ಗುಂಡುಹಾರಿದ ಶಬ್ದ ಕೇಳಿಸಿತು. ಕೋಲು ಮುರಿದು ಕೆಳಗೆ ಬಿತ್ತು.

"ಬಜ್ಜಯ್ಯನವರನ್ನು ಹಿಡಿದುಕೊಂಡು ಬಂದಾಗ ಯಾರೋ ನಿಮ್ಮನ್ನು ಹಿಂಬಾಲಿಸಿರಬೇಕು. ಶುದ್ಧ ಸೈತಾನ್‌ಗಳು. ಸಮಯ ಸಂಧರ್ಭ ವರಿಯದೆ ಇನ್ಸ್‌ಪೆಕ್ಟರನ್ನೇ ಕರೆದುಕೊಂಡು ಬರಬೇಕೇ ? ಅಲ್ಲೇ ತೀರಿಸಿ ಬಿಟ್ಟು ಎಸೆದು ಬರುವುದು ಬಿಟ್ಟು ನನ್ನ ಬಳಿ ಕರೆದುಕೊಂಡು ಬಂದಿದ್ದೀರಲ್ಲ. ಇದೆಲ್ಲವೂ ನನ್ನ ಗ್ರಹಚಾರ" ಎಂದು ಪಕ್ಕದಲ್ಲಿದ್ದವನ ಬಳಿ ಹೇಳಿದನು ರಜಾಕ್.

ಗುಂಡು ಹಾರಿಬಂದ ನಾಲ್ಕೈದು ನಿಮಿಷಗಳಿಗೆಲ್ಲಾ ಮತ್ತೊಂದು ಗುಂಡು ಹಾರಿ ಬಂದಿತು.

ರಜಾಕನು ಬಾಗಿಲ ಮುಂದೆ ಬಂಡೆ ಬಿದ್ದಂತಿರುವ ಹಾಗೆ ಬಾಗಿಲ ಬಳಿ ಇರುವ ಒಂದು ಸ್ವಿಚ್ಚನ್ನು ಹಾಕಿದನು. ಆ ಬಾಗಿಲು ಯಾರ ಕಣ್ಣಿಗೂ ಕಾಣದೇ ಇರುವಂತಾಯಿತು. ದೂರದಿಂದ ಬಂದ ಯಾರಾದರೂ ಸರಿ, ನೋಡಿದರೆ ಅದೊಂದು ಕಲ್ಲುಬಂಡೆ ಎಂಬುದಾಗಿ ಊಹಿಸಬೇಕು. ಹಾಗಿತ್ತು ಅದರ ನೋಟ.

"ಈಗ ಸುಮ್ಮನೆ ಹಾಯಾಗಿ ಹೋಗಿ ಮಲಗೋಣ ಬಾ. ಬೆಳಗೆದ್ದು ಇವನ್ನೆಲ್ಲಾ ವಿಚಾರಿಸಿಕೊಂಡರಾಯಿತು" ಎಂದು ಜೊತೆಗೆ ಬಂದವನ ಬಳಿ ತಿಳಿಸಿದನು ರಜಾಕ್.

ರಜಾಕ್ ಹೋಗಿ ಮಲಗಿದ. ಆ ಜವಾನನೂ ಪುನಃ ಬಜ್ಜಯ್ಯ ನವರನ್ನು ಕಾವಲು ಕಾಯಲು ಹೋದ.

ಅದಾದ ನಂತರವೂ ಬಹಳ ಹೊತ್ತಿನವರೆಗೂ ಗುಂಡು ಹಾರಿಸಿದ ಶಬ್ದವು ಕೇಳಿಬರುತ್ತಲೇ ಇತ್ತು. ಆದರೆ ಅದಕ್ಕೆ ಯಾರೂ ಅಷ್ಟು ಗಮನ ಕೊಡುತ್ತಿರಲಿಲ್ಲ.

## ೧೦

ಮಾರನೆಯದಿನ ರಾತ್ರಿ ನಡೆದ ಸಂಗತಿಯೆಲ್ಲವನ್ನೂ ರಜಾಕನು ಬೀಬೀ ಜಾನ್ ಮತ್ತು ರಾಜನ್ ಬಳಿ ತಿಳಿಸಿದ. ರಾಜನ್ ಸಂಕಟಪಟ್ಟ.

"ರಜಾಕ್ ಸಾಹೇಬರೇ ಇನ್ಸ್‌ಪೆಕ್ಟರ್ ಬಜ್ಜಯ್ಯನವರನ್ನು ಇಲ್ಲಿಯವರೆಗೆ ಕರೆದುಕೊಂಡು ಬರಬಾರದಾಗಿತ್ತು."

"ಹೌದು ಸ್ವಾಮಿ. ನಾನೂ ನೆನ್ನೆ ರಾತ್ರಿ ಬಜ್ಜಯ್ಯನವರನ್ನು ಕರೆದು

ಕೊಂಡು ಬಂದ ಸೇವಕರನ್ನು ಚೆನ್ನಾಗಿ ಬೈದಿದ್ದೇನೆ. ನಡೆದದ್ದು ಯೋಚಿಸಿ ಪ್ರಯೋಜನವಿಲ್ಲ. ಮುಂದೆ ನಡೆಯಬೇಕಾದ್ದು ಯೋಚಿಸೋಣ" ಎಂದನು ರಜಾಕ್.

"ಬಜ್ಜಯ್ಯನವರನ್ನು ಏನೂ ಮಾಡಬಾರದು ರಜಾಕರೇ! ಅವರು ಯಾರಿಗೂ ಯಾವ ತೊಂದರೆಯನ್ನೂ ಕೊಡಲಿಲ್ಲ. ಅವರನ್ನು ಗಾದರೂ ಮಾಡಿ ನಿಮ್ಮ ಕೈಯಲ್ಲಿ ಹಾಕಿಕೊಂಡರೆ ಒಳ್ಳೆಯದು."

"ಹೌದು ರಾರ್ಜ. ನನ್ನನ್ನು ಕಣ್ಣಲ್ಲಿ ನೋಡಿದರಂತೂ ಆತನಿಗೆ ಆಗುವುದೇ ಇಲ್ಲ. ನನ್ನ ಮೇಲೆ ಅವನಿಗೆ ಅಷ್ಟು ದ್ವೇಷವಿದೆ. ಒಮ್ಮೆ ಅವನು ನನ್ನನ್ನು ದಸ್ತಗಿರಿಮಾಡಿದ್ದ. ಆಗ ನಮ್ಮ ಗುಂಪಿನವರು ತಂತ್ರ ಮಾಡಿ ನನ್ನನ್ನು ಕರೆದುಕೊಂಡುಬಂದರು. ಬಜ್ಜಯ್ಯನಿಗೂ ಆ ಪತ್ತೇದಾರ ಥಾಮಸ್‌ನಿಗೂ ಸರಿಯಾದ ಏಟು ಹೊಡೆದುಬಿಟ್ಟದ್ದರು. ಅಂದಿನಿಂದ ನನ್ನ ಮೇಲೆ ಅವರಿಬ್ಬರಿಗೆ ಒಂದು ಕಣ್ಣು."

"ಈ ವಿಷಯ ಬಹಳ ಬಿಕ್ಕಟ್ಟಾಗಿದೆ ರಜಾಕರೇ. ನೀವೇ ಇದ ಕ್ಕೊಂದು ದಾರಿ ಹುಡುಕಬೇಕು. ಅಲ್ಲ ರಜಾಕರೇ, ನನ್ನ ವಿಷಯಕ್ಕಾಗಿ ನಾನು ನಿಮ್ಮ ಬಳಿ ಮೊರೆ ಇಡಲು ಬಂದರೆ ನನಗಿಂತಲೂ ಹೆಚ್ಚು ತೊಂದರೆ ಯಲ್ಲಿ ನೀವು ಸಿಕ್ಕಿ ನರಳುತ್ತಿದ್ದೀರೆಂದು ಕಾಣುತ್ತೆ. ಈ ತೊಂದರೆಯಲ್ಲಿ ಶಾಂತಳನ್ನು ಬಚ್ಚಿಡುವುದಾದರೂ ಹೇಗೆ? ಇನ್ಸ್ಪೆಕ್ಟರ್ ಬಜ್ಜಯ್ಯನವರು ರಹಸ್ಯ ಮಂದಿರದಲ್ಲಿ ಬಂದು ಸೇರಿದ್ದಾಯಿತು. ಮುಂದೆ ಅವರ ತಲೆಯು ಹೇಗೆ ಹೇಗೆ ಓಡುತ್ತದೆಯೋ ಬಲ್ಲವರು ಯಾರು? ಹೋಗಲಿ, ಇನ್ನು ಮುಂದೆ ಯಾದರೂ ಶಾಂತಳ ಮೇಲಿನ ಆಪಾದನೆಯ ಕೇಸು ಫೈಸಲ್ ಆಗುವವರೆ ಗಾದರೂ ನೀವು ಎಲ್ಲಿಯೂ ಕೊಳ್ಳೆ ದರೋಡೆ ಹೊಡೆಯಲು ಹೋಗಬೇಡಿ. ನಿಮಗೆ ಖರ್ಚಿಗೆ ಬೇಕಾದರೆ ನಾನೇ ಕೊಡುತ್ತೇನೆ."

"ಅದಿರಲಿ ರಾರ್ಜ. ನೀವು ಬೇರೆ ನಾವು ಬೇರೆಯೇ? ಹೇಗಾದರೂ ನಾವು ನಾವುಗಳು ಸರಿಪಡಿಸಿಕೊಂಡರಾಯಿತು. ಶಾಂತಳನ್ನು ಮಾತನಾ ಡಿಸಿದಿರೇನು?"

"ಇನ್ನೂ ಇಲ್ಲ."

"ಕಾರಣ?"

"ಆಕೆ ಇಲ್ಲಿದ್ದರೆ ಅವಳ ತಾಯಿಯು ಮನೆಯಲ್ಲಿದ್ದಂತೆ.... !"

"ಸುಳ್ಳು ಹೇಳಬೇಡಿ ರಾರ್ಜ."

"ಸುಳ್ಳಲ್ಲ. ನಿಜವೇ ಹೇಳುತ್ತೇನೆ. ನಿಮ್ಮಂತಹ ಅಣ್ಣ ಆಕೆಗೆ ಸಿಕ್ಕಿದ ನಂತರ ಆಕೆಗೆ ಏನು ಭಯವಿದೆ ರಜಾಕರೇ ?"

"ಹೌದು. ಶಾಂತ, ಮತ್ತು ಬೀಬೀಜಾನ್ ಇಬ್ಬರೂ ನನ್ನ ಎರಡು ಕಣ್ಣುಗಳು."

"ಹಾಗಾದರೆ ನಾನು ಹೋಗಿಬರಲೇ ?"

"ಎಲ್ಲಿಗೆ ಹೋಗುತ್ತೀರಿ."

"ನಳಿನಿಯನ್ನು ನೋಡಿಕೊಂಡು ಬರುತ್ತೇನೆ."

"ಆಕೆಯಲ್ಲಿ ಯಾವ ಲೀಲೆಯನ್ನೂ ಇಟ್ಟುಕೊಂಡಿಲ್ಲವಷ್ಟೆ !"

"ರಜಾಕರೇ, ನಾನು ಅಂತಹ ಕ್ರೂರ ಕಾಮಪಿಶಾಚಿಯಲ್ಲ. ನನಗಿದ್ದಾರೆ ಗಿಣಿಯಂತಹ ಇಬ್ಬರು ಹೆಂಡತಿಯರು. ನಾನ್ಯಾತಕ್ಕೆ ಆ ಕೊಳೆತ ನಾರುತ್ತಿರುವ ಕಾಮುಕ ಕಾಗೆಯನ್ನು ಅಪೇಕ್ಷಿಸುತ್ತೇನೆ. ಆ ತರಹೆಯ ಕೆಟ್ಟ ದಾರಿಯಲ್ಲಿ ನಾನು ಹೆಜ್ಜೆ ಇಡುವವನಲ್ಲ."

"ಅದೇ ಕೇಳಿ ತಿಳಿದುಕೊಳ್ಳೋಣವೆಂದೆನಿಸಿತು ನನಗೆ. ಏಕೆಂದರೆ ಆಸ್ಪತ್ರೆಯ ನರ್ಸ್ ಎಂದು ಕೇಳಿದ ಮೇಲೆ ನನಗೆ ಆಕೆಯ ಮೇಲೆ ಸಂದೇಹ ಬಂದಿತು. ವಿಷ ಕುಡಿಸಿ ಕೊಲೆ ಮಾಡಲೂ ಅಂಜದವಳು ನಿಮ್ಮನ್ನು ಮರುಳುಗೊಳಿಸುವುದೆಂದರೆ ಅದರಲ್ಲಿ ಅತಿಶಯೋಕ್ತಿಯೊಂದೂ ಇಲ್ಲ"

ಬೀಬೀಜಾ಼ ಶಾಂತಳನ್ನು ಕರೆತಂದು ರಾರ್ಜಗೆ ತೋರಿಸಿದಳು. ರಾರ್ಜ ಮೇಲಿನ ಆಸೆಗಿಂತಲೂ ಶಾಂತಳಿಗೆ ಬೀಬೀಜಾ಼ ಮೇಲೆ ತುಂಬಾ ಪ್ರೀತಿಯಿತ್ತು. ಮಾಡುವುದೇನೋ ಕೊಲೆ ಕಸುಬಾದರೂ ಬೀಬಿಜಾ಼ ತನ್ನನ್ನು ನಂಬಿ ಬಂದವರಿಗಂತೂ ಪ್ರಾಣ ಕೊಡಲೂ ಸಿದ್ಧಳಾಗಿದ್ದಳು.

ಶಾಂತಳಿಗೆ ತನ್ನ ಮನೆಯಲ್ಲಿರುವುದಕ್ಕಿಂತಲೂ ಹೆಚ್ಚು ಸೌಕರ್ಯ ಬೀಬೀಜಾ಼ ಬಳಿ ಸಿಕ್ಕಿತು. ಬೀಬೀಜಾನಳನ್ನು ತನ್ನ ಸ್ವಂತ ಅಕ್ಕನೆಂದೇ ಪರಿಗಣಿಸಿಬಿಟ್ಟಿದ್ದಳು.

ಬೆಳಗಿನ ಟಿಫಿನ್ ಮುಗಿಯಿತು. ರಾರ್ಜ ತಾನು ನರ್ಸ್ ನಳಿನಿಯನ್ನು ನೋಡಿ ಬರುವುದಾಗಿ ಹೊರಟ. ರಜಾಕನು ಮಾರು ವೇಷ ಹಾಕಿಕೊಂಡು ಊರಿನ ಕಡೆ ಹೊರಟ. ಅವನನ್ನು ಹಿಂಬಾಲಿಸುತ್ತಾ ನಾಲ್ಕಾರು ರಜಾಕನ ಸೇವಕರು ಬರುತ್ತಿದ್ದರು.

ನಳಿನಿಯಿದ್ದ ಮನೆ ಬಳಿ ಹೋದ. ನಳಿನಿ ಆಗ ತಾನೆ ಆಸ್ಪತ್ರೆಗೆ ಹೋಗಿಬಿಟ್ಟಿದ್ದಳು. ಘಂಟೆ ಎಂಟೂವರೆ ಆಗಿತ್ತು. ನಳಿನಿ ಆಸ್ಪತ್ರೆಗೆ ಹೋಗಿ ಆಗಲೇ ಎರಡು ಘಂಟೆ ಮೇಲಾಗಿರಬೇಕು ಎಂದುಕೊಂಡ ರಾರ್ಜ. ನಳಿನಿಯನ್ನು ಆಸ್ಪತ್ರೆಯ ಬಳಿಯೇ ಸಂಧಿಸುವುದಾಗಿ ತೀರ್ಮಾನ ಮಾಡಿ ಕೊಂಡು ಹೊರಟ ರಾರ್ಜ.

ಆಸ್ಪತ್ರೆಯ ಬಾಗಿಲನ್ನು ದಾಟುವಷ್ಟರಲ್ಲಿ ಪತ್ತೇದಾರ ಥಾಮಸ್‌ರವರು ರಾರ್ಜನನ್ನು ನೋಡಿದರು.

"ರೀ, ಮಿಸ್ಟರ್ ರಾರ್ಜ. ಸ್ವಲ್ಪ ತಡೆಯಿರಿ" ಎಂದು ಕೂಗಿದರು ಥಾಮಸ್. ಪುನಃ "ಈತನನ್ನು ನಾನೇಕೆ ಕೂಗಿದೆನೊ ? ಕೂಗದೆ ಸುಮ್ಮನೆ ಇದ್ದುಬಿಟ್ಟಿದ್ದರೆ ಈತನ ನಡತೆಯನ್ನು ಗಮನಿಸಬಹುದಾಗಿತ್ತಲ್ಲಾ" ಎಂದು ಕೊಂಡರು.

ಥಾಮಸ್‌ರವರು ಕೂಗಿದ್ದನ್ನು ಕೇಳಿ ಹಿಂತಿರುಗಿ ನೋಡಿದ ರಾರ್ಜ "ಹಲೋ ಸರ್, ಥಾಮಸ್. ಏನು ಆಸ್ಪತ್ರೆಯ ಬಳಿ ಕಾದಿದ್ದೀರಿ? ಯಾರಾ ದರೂ ಫ್ರೆಂಡ್ಸ್‌ಗಾಗಿ ಎದುರುನೋಡುತ್ತಿರುವಂತಿದೆ. ನನಗೆ ರಾತ್ರಿಯಿಂದ ಎದೆಯಲ್ಲಿ ನೋವಾಗುತ್ತಿದೆ. ಅದಕ್ಕಾಗಿ ಡಾಕ್ಟರ ಬಳಿ ತೋರಿಸೋಣ ವೆಂದು ಹೋಗುತ್ತಿದ್ದೇನೆ. ಹಾಗೆಯೇ ಮನೆಗೆ ಹಿಂದಿರುಗುವಾಗ ನಿಮ್ಮನ್ನು ನೋಡಿಕೊಂಡು ಹೋಗೋಣವೆಂದುಕೊಂಡಿದ್ದೆ. ದೈವವಶಾತ್ ನೀವೇ ಎದುರಿಗೆ ಸಿಕ್ಕಿದಿರಿ....ಏನಾದರೂ ವಿಷಯ ತಿಳಿಯಿತೇ ಸಾರ್?"

"ಶಾಂತಳ ವಿಷಯವೇ ರಾರ್ಜ ?"

"ಹೌದು ಸಾರ್."

"ನಾನಾಕಡೆ ಪೋಲೀಸರೂ ಮತ್ತು ಸಿ. ಐ. ಡಿ. ಗಳೂ ಹುಡುಕಾಡು ತ್ತಲೇ ಇದ್ದಾರೆ."

"ನನ್ನ ಸಂಸಾರವನ್ನು ಬರ್‌ಬಾದ್ ಮಾಡಿಬಿಟ್ಟಳಲ್ಲ ಸಾರ್."

"ಹೆಂಗಸಿನ ಬುದ್ಧಿ ಅಲ್ಲವೇ!"

"ಹೆಂಗಸಾದರೇನು ? ಇಂತಹ ಮನೆಹಾಳುತನ ಮಾಡೋದು ಹೆಂಗಸರ ಕುಲಕ್ಕೇ ಒಂದು ಕಳಂಕ ಸಾರ್."

"ನೀವು ಭಯಪಡಬೇಡಿ ರಾರ್ಜ. ಖಂಡಿತ ಆಕೆಯನ್ನು ಪತ್ತೆ ಮಾಡದೆ ಬಿಡುವುದಿಲ್ಲ" ಎಂದು ಹೇಳಿ ಹೊರಟರು ಥಾಮಸ್,

"ಸಂಜೆ ನಿಮ್ಮನ್ನು ಖಂಡಿತ ಬಂದು ನೋಡುತ್ತೇನೆ ಸಾರ್" ಎಂದು ಹೇಳಿ ರಾಜ್ಞ ಆಸ್ಪತ್ರೆಯೊಳಕ್ಕೆ ಹೊರಟ.

ಫಸ್ಟ್ ವಾರ್ಡಿನ ಬಳಿ ಬಾಷಾ ಎದುರ್ಗೊಂಡ. "ನಳಿನಿ, ವಾರ್ಡ್ ಡಾಕ್ಟರಿಗೆ ಇಂಜಕ್ಷನ್ ಟ್ಯೂಬ್‌ಗಳನ್ನು ಸರಿಪಡಿಸಿಕೊಡುತ್ತಿದ್ದಾಳೆ" ಎಂದ.

"ಇನ್ನೂ ಎಷ್ಟು ಹೊತ್ತಾಗಬಹುದು ಬಾಷಾ ?" ಎಂದ ರಾಜ್ಞ.

"ಇನ್ನೂ ಒಂದು ಘಂಟೆ ಆಗಬಹುದು. ಮೂವತ್ತು ರೋಗಿಗಳಿಗೂ ಒಂದೊಂದು ಇಂಜಕ್ಷನ್ ಕೊಡಲೇಬೇಕು. ಕಾರಣವೇನು ?" ಎಂದ ಬಾಷಾ.

"ಏನೂ ಇಲ್ಲಪ್ಪ. ಸುಮ್ಮನೆ ನೋಡೋಣ ಅಂತ ಬಂದೆ."

"ಕಾರಣವಿಲ್ಲದೆ ಬರುತ್ತೀರೇನು ? ಏನಾದರೂ ರಹಸ್ಯವಿರಬಹುದು."

"ಅಂತಹ ರಹಸ್ಯವಿದ್ದರೆ ನಿನಗೆ ತಿಳಿಯದೇ ಇರುತ್ತದೆಯೇ ?"

"ಅದು ಸರಿ ಅನ್ನಿ."

"ಹೌದು ಬಾಷಾ. ನಳಿನಿ ನಿನ್ನನ್ನು ಲೌವ್ ಮ್ಯಾರೇಜ್ ಮಾಡಿಕೊಳ್ಳುವ ಅಭಿಪ್ರಾಯವಿದೆ ಎಂಬುದಾಗಿ ತಿಳಿಸಿದ್ದಳು. ಅದು ನಿಜವೇ ಸುಳ್ಳೇ ?"

"ಅರೆ ಬಿಡಿ ಸಾರ್, ಇವಳೇನು ಮಹಾ. ಲೇಡಿ ಡಾಕ್ಟರ್ ದೇವೀರಮ್ಮನೇ ನನ್ನನ್ನು ಲೌ ಮಾಡ್ತೀನಿ ಅಂತ ಹೇಳವ್ಳೆ. ಇವಳಿಗೇನು ಮಾಡಿಕೊಳ್ಳದೆ .... ?"

"ಹೋಗಲಿ. ದೇವೀರಮ್ಮನನ್ನೇ ಮಾಡಿಕೊಳ್ಳೋದು."

"ಅಯ್ಯೋ. ಅವಳಿಗೂ ಮಾಡಿಕೋಬಹುದು ಸಾರ್. ಸೈಜ್ ಸ್ವಲ್ಪ ಭಾರಿ."

"ನಳಿನಿ ಸೈಜಿನಲ್ಲಿ ಸರಿಯಾಗಿದ್ದಾಳೋ !"

"ಏನೋ ಸ್ವಲ್ಪ ಪರವಾಯಿಲ್ಲ."

"ಅಂತೂ ನಿನಗೆ ಆಕೆ ಮೇಲೆ ಇಷ್ಟವಿದೆ.... ?"

"ನನಗೇನು ಇಷ್ಟವಿಲ್ಲ ಸಾರ್. ಅವಳೇ ಬೇಡಿಕೊಳ್ಳುತ್ತಾಳೆ, ಅದೂ ಅಲ್ಲದೆ ಎದುರಿಗೆ ನಿಂತು ನನ್ನ ಬಳಿ ಹೇಳುವುದಕ್ಕೆ ನಾಚಿಕೆ ಬಿದ್ದು ಕಾಗದದ ಮೂಲಕ ತಿಳಿಸುತ್ತಾಳೆ ಸಾರ್."

"ನಿನ್ನ ಅಭಿಪ್ರಾಯ ಹೇಗಿದೆ ?"

"ಮತ್ತೇನ್ ಮಾಡೋದು. ಅವಳು ಅಷ್ಟು ಬೇಡಿಕೊಂಡ ಮೇಲೆ."

"ಮದುವೆ ಮಾಡಿಕೊಳ್ಳುತ್ತೀಯೇನು ?"

"ಅಂಗೇ ಮಾಡ್ತೀನಿ ಸಾರ್."

"ಅಲ್ಲಯ್ಯ. ಆಕೆ ನಿನ್ನನ್ನು ತಮಾಷೆ ಮಾಡ್ತಿದ್ದಾಳೋ ಏನೋ ?"

"ಇಂತಹ ಮದುವೆ ವಿಚಾರದಿಲ್ಲಿ ತಮಾಷೆಯೇನಂತೆ ತಮಾಷ್. ಇಷ್ಟವಿದ್ದರೆ ಮಾಡಿಕೊಳ್ಳಲಿ, ಇಲ್ಲದಿದ್ದರೆ ಇದ್ದೇ ಇದ್ದಾಳೆ ಪುಟ್ಟರಂಗಮ್ಮ."

"ಅವಳ್ಯಾರೋ ? ಪುಟ್ಟರಂಗಮ್ಮ ?"

"ಫಸ್ಟ್ ವಾರ್ಡಿನ ಆಯಾ."

"ಲೋ ಬಾಷಾ. ನಿನ್ನ ಪರ್ಸನಾಲಿಟಿ, ಫೇಸ್‌ಕಟ್, ಇಸ್ತ್ರಿ ಬಟ್ಟೆ, ಹೇರ್ ಆಯಿಲ್ ವಾಸನೆ, ಪಟಾಣ್ ಚಪ್ಪಲಿ, ಕಣ್ಣಿಗೆ ಹಚ್ಚಿರುವ ಕಪ್ಪು ಇವನ್ನು ನೋಡಿದ ನಂತರ ಯಾವ ಹೆಣ್ಣು ತಾನೆ ಸುಮ್ಮನಿರುತ್ತಾಳೆ ಬಾಷಾ. ನೀನು ಹೀಗೇ ನ್ಯಾಯದಿಂದ ಕೆಲಸ ಮಾಡುತ್ತಿದ್ದೆಯೆಂದರೆ ಮೆಡಿಕಲ್ ಆಫೀಸರ್ ಚಕ್ರಪಾಣಿಯವರು ಅವರ ಮಗಳನ್ನೇ ಕೊಟ್ಟು ಮದುವೆ ಮಾಡಬಹುದು. ನೀನು ಮಾತ್ರ ಮರ್ಯಾದೆಯಿಂದಿರಬೇಕು."

"ಇದೆಲ್ಲ ನಿಮಗೆ ಹೇಗೆ ಗೊತ್ತಿದೆ ಸಾರ್. ಮೆಡಿಕಲ್ ಆಫೀಸರಿಗೂ ನನ್ನನ್ನು ಅಳಿಯನನ್ನಾಗಿ ಮಾಡಿಕೊಳ್ಳಲು ತುಂಬಾ ಆಸೆಯಿರಬೇಕೆಂದು ಕಾಣುತ್ತೆ. ನನ್ನನ್ನು ನೋಡಿದರೆ ಅದೊಂದು ವಿಧದಿಂದ ನಕ್ಕು ನಲಿದು ಹೋಗುತ್ತಾರೆ. ಅವರಿಗಿಷ್ಟವಿದೆಯೋ ಇಲ್ಲವೋ ತಿಳಿಯದು. ಅವರ ಮಗಳು ಸರಳಾದೇವಿ ಇದ್ದಾರಲ್ಲಾ ಅವರು ಒಂದು ಬಾರಿ ಅಂದರೆ, ಹೋದ ತಿಂಗಳು ಆಸ್ಪತ್ರೆಗೆ ಬಂದಿದ್ದರು. ನಾನು ಅವರ ಬಳಿಯಲ್ಲೇ ಓಡಾಡುತ್ತಿದ್ದೆ, ಅವರು ನನ್ನನ್ನು ಮಾತನಾಡಿಸಿದ್ದಾರೆ ಸಾರ್. ನನ್ನ ಮೇಲೆ ಅವರಿಗೆ ಆಸೆ ಇಲ್ಲದಿದ್ದರೆ ನನ್ನನ್ನು ಮಾತನಾಡಿಸುತ್ತಿದ್ದರೇನು ?"

"ಹೌದೋ ಬಾಷಾ. ನೀನೊಬ್ಬ ಅದೃಷ್ಟಶಾಲಿಯೇ ಇರಬೇಕು. ಅಂತೂ ಒಟ್ಟಿನಲ್ಲಿ ಮರ್ಯಾದೆಯಿಂದ ನಡೆದುಕೋ ?"

"ಅದು ನನ ... ತ್ತಿದೆ. ಹಾಗೆ ಮರ್ಯಾದೆಬಿಟ್ಟು ನಡೆಯಬೇಕಾಗಿದ್ದರೆ ನರ್ಸ್ ನಳಿ ... , ಎರಡು ದಿನಗಳ ಹಿಂದೆಯೇ ಆಸ್ಪತ್ರೆಯಲ್ಲಿಯೇ ಎಳೆದುಕೊಳ್ಳುತ್ತಿದ್ದೆ ಹ...ೀಗಲಿ ಪಾಪ! ನಮ್ಮ ಮಾನ ಅವಳ ಮಾನ ಬೀದಿಗೆ ಏಕೆ ಬರಬೇಕು ಎಂದು ಸುಮ್ಮನಿದ್ದುಬಿಟ್ಟೆ."

"ಅವಳೇನು ಡಬ್ಬ ಅಂತಿಯೇನು ?"

"ಡಬ್ಬ ಅಲ್ಲದಿದ್ದರೆ !....ಆಕೆ ಮಾಡಿದ ಕೆಲಸ ನಮ್ಮಪ್ಪರಾಂ ಕೆಲಸ."

"ಅಂತಹ ಕೆಲಸ ಏನು ಮಾಡಿದಳೋ !"

"ಅಹಾ ! ನೀವು ಬಲು ಕಿಲಾಡಿ ಇದ್ದೀರಿ ಸಾರ್. ಮಾಡೋದೆಲ್ಲಾ ಮಾಡಿಬಿಟ್ಟು ಈಗ ನಸ್ತರ್ ಮಾತಾಡೋಹಾಗೆ ಮಾತಾಡ್ತಿದ್ದೀರಲ್ಲಾ"

"ನಾನೇನು ಮಾಡಿದೆನೋ ?"

"ಅಯ್ಯೋ ಪಾಪ. ಏನೂ ಗೊತ್ತಿಲ್ಲದವರಂತೆ ಮಾತಾಡುತ್ತಿದ್ದೀರಲ್ಲಾ."

"ವಿಷಯವಾದರೂ ತಿಳಿಸೋ ಬಾಷಾ ?"

"ತಿಳಿಸೋದೇನು ? ನಿಮ್ಮ ತಂದೆಯವರು ಸಾಯಲು ವಿಷದ ಪುಡಿ ತಂದುಕೊಟ್ಟವರು ನೀವು. ನೀವು ತಂದುಕೊಟ್ಟ ವಿಷವನ್ನು ತಿನ್ನಿಸಿದವಳು ನಳಿನಿ. ನಿಮ್ಮಿಬ್ಬರ ಮಾತುಕತೆಗಳಿಗೆ ವಿಷಯಾಲೋಚನೆ ಮಾಡಲು ಮಾಮಾ ಕೆಲಸ ಮಾಡಿದವನು ನಾನೇ ! ಪುನಃ ಏನೂ ತಿಳಿಯದವರಂತೆ ಮಾತನಾಡಿದರೆ ಹೇಗೆ ಸಾರ್ ?"

"ಆ ವಿಷಯವೇನೋ ? ಓಹೋ ದೊಡ್ಡ ರಹಸ್ಯವೆಂದು ಸುತ್ತಲೂ ನೋಡಿ ಮಾತನಾಡುತ್ತಿದ್ದೀಯಲ್ಲೋ ? ಜೋರಾಗಿಯೇ ಹೇಳೊ. ಎಂದಾದರೂ ಒಂದು ದಿನ ನಾವು ಮೂವರೂ ಜೈಲಿನ ವಾಸ ಅನುಭವಿಸಿಯೇ ತೀರಬೇಕಲ್ಲವೇ ?"

"ಜೊತೆಗೆ ನನ್ನನ್ನೂ ಸೇರಿಸುತ್ತಿದ್ದೀರಲ್ಲಾ ಸಾರ್."

"ನೀನಿಲ್ಲದಿದ್ದರೆ ಆ ಪ್ರಸ್ತಾಪವೇ ಇಲ್ಲ."

"ಹಾಗಿದ್ದರೆ ನನ್ನ ಕೈಲಿದೆ ನಿಮ್ಮ ಬೀಗ."

"ಹೌದು. ಹೋಗಿ ಹೇಳೋ ಪೋಲೀಸರ ಹತ್ತಿರ."

"ನಾನ್ಯಾಕೆ ಹೇಳ್ತೀನಿ ಸಾರ್ ! ನನಗೇನು ಬೇಕಾಗಿದೆ" ಎಂದು ಹೇಳಿ ಹೊರಟುಹೋಗುವುದರಲ್ಲಿದ್ದವನು ಪುನಃ ಯಾವುದೋ ಜ್ಞಾಪಿಸಿಕೊಂಡವನಂತೆ ಹತ್ತಿರಕ್ಕೆ ಬಂದು,

"ಸಾರ್, ಬಹಳ ದಿನವಾಯಿತು ಅಂಗಡಿ ಕಡೆ ಹೋಗಿ. ಎರಡು ರೂಪಾಯಿ ಇದ್ದರೆ ಮೂರು ಡ್ರಾಂ ಹೊಡೆದು ಮಲಗಿಬಿಡುತ್ತೇನೆ"

ರಾಜ್ ಪರ್ಸನ್ನು ತೆಗೆದು ಐದು ರೂಪಾಯಿ ನೋಟೊಂದನ್ನು

ಕೊಟ್ಟು "ಜೋಕೆ ಬಾಷಾ. ನಳಿನಿಯ ಮಾತಿಗೇನಾದರೂ ಹೋದೆಯೆಂದರೆ ತುಳಿದುಹಾಕಿಬಿಡುತ್ತೇನೆ."

ಕೈಗೆ ಐದು ರೂಪಾಯಿ ಬಿದ್ದದ್ದಕ್ಕಾಗಿ ರಾಜ್ಞ ಆಡಿದ ಮಾತುಗಳನ್ನು ಸ್ಥೈರಿಸಿಕೊಂಡಿದ್ದ. ಇಲ್ಲದಿದ್ದರೆ ಬಾಷ ರಾಜ್ಞನನ್ನು ಅಲ್ಲಿಯೇ ಹೊಡೆದು ಮಲಗಿಸಿಬಿಡುತ್ತಿದ್ದ.

ಐದು ರೂಪಾಯಿ ತೆಗೆದುಕೊಂಡ ಬಾಷ ಫಸ್ಟ್ ವಾರ್ಡಿಗೆ ಹೋಗಿ ವಾರ್ಡ್ ಡಾಕ್ಟರ ಬಳಿ "ಸಾರ್ ನಳಿನಿಯ ಚಿಕ್ಕಮ್ಮನ ಮಗಳು ಸತ್ತುಹೋದ ಳಂತೆ. ಎರಡು ದಿನ ಲೀವ್‌ನೊಂದಿಗೆ ನಳಿನಿಯನ್ನು ಕಳುಹಿಸಬೇಕಂತೆ. ಪಾಪ!" ಎಂದನು.

ಬಾಷಾ ಆಡಿದ ಮಾತಿನಲ್ಲಿ ನಳಿನಿಗೆ ನಂಬಿಕೆಯುಂಟಾಗಲಿಲ್ಲ. ಆದರೂ ಇದರಲ್ಲಿ ಯಾವುದೋ ಹಿಕ್‌ಮತ್ ಇದೆ ಎಂದು ತಿಳಿದುಕೊಂಡು ಸುಮ್ಮನಾದಳು.

ವಾರ್ಡ್ ಡಾಕ್ಟರು ನಳಿನಿಗೆ ಎರಡು ದಿನ ಲೀವ್‌ಕೊಟ್ಟು ಕಸಿಳಿದರು.

ವಾರ್ಡ್ ಮೆಟ್ಟಲನ್ನು ಬಿಟ್ಟು ಕೆಳಗಿಳಿದು ನೋಡಿದಳು. ದೂರದಲ್ಲಿ ರಾಜ್ಞ ನಿಂತಿದ್ದ.

ನಳಿನಿ ಸರಸರನೆಂದು ಹೆಜ್ಜೆಯಿಟ್ಟು ಬಂದಳು. ರಾಜ್ಞ ಸಮೀಪಕ್ಕೆ ಬಂದಳು. ಬಾಷ ಜೊತೆಯಲ್ಲೇ ಬಂದ.

"ನೋಡಿ ಸಾರ್. ನಿಮಗೋಸ್ಕರ ನಳಿನಿಗೆ ಲೀವ್ ಕೊಡಿಸಲು ವಾರ್ಡ್ ಡಾಕ್ಟರ ಬಳಿ ಒಂದು ಡೋಸ್ ಬಿಟ್ಟು ಲೀವ್ ಕೊಡಿಸಿದ್ದೇನೆ. ಇನ್ನು ನೀವಿಬ್ಬರೂ ಎರಡು ದಿನಗಳವರೆಗೆ ಮನಸ್ಸಿಗೆ ಬಂದಂತೆ ಒದ್ದಾಡಿ ಕೊಳ್ಳಬಹುದು."

"ಬಾಯಿ ಮುಚ್ಚು. ಎಲ್ಲೋ ನಿನ್ನ ತಲೆಯು ತಿರುಗುತ್ತಿದೆಯೆಂದು ಕಾಣುತ್ತೆ." ಎಂದನು ರಾಜ್ಞ.

"ನನ್ನ ತಲೆ ಮಾತ್ರವಲ್ಲ. ನಮ್ಮ ಮೂವರ ತಲೆಯೂ ತಿರುಗುತ್ತಿದೆ ಎನ್ನಿ" ಎಂದ ಬಾಷ.

"ಅವನೊಂದಿಗೆ ನಿಮಗೇತಕ್ಕೆ ಮಾತು" ಎಂದಳು ನಳಿನಿ.

"ನನ್ನೊಂದಿಗೆ ಮಾತುಕತೆ ಬೇಡ. ಇವಳೊಂದಿಗೆ ಮಾತುಕತೆ ಇಟ್ಟುಕೊಂಡರೆ ಸಾಕು" ಎಂದ ಬಾಷ.

ಬಾಷಾವಿನೊಂದಿಗೆ ಹೆಚ್ಚು ಮಾತಾಡುತ್ತಾ ನಿಂತಿರಲು ರಾರ್ಜ ಸಮ್ಮತಿಸಲಿಲ್ಲ. ಅದೂ ಅಲ್ಲದೆ ಆಸ್ಪತ್ರೆಯ ಬಳಿ ನಳಿನಿಯ ಪರಿಚಯಸ್ಥರನೇಕರು ಅಲ್ಲಲ್ಲೇ ಓಡಾಡುತ್ತಿರುವುದು ಕಾಣಬರುತ್ತಿತ್ತು. ಆದ್ದರಿಂದ ನಳಿನಿಯೊಂದಿಗೆ ರಾರ್ಜ ನಳಿನಿಯ ಮನೆಯನ್ನು ಸೇರುವುದರಲ್ಲಿದ್ದ.

ನಳಿನಿಯ ಮನೆಯು ಇನ್ನೂ ಒಂದೆರಡು ಫರ್ಲಾಂಗುಗಳಿರಬೇಕು.

ಇಷ್ಟುಹೊತ್ತು ರಾರ್ಜನ ನಾಟಕವನ್ನು ನೋಡುತ್ತ ಹಿಂಬಾಲಿಸುತ್ತಿದ್ದ ಥಾಮಸ್ ಪುನಃ ಹಿಂಬಾಲಿಸಿಯೇ ಬರುತ್ತಿದ್ದರು. ಈ ಸಮಯ ಬಿಟ್ಟರೆ ಬೇರೆ ಸಮಯ ಸಿಕ್ಕುವುದು ಕಷ್ಟವೆಂದು ತಿಳಿದು ರಾರ್ಜ ಮತ್ತು ನಳಿನಿ ಒಬ್ಬರಿಗೊಬ್ಬರು ಹೊಂದಿಕೊಂಡು ಮಾತನಾಡುತ್ತಿರುವುದನ್ನು ನೋಡಿ ತನ್ನ ಜೋಬಿನಲ್ಲಿಟ್ಟಿದ್ದ ಪಾಕೆಟ್ ಕ್ಯಾಮರವನ್ನು ತೆಗೆದು ಫೋಟೋ ಹಿಡಿದರು ಥಾಮಸ್. ಅವರು ಫೋಟೋ ಹಿಡಿದಿದ್ದು ಒಂದು ನೂತನ ರೀತಿಯಲ್ಲಿತ್ತು. ಕ್ಯಾಮರ ಕೂಡ ಯಾರೂ ಗುರ್ತಿಸುವಂತಿರಲಿಲ್ಲ. ಪಾಕೆಟ್ ಡೈರಿ ಇದ್ದಂತೆ ಇತ್ತು.

ಥಾಮಸ್‌ರವರ ಹಿಂದೆ ಬಾಷಾ ಕವರ್ ಆಗಿದ್ದ. ಬಾಷ ಬಾಯಿಬಡಕತನದಿಂದ ರಾರ್ಜ ಮತ್ತು ನಳಿನಿ ಎದುರಿಗೆ ಕಂಡ ಕಂಡ ಹಾಗೆ ಮಾತಾಡಿದನೇ ಹೊರತು ಅವರಿಬ್ಬರಿಗೆ ಥಾಮಸ್ ಹಿಂಬಾಲಿಸುತ್ತಿರುವುದನ್ನು ಕಂಡನಂತರ ಥಾಮಸ್‌ರವರನ್ನು ಹಿಂಬಾಲಿಸದೇ ಇರಲು ಆತನ ಕೈಲಿ ಸಾಧ್ಯವಾಗಲಿಲ್ಲ.

ನಳಿನಿ ಮನೆಯ ಬೀಗವನ್ನು ತೆಗೆದಳು. ರಾರ್ಜ, ನಳಿನಿ ಮನೆಯೊಳಕ್ಕೆ ಹೋದರು.

ರೂಮಿನ ಕಿಟಕಿಯೊಂದನ್ನು ತೆರೆದಿದ್ದರು. ಥಾಮಸ್ ಆ ತೆರೆದಿರುವ ಕಿಟಕಿಯಲ್ಲಿ ಏನಾದರೂ ಕಾಣಬಹುದೇನೋ ಎಂದುಕೊಂಡು ಬೀದಿಯಿಂದ ನೋಡುವುದಕ್ಕೆ ಅನುಕೂಲವಾದ ಒಂದು ಸ್ಥಳವನ್ನು ಹುಡುಕಾಡುತ್ತಿದ್ದರು.

ಅಷ್ಟರಲ್ಲಿ ಬಾಷಾ ತಾನೇ ಮುಂದಾಗಿ ಒಂದು ಕಡೆ ಬಂದು ನಿಂತ. ಥಾಮಸ್ ಬಾಷಾವನ್ನು ನೋಡಿದರು. ಥಾಮಸ್‌ರವರನ್ನು ಕಂಡರೂ ಬಾಷಾ ಹೆದರಲಿಲ್ಲ. ಧೈರ್ಯವಾಗಿಯೇ ನಿಂತಿದ್ದ. ಥಾಮಸ್‌ರವರನ್ನು ಲಕ್ಷ್ಯದಲ್ಲಿಡಲಿಲ್ಲ.

ಥಾಮಸ್‌ರವರು ಯಾರೆಂಬುದು ಬಾಷಾವಿಗೆ ಗೊತ್ತೇ ಇತ್ತು. ಅವ

ರನ್ನು ಹಿಂದೆ ರಾಮುರಾಯರು ಸತ್ತದಿನ ಬಂದಿದ್ದಾಗ ನೋಡಿದ್ದ. ಆದರೂ ಇಂದು ಆತನು ಅಧೈರ್ಯಪಡಲಿಲ್ಲ. ಏನಾದರೂ ಆಗಲಿ ನೋಡೇಬಿಡೋಣ ವೆಂದುಕೊಂಡು ಧೈರ್ಯಮಾಡಿಬಿಟ್ಟದ್ದ.

ಥಾಮಸ್ ಬಾಷಾವನ್ನು ನೋಡಿದರು. ಅವನು ರೋಷಾವೇಶನಾಗಿ ನಿಂತಿರುವುದನ್ನು ಕಂಡು ಅವರಿಗೆ ನಗು ಬಂದಿತು. ನಳಿನಿಯೊಂದಿಗೆ ರಾರ್ಜ ಬಂದುದನ್ನೂ ರಾರ್ಜ ಮತ್ತು ನಳಿನಿಯನ್ನು ಬಾಷಾ ಹಿಂಬಾಲಿಸಿಕೊಂಡು ಬಂದುದನ್ನೂ ನೋಡಿ ಇದರಲ್ಲೇನೋ ಆಶ್ಚರ್ಯವಿದೆ ಎಂದುಕೊಂಡರು.

ತಂದೆ ರಾಮುರಾಯರು ಆಸ್ಪತ್ರೆಯ ನೌಕರಿಯವರಿಂದಲೇ ಕೊಲೆಯಾದ ರೆಂಬ ಒಂದು ಊಹೆಯನ್ನು ಮೆಡಿಕಲ್ ಆಫೀಸರ್ ಚಕ್ರಪಾಣಿಯವರು ಹೇಳಿರುವುದನ್ನು ಕೇಳಿಯೂ ಕೇಳಿಸದವನಂತೆ ರಾರ್ಜ ಆಸ್ಪತ್ರೆಯ ಕೇವಲ ಒಬ್ಬ ನರ್ಸನ್ನು ಜೊತೆಹಾಕಿಕೊಂಡು ಹೋದನೆಂದರೆ ಇದರಲ್ಲಿ ಸಂದೇಹ ವಿಲ್ಲದೆ ಇರುತ್ತದೆಯೇ ? ಅದರಲ್ಲೂ ರಾರ್ಜ ರಾಜಭೋಗವನ್ನನುಭವಿಸು ವವನು ! ಅವನಿಗಂತೂ ಲೆಖ್ಖವಿಲ್ಲದಷ್ಟು ಆಸ್ತಿ ಇದೆ. ಬೇಕಾದಹಾಗೆ ಕಾರುಗಳಿವೆ. ಸೊಗಸಾಗಿ ಜೀವನ ಸಾಗಿಸುವುದನ್ನು ಬಿಟ್ಟು ಹೀಗೆ ಕೀಳು ದರ್ಜೆಯ ಕೆಲಸಗಾರ್ತಿಯೊಂದಿಗೆ ಕೂಡಿಹೋದದ್ದು ಥಾಮಸ್‌ರವರಿಗಂತೂ ಎಳ್ಳಷ್ಟೂ ಹಿಡಿಸಲಿಲ್ಲ.

ಬಾಷಾವನ್ನು ಮಾತನಾಡಿಸಬೇಕೆಂದಿದ್ದರು. ಪುನಃ, ಥತ್, ಇವ ನೊಬ್ಬ ಮರ್ಯಾದೆಯಿಲ್ಲದ ಮೂಢ ಎಂದುಕೊಂಡು ಅವನನ್ನು ಮಾತನಾಡಿ ಸಲಿಲ್ಲ. ಸುಮ್ಮನಿದ್ದುಬಿಟ್ಟರು.

ಎರಡು ಗಂಟೆ ಕಳೆಯಿತು. ಬಾಷಾ ಅಲ್ಲೇ ನಿಂತಿದ್ದ. ಥಾಮಸ್ ರವರೂ ಆ ಜಾಗವನ್ನು ಬಿಟ್ಟು ಕದಲಲಿಲ್ಲ.

ಮಾರುವೇಷವನ್ನು ಹಾಕಿಕೊಂಡಿದ್ದ ರಜಾಕ್ ಅದೇ ರಸ್ತೆಯಲ್ಲಿ ಬರು ತ್ತಿದ್ದ. ಥಾಮಸ್ ಅಲ್ಲಿ ನಿಂತಿರುವುದು ರಜಾಕನಿಗೆ ಗೊತ್ತಿರಲಿಲ್ಲ. ಅವನ ಪಾಡಿಗೆ ರಜಾಕನು ಯಾವುದೋ ಯೋಚನೆ ಮಾಡುತ್ತಾ ಬರುತ್ತಿದ್ದ.

ರಜಾಕನು ಮಾರುವೇಷ ಹಾಕಿಕೊಂಡಿದ್ದರೂ ಎದುರಿಗೆ ಹೋದದ್ದನ್ನು ಕಂಡು ದುರುಗುಟ್ಟಿಕೊಂಡು ನೋಡಿದರು ಥಾಮಸ್. ರಜಾಕನೂ ಥಾಮಸ್ ರವರನ್ನು ಗುರ್ತಿಸಿಕೊಂಡನು. ಥಾಮಸ್‌ರವರು ರಜಾಕನ ಕಾಲನ್ನು ನೋಡಿದರು. ಅದು ಸುಟ್ಟು ಅದರ ಮೇಲೆ ಬೆಂಕಿಯ ಬರೆ ಹಾಕಿದ್ದುದನ್ನು

ಗಮನಿಸಿ ನೋಡಿದರು. ರಜಾಕನ ಜ್ಞಾಪಕ ಅವರಿಗೆ ಬಂದಿತು. ನಳಿನಿಯ ಮನೆಯಕಡೆ ಇಟ್ಟಿದ್ದ ದೃಷ್ಟಿಯನ್ನು ಬಿಟ್ಟು ರಜಾಕನ ಹಿಂದೆಯೇ ಹೊರಟರು.

ಹಿಂದೆ ಥಾಮಸ್‌ರವರು ತನ್ನನ್ನು ಹಿಂಬಾಲಿಸುತ್ತಿರುವುದನ್ನು ನೋಡಿಕೊಂಡ ರಜಾಕನು ಸ್ವಲ್ಪ ಬೇಗನೆ ಕಾಲನ್ನು ಮುಂದಿಡುತ್ತಿದ್ದ. ಥಾಮಸ್‌ರವರೂ ಅವನ ಕಡೆಯ ದೃಷ್ಟಿಯನ್ನು ಕದಲಿಸಲಿಲ್ಲ.

ಥಾಮಸ್‌ರವರು ಇದ್ದಕ್ಕಿದ್ದಂತೆ ಯಾರ ಹಿಂದೆಯೋ ಹೋಗುತ್ತಿರುವುದನ್ನು ಕಂಡ ಬಾಷಾ "ಥಾಮಸ್‌ರವರು ಯಾವುದೋ ಖರಾಮತ್ ಮಾಡಲು ಬೇಗಬೇಗನೆ ಹೊರಟುಹೋಗುತ್ತಿದ್ದಾರೆ. ನಾನು ಇಲ್ಲಿ ನಿಂತಿರುವುದು ಅವರ ಕೆಲಸಕ್ಕೆ ಸ್ವಲ್ಪ ಷಾಕ್ ಹೊಡೆದಿರಬೇಕು. ಅದಕ್ಕಾಗಿಯೇ ಬಾಲ ಮುದುರಿಕೊಂಡು ಕಂಬಿ ಕೀಳುತ್ತಿದ್ದಾರೆ" ಎಂದುಕೊಂಡು ಬಾಷಾ ಅಲ್ಲೇ ನಿಂತಿದ್ದ.

ಥಾಮಸ್‌ರವರು ಅಲ್ಲಿಂದ ಬಿಟ್ಟು ಯಾವಾಗ ಹೋಗುತ್ತಾರೆಯೋ ಎಂಬುದಾಗಿ ಕಿಟಕಿಯ ಸಣ್ಣ ರಂಧ್ರದ ಮೂಲಕ ನೋಡುತ್ತಿದ್ದ ರಾಜ್, ಥಾಮಸ್‌ರವರು ಹೋದದ್ದನ್ನೇ ಕಾಯುತ್ತಿದ್ದು ತಕ್ಷಣ ನಳಿನಿಯ ಮನೆಯಿಂದ ಹೊರಬಂದ.

ರಾಜ್ ಥಾಮಸ್ ಹೋದ ದಾರಿಯನ್ನು ಬಿಟ್ಟು ಬೇರೆ ದಾರಿಯಲ್ಲಿ ಹೊರಟ. ಬಾಷಾ ರಾಜ್‌ನನ್ನು ಹಿಂಬಾಲಿಸುತ್ತಾ ಹತ್ತಿರಕ್ಕೆ ಹೋದ.

"ಕೆಲಸವೆಲ್ಲಾ ಸಂಪೂರ್ಣವಾಗಿ ಮುಗೀತೇನು ಸಾರ್ !"

"ಹೋಗೋ ಸುಮ್ನೆ. ಹೆಚ್ಚು ಮಾತಾಡಿದರೆ ಹಲ್ಲುದುರಿಸಿಬಿಟ್ಟೇನು."

"ಬಹಳ ಜನರನ್ನು ನೋಡಿದ್ದಾಗಿದೆ ಹಲ್ಲು ಉದುರಿಸೋರನ್ನ."

"ನಿನಗೂ ಮೌತ್ ಕರೆಯುತ್ತಿದೆಯೋ ಏನೋ ಗೊತ್ತಾಗುತ್ತಿಲ್ಲ."

"ಸರಿ ಬಿಡ್ರೀ, ದೊಡ್ಡ ಮೌತ್-ಕಾ-ನಿಷಾನಿ ತೋರಿಸೋರು ! ನಮಗೂ ನಳಿನೀನ ಒಂದು ಛಾನ್ಸ್ ಬಿಟ್ಟುಕೊಟ್ರೆ ಸರಿ. ಇಲ್ಲದೇ ಹೋದರೆ ನೀವು ಹೇಳಿದ ಮೌತ್-ಕಾ-ನಿಷಾನಿ ನೀವೇ ಅನುಭವಿಸಿಬಿಡಬೇಕಾಗುತ್ತೆ."

"ನಳಿನಿಗೆ ಮೊಹಬ್ಬತ್ ಮಾಡಬೇಕೆಂಬ ಆಸೆಯಿದ್ದರೆ ಅವಳ ಬಳಿಯೇ ಹೋಗಿ ಕೇಳು."

"ಆಕೆಯನ್ನು ನೀವು ಸುತ್ತುಹಾಕಿಕೊಂಡು ತಿರುಗುತ್ತಿರೋವಾಗ ನಮ್ಮ ಮಾತು ಕೇಳುತ್ತಾಳೆಯೇ ?"

"ಅದಕ್ಕೆ ನಾನು ಮಾಡಬೇಕಾದದ್ದೇನೋ!"

"ಅದೇ. ನೀವು ಸ್ವಲ್ಪ ಹೇಳಿ ನೋಡಿ."

"ಲೋ ಗವಾರ್. ನೀನು ಯಾರೊಂದಿಗೆ ಮಾತನಾಡುತ್ತಿದ್ದೀಯೆ ಎಂಬುದನ್ನು ನೆನೆದು ನೋಡಿ ಮಾತನಾಡು."

"ನನಗೂ ಗೊತ್ತಿದೆ. ನಾನು ಮಾತನಾಡುತ್ತಿರುವುದು ತಂದೆಗೆ ವಿಷ ಕೊಟ್ಟು ಸಾಯಿಸಿದ ಚಂಡಾಲನೊಂದಿಗೆಂದು. ನೋಡ್ರೀ ರಾರ್ಜ. ಈಗ ಕೊನೆಯದಾಗಿ ಹೇಳುತ್ತಿದ್ದೇನೆ. ನಳಿನಿಯ ಮಂಚದ ಮೇಲೆ ನನಗೆ ಒಂದು ದಿನವಾದರೂ ಹತ್ತಲು ಆಸ್ಪದ ಕೊಟ್ಟರೆ ಸರಿ, ಇಲ್ಲದೆಹೋದರೆ ರಾಮರಾಯರ ಕೊಲೆಯ ಒಳಸಂಚು ಹೇಗೆ ನಡೆಯಿತೆಂಬುದನ್ನು ನಾನು ದೊಡ್ಡ ಡಾಕ್ಟರು ಚಕ್ರಪಾಣಿಯವರಿಗೆ ತಿಳಿಸಿಬಿಡುತ್ತೇನೆ. ಅನಂತರ ನಿಮ್ಮ ಬಂಡವಾಳವೆಲ್ಲಾ ಬಯಲಿಗೆ ಬಂದುಬಿಡುತ್ತೆ."

ಬಾಷಾ ಆಡಿದ ಮಾತು ರಾರ್ಜನನ್ನು ಅಪ್ಪಳಿಸಿತು. ಒಂದು ಕಡೆ ಥಾಮಸ್‌ರವರು ನಳಿನಿಯೊಂದಿಗೆ ಆಕೆಯ ಮನೆಗೆ ಹೋದದ್ದನ್ನು ಗುರ್ತಿಸಿ ಕೊಂಡಿದ್ದಾರೆ. ಮತ್ತೊಂದು ಕಡೆ ಕೊಲೆಯ ವಿಷಯ ತಿಳಿದಿರುವ ಬಾಷಾ ನಳಿನಿಯ ದೇಹದ ರುಚಿಯನ್ನು ನೋಡಬೇಕೆಂದು ಹಾಹಾಕರಿಸುತ್ತಿದ್ದಾನೆ. ಇದರ ಮಧ್ಯೆ ನಳಿನಿಯಂತೂ ಪಿತ್ಥ ಹಿಡಿದವಳಂತೆ ಇದ್ದಾಳೆ. ಅವಳಾಡುವ ಮಾತು ಅಷ್ಟೊ ಅನ್ವರ್ಥವಾಗಿಯೇ ಇದೆ. ನಾನು ಮಾಡುವುದೇನು? ಎಂದು ಮನಸ್ಸಿನಲ್ಲೇ ಕುದಿದು ಕುಗ್ಗಿಹೋದನು. ಎದುರಿಗಿದ್ದ ಬಾಷಾವನ್ನು ಕುರಿತು,

"ಬಾಷಾ, ನೀನು ಒಂದೆರಡು ದಿನ ಸುಧಾರಿಸಿಕೋ. ಹೇಗಿದ್ದರೂ ಷಣ್ಮುಗಂ ಇನ್ನು ಹೊರಗೆ ಬರುವಂತಿಲ್ಲ."

"ಏಕೆ ಬರುವಂತಿಲ್ಲ. ಬಾಷಾ ಮನಸ್ಸು ಮಾಡಿದರೆ ಒಂದು ಸೆಕೆಂಡಿ ನಲ್ಲಿ ಕರೆದುಕೊಂಡು ಬರಬಲ್ಲ."

"ಸುಮ್ಮನೆ ದುಡುಕಿ ಮಾತನಾಡಬೇಡಪ್ಪ. ಸ್ವಲ್ಪ ಸುಧಾರಿಸಿಕೊ. ಅನ್ಯಾಯವಾಗಿ ನಾವು ಕೆಟ್ಟು ನೀನು ಕೆಟ್ಟು ಹೋದರೆ ಬಂದ ಪ್ರಯೋಜನ ವೇನು? ಷಣ್ಮುಗಂನಿಗೆ ದಂಡನೆ ವಿಧಿಸಿದ ನಂತರ ನಳಿನಿಯ ಜೀವನವು ಒಂದು ಸ್ಥಿಮಿತಕ್ಕೆ ಬಂದು ನಿಲ್ಲುತ್ತೆ. ನಂತರ ಬೇಕಾದರೆ ನಳಿನಿಯನ್ನು ನೀನೇ ಇಟ್ಟುಕೊ. ನಿನಗಿಂತಲೂ ಪರಿಚಯಸ್ಥರು ಆಕೆಗೆ ಬೇರೆ ಯಾರಿ

ದ್ದಾರೆ? ಇಬ್ಬರೂ ಒಂದೇ ಕಡೆ ಕೆಲಸಮಾಡಿಕೊಂಡು ಸುಖದಿಂದ ಜೀವನ ಸಾಗಿಸಿಕೊಂಡಿರಲು ಆಸ್ಪದ ಸಿಗುತ್ತೆ. ಸುಮ್ಮನೆ ವೃಥಾ ಆಕೆಯನ್ನೂ ನನ್ನನ್ನೂ ಪೀಡಿಸಬೇಡ. ನಳಿನಿ ನಿನಗೆ ಕಾಗದ ಬರೆದಿರುವುದಾಗಿ ಹೇಳಿದಳು. ಅದು ನಿಜವೇ?"

"ಹೌದು ಸಾರ್. ಕಾಗದವೇನೋ ಬರೆದಳು. ಆದರೆ...." ಎನ್ನುತ್ತಾ ಮಾತನ್ನು ಅಷ್ಟಕ್ಕೇ ನಿಲ್ಲಿಸಿದನು ಬಾಷಾ. ರಾರ್ಜ ಮೃದುವಾಗಿ ಆಡಿದ ಮಾತುಗಳಿಗೆ ಬೆರಗಾದ. ನಳಿನಿ ಸಿಕ್ಕುತ್ತಾಳೆನ್ನುವುದು ಖಂಡಿತ. ಆದರೆ ಇನ್ನೆರಡು ದಿನ ಕಾಯಬೇಕು ಎಂದುಕೊಂಡನು.

ಪುನಃ ರಾರ್ಜನೊಂದಿಗೆ ಹೆಚ್ಚು ಮಾತನಾಡಲಿಲ್ಲ ಬಾಷಾ. ತಲೆ ತಗ್ಗಿಸಿ ಮನಸ್ಸಿನಲ್ಲೇ ಸಂತೋಷಪಡುತ್ತಾ ಹೊರಟುಹೋದನು.

'ಸಧ್ಯ ಹೋದನಲ್ಲಾ ಶನಿ' ಎಂದುಕೊಂಡು ರಾರ್ಜ ಪುನಃ ನಳಿನಿಯ ಮನೆಯೊಳಕ್ಕೆ ಹೋದನು. ನಳಿನಿಯು ಮಂಚದಮೇಲೆ ಯಾವುದೋ ಯೋಚನೆ ಮಾಡುತ್ತಾ ಕೂತಿದ್ದಳು. ರಾರ್ಜ ಬಂದುದನ್ನು ಕಂಡು,

"ಪುನಃ ಇಷ್ಟು ಜಾಗ್ರತೆ ಬಂದುಬಿಟ್ಟಿರಲ್ಲ?"

"ಎಲ್ಲಿಗೋ ಹೋಗಬೇಕೆಂದು ಹೊರಗೆ ಹೊರಟೆ. ಶನಿ ಬಂದು ಬಿಟ್ಟ."

"ಯಾವ ಶನಿ?"

"ಅದೇ ಆ ಬಾಷಾ. ಎಂಜಲು ಎತ್ತೋ ಹುಡುಗರಿಗೆಲ್ಲಾ ಜಂಭ ಬಂದುಬಿಟ್ಟಿದೆ, ನಳಿನಿ. ವಿನಾಶ ಕಾಲೇ ವಿಪರೀತ ಬುದ್ಧಿ ಎನ್ನುವಂತೆ ಅವನಿಗೇನೋ ಕೆಟ್ಟ ಕಾಲ ಸಮೀಪಿಸಿಬಿಟ್ಟಿದೆಯೆಂದು ಕಾಣುತ್ತೆ."

"ಏನಂದ, ಆ ಬಾಷಾ?"

"ನಿನ್ನನ್ನು ಪ್ರೇಮಿಸಬೇಕಂತೆ!"

"ಅದೇ ಮಾತನ್ನು ಅಂದು ನಾನೇ ನಿಮ್ಮಲ್ಲಿ ಹೇಳಲಿಲ್ಲವೇ?"

"ಬಿಡು ಅವನ ಮಾತನ್ನು. ಇನ್ನೇನಾದರೂ ಸ್ವಲ್ಪ ಹೆಚ್ಚು ಮಾತ ನಾಡಿದ್ದರೆ ಚರ್ಮ ಸುಲಿದುಬಿಡುತ್ತಿದ್ದೆ."

"ಅವನೂ ಸಹ ಶುದ್ಧ ಪುಂಡ ರಾರ್ಜ. ಎಂತಹವರನ್ನೂ ಸಹಾ ಲಕ್ಷ್ಯದಲ್ಲಿಡದೆ ಮಾತನಾಡಿಬಿಡುತ್ತಾನೆ. ಸಮಯ ಸರಿಬಿದ್ದರೆ ಕೈ ಎತ್ತುವು ದಕ್ಕೂ ಅಂಜುವುದಿಲ್ಲ."

"ಆ ಮಾತನ್ನು ಮೂಲೆಗೆ ತಳ್ಳು ನಳಿನಿ. ಈಗ ನೀನು ನನ್ನೊಂದಿಗೆ ಬರಬೇಕು. ಎಲ್ಲಿಗೆ, ಏತಕ್ಕೆ, ಯಾವ ಕೆಲಸ, ಇವೆಲ್ಲ ಒಂದೂ ಕೇಳಬಾರದು. ಜಾಗ್ರತೆ ಡ್ರೆಸ್ ಮಾಡಿಕೊ" ಎಂದ ರಾಜ್.

"ಸರಿ, ಹಾಗೇ ಆಗಲಿ" ಎಂದು ಡ್ರೆಸ್ ಮಾಡಿಕೊಂಡಳು.

ಪಕ್ಕದ ಮನೆಯವರ ಒಪ್ಪಿಗೆಯಿಂದ ಫೋನನ್ನು ತೆಗೆದುಕೊಂಡು ತನ್ನ ಮನೆಗೆ ಫೋನು ಮಾಡಿ ಡ್ರೈವರಿಗೆ ಕಾರನ್ನು ತೆಗೆದುಕೊಂಡು ನಳಿನಿ ಮನೆ ಬಳಿ ಬರುವಂತೆ ಆಜ್ಞೆ ಮಾಡಿದ.

ನಳಿನಿ ಸೊಗಸಾಗಿ ಡ್ರೆಸ್ ಮಾಡಿಕೊಂಡಿದ್ದಳು. ಕಾರು ಬಂದು ನಿಂತಿತು. ರಾಜ್ ಮತ್ತು ನಳಿನಿ ಕಾರಿನಲ್ಲಿ ಕುಳಿತರು.

"ಎಲ್ಲಿಗೆ ಸಾರ್ ?"

"ರಜಾಕನ ರಹಸ್ಯ ಮಂದಿರದ ಕಡೆ."

ಕಾರು ವೇಗವಾಗಿ ಹೋಗುತ್ತಿತ್ತು. ಸರ್ಕಲ್ಲಿನಲ್ಲಿ ಕಾರು ತಿರುಗಲು ಆಗಲೇ ಅಷ್ಟೊಂದು ಗಲಾಟೆ. ಗುಂಪು ಜನರಂತೂ ಗಜಿಬಿಜಿಯಾಗಿ ಒಬ್ಬರ ಮೇಲೊಬ್ಬರು ಬಿದ್ದು ನೂಕಾಡುತ್ತಿದ್ದಾರೆ. ಕಾರನ್ನು ಆ ಸರ್ಕಲ್ಲಿನಲ್ಲಿ ಟರ್ನ್ ಮಾಡಲು ಆಗಲಿಲ್ಲ.

ಡ್ರೈವರ್ ಕೆಳಗಿಳಿದು ಆ ಗುಂಪಿನ ರಹಸ್ಯವೇನೆಂದು ತಿಳಿದುಕೊಂಡು ಬರಲು ಹೋದ. ಬಲು ಬೇಗನೆ ಓಡಿ ಬಂದ.

"ಸಾರ್ ರಜಾಕನ ಸೇವಕ ರಹಿಮ್ಖಾನ್ ಮಗುವಿನ ಚೈನನ್ನು ಕದ್ದು ಸಿಕ್ಕಿಕೊಂಡಿದ್ದಾನೆ. ಅದಕ್ಕೇ ಇಷ್ಟೊಂದು ಜನರು ಸೇರಿರುವುದು."

"ಗುಂಪಿನಲ್ಲಿ ಪತ್ತೇದಾರ ಥಾಮಸ್‌ರವರು ಇದ್ದಾರೇನೋ ನೋಡು."

ಪುನಃ ಡ್ರೈವರ್ ಗುಂಪಿನಲ್ಲಿ ನುಗ್ಗಿ ಥಾಮಸ್‌ರವರು ಇದ್ದಾರೇನೋ ಎಂಬುದಾಗಿ ನೋಡಿದ. ಥಾಮಸ್‌ರವರು ಕಾಣಿಸಲಿಲ್ಲ. "ಥಾಮಸ್‌ರವರು ಗುಂಪಿನಲ್ಲೆಲ್ಲೂ ಇಲ್ಲ" ಎಂದು ರಾಜ್ ಬಳಿ ಬಂದು ತಿಳಿಸಿದ.

ಆ ಗುಂಪಿನ ಮಧ್ಯೆ ಕಾರು ಹೋಗಲು ಆಗಲಿಲ್ಲ. ಜನರು ಗುಂಪು ಕಟ್ಟಿಕೊಂಡಿದ್ದರು. ಇಬ್ಬರು ಮೂವರು ಕಾನ್ಸ್ಟೇಬಲ್‌ಗಳು ಬಂದನಂತರ ಗುಂಪು ಚದುರಿತು. ಡ್ರೈವರ್ ಕಾರನ್ನು ಸ್ಟಾರ್ಟ್ ಮಾಡಿದ.

ಕಾರು ವೇಗವಾಗಿ ಹೊರಟಿತು. ಬಹಳ ದೂರ ಹೊರಟಿತು.

"ಈಗ ಹೋಗುವುದು ಎಲ್ಲಿಗೆ ರಾಜ್ ?" ಎಂದಳು ನಳಿನಿ.

"ನೀನು ಹೋಗಬೇಕು ಬಹಳ ದೂರದ ಆಚೆ ಎಂದು ನನ್ನ ಬಳಿ ಹೇಳುತ್ತಿದ್ದೆಯಲ್ಲವೇ ನಳಿನಿ ?"

"ಹೌದು, ಹೇಳುತ್ತಿದ್ದೆ."

"ನಿನ್ನ ಕೋರಿಕೆಯನ್ನು ಈಡೇರಿಸಲು ಈಗ ಅವಕಾಶ ಸಿಕ್ಕಿದೆ. ಅದಕ್ಕಾಗಿಯೇ ನಿನ್ನನ್ನು ಇಷ್ಟು ಮುತುವರ್ಜಿವಹಿಸಿ ಎಲ್ಲ ಕೆಲಸವನ್ನೂ ಬಿಟ್ಟು ಕರೆದುಕೊಂಡು ಬರುತ್ತಿದ್ದೇನೆ."

"ಹೋಗಬೇಕಾದ ಜಾಗದ ಹೆಸರಾದರೂ ಹೇಳಬಾರದೆ ?"

"ಆ ಜಾಗಕ್ಕೆ ಹೆಸರೇ ಇಲ್ಲ. ಹೆಸರಿಲ್ಲದ ಜಾಗ. ನಿನಗೆ ಉಂಟಾಗಿರುವ ಸಂದೇಹಗಳು ಕಳೆಯುವವರೆವಿಗೂ ಆ ಜಾಗವು ಅನಾಮಧೇಯವಾಗಿಯೇ ಉಳಿದಿರುತ್ತೆ. ವೃಥಾ ನಿನ್ನ ಮನಸ್ಸಿನಲ್ಲುಂಟಾಗಿರುವ ಕಲ್ಮಷಗಳು ಕಳೆದುಹೋಯಿತೆಂದರೆ ಆಗ ತಿಳಿಯುತ್ತೆ ಆ ಜಾಗದ ಹೆಸರು" ಎಂದ ರಾಜ್.

ನಳಿನಿ ರಾಜ್ ಆಡುತ್ತಿದ್ದ ಮಾತುಗಳನ್ನು ಗಮನವಿಟ್ಟು ಕೇಳುತ್ತಿದ್ದಳೆ ವಿನಃ ತಾನು ಏತಕ್ಕೆ ಇವನ ಸಹವಾಸ ಮಾಡಿದೆನೋ ಎಂದು ಮನಸ್ಸಿನಲ್ಲಿ ಸಂಕಟಪಡುತ್ತಲೇ ಇದ್ದಳು.

ಕಾರು ವೇಗದಿಂದಲೇ ಹೋಗುತ್ತಿತ್ತು. ಪತ್ತೇದಾರ ಥಾಮಸ್‌ರವರು ನಾಲ್ಕಾರು ಪೋಲೀಸಿನವರೊಂದಿಗೆ ನಡುರೋಡಿನ ಮಗ್ಗುಲಿನಲ್ಲಿ ಯಾರನ್ನೋ ಭೇಟಿಮಾಡಲು ಕಾದು ನಿಂತಿದ್ದರು.

ಕಾರಿನಲ್ಲಿ ಕುಳಿತಿದ್ದ ರಾಜ್ ಮತ್ತು ನಳಿನಿ ಅಲ್ಲಿ ನಿಂತಿದ್ದ ಪತ್ತೇದಾರ ಥಾಮಸ್‌ರವರನ್ನು ನೋಡಿ ತಾವು ಕುಳಿತಿರುವುದು ಕಾಣಿಸದಂತೆ ಸೀಟಿನ ಕೆಳಗೆ ಬಗ್ಗಿದರು.

ಥಾಮಸ್‌ರವರು ಕಾರನ್ನು ನಿಲ್ಲಿಸಬೇಕೆಂದು ಕೂಗಿದರು. ಅಡ್ಡಗಟ್ಟಲು ಬಂದರು. ಆದರೆ ಕಾರು ಅದಕ್ಕೆ ಲಕ್ಷ್ಯ ಕೊಡಲಿಲ್ಲ, ನಿಲ್ಲಲಿಲ್ಲ. ಇನ್ನೂ ರಭಸದಿಂದ ಹೊರಟುಹೋಯಿತು.

ಕಾರು ಹೋಗಬೇಕಾಗಿದ್ದ ಕಾಲುದಾರಿ ಥಾಮಸ್‌ರವರು ನಿಂತಿದ್ದ ಕಡೆಯಲ್ಲೇ ಇತ್ತು. ಆದರೆ ಈಗ ಆ ದಾರಿಯಲ್ಲಿ ಕಾರು ಹೋಗುವಹಾಗಿಲ್ಲ. ಆದುದರಿಂದ ಕಾರು ನೆಟ್ಟಗೆ ಒಂದೇ ಕಡೆ ಹೋಯಿತು.

ರಾಜ್ ಅಂದುಕೊಂಡಹಾಗೆ ಕಾರು ಹೋಗಲಿಲ್ಲ. ಅದೆಲ್ಲಿಗೋ ನೆಟ್ಟಗೆ ಹೋಗುತ್ತಿತ್ತು.

ಪುನಃ ನಳಿನಿ ಕೇಳಿದಳು.

"ಇನ್ನೂ ಎಷ್ಟು ದೂರ ಹೋಗಬೇಕು ರಾರ್ಜ ?"

"ಸುಮ್ಮನಿರು ನಳಿನಿ. ಥಾಮಸ್ ಬೇರೆ ನಾವು ಕಾರಿನಲ್ಲಿ ಬರುತ್ತಿರುವುದನ್ನು ಕಂಡಿರಬೇಕೆಂದು ಕಾಣುತ್ತೆ. ಅದಕ್ಕೆ ಸಿಳ್ಳು ಹಾಕಿ ಕಾರು ನಿಲ್ಲಿಸಬೇಕೆಂದು ಪ್ರಯತ್ನಪಟ್ಟ. ಡ್ರೈವರ್ ಸ್ವಲ್ಪ ಕಿಲಾಡಿಯಾದ ಕಾರಣ ಕಾರನ್ನು ಹೇಗೋ ಹೊಡೆದುಕೊಂಡು ಬಂದ. ಇಂತಹದರಲ್ಲಿ ಸುಮ್ಮನೆ ಮಾತನಾಡಿಸಿ ನನ್ನ ತಲೆ ಕೆಡಿಸಬೇಡ."

ಕಾರು ಇನ್ನೂ ಹೋಗುತ್ತಲೇ ಇತ್ತು. ಸಂಜೆ ಆರು ಘಂಟೆ ಸಮಯ. ಕತ್ತಲು ಹೊಂಚುಹಾಕಿಕೊಂಡು ಬರುತ್ತಿತ್ತು.

ಪುನಃ ಕೇಳಿದಳು ನಳಿನಿ.

"ರಾರ್ಜ, ನನಗೇಕೋ ಬಹಳ ಬಾಯಾರಿಕೆ. ಎಲ್ಲಾದರೂ ಸ್ವಲ್ಪ ನೀರು ಸಿಕ್ಕಿದರೆ ತುಂಬಾ ಚೆನ್ನಾಗಿರುತ್ತೆ."

"ನಿನಗೆ ತಲೆತಿರುಗುತ್ತದೆಂದು ಕಾಣುತ್ತೆ ನಳಿನಿ. ಸುಮ್ಮನೆ ನನ್ನನ್ನು ಪೀಡಿಸುತ್ತೀಯಲ್ಲ. ಈ ನಡು ಕಾಡಿನಲ್ಲಿ ನಿನಗೆ ನೀರು, ಕಾಫಿ, ಓವಲ್‌ಟೀನ್, ಎಲ್ಲವೂ ಬೇಕೆಂದರೆ ನಾನೆಲ್ಲಿಂದ ತಂದುಕೊಡಲಿ" ಎಂದು ರೇಗಿದ. ಡ್ರೈವರನ್ನು ಕುರಿತು,

"ಡ್ರೈವರ್ ಈಗ ಕಾರನ್ನು ಹಿಂದಕ್ಕೆ ತಿರುಗಿಸು. ಜಾಗ್ರತೆ ರಹಸ್ಯ ಮಂದಿರದ ಬಳಿ ಹೋಗಿ ಸೇರೋಣ. ಬಹಳ ಕತ್ತಲಾಗುತ್ತಾ ಬಂತು. ಅವರೂ ಈಗ ಹೊರಟುಹೋಗಿರಬೇಕು."

ಡ್ರೈವರು ಕಾರನ್ನು ಹಿಂತಿರುಗಿಸಿದ. ಕಾರು ಬರುತ್ತಲೇ ಇತ್ತು.

ನಳಿನಿ ಮನಸ್ಸು ಬಹಳ ಕೆಟ್ಟಿತು. "ಇನ್ನು ಸತ್ತರೂ ಚಿಂತೆಯಿಲ್ಲ. ನಿಜವನ್ನು ಹೊರಗೆಡಹುವುದೇ ಸರಿ. ಇಲ್ಲವಾದರೆ ನನ್ನ ಆತ್ಮಕ್ಕೆ ಶಾಂತಿಯಿಲ್ಲ."

"ಮೊಟ್ಟ ಮೊದಲು ನನ್ನನ್ನು ಪ್ರಿಯೇ, ಪ್ರೇಯಸೀ, ಗಿಣಿಯೇ, ಮಾಣಿಕ್ಯವೇ ಎಂದು ಕೂಗಿದ ಕಾಲವು ಕೇವಲ ಎರಡು ದಿನಗಳೆ. ಈಗ ಬರಬರುತ್ತಾ ನಾನು ಈತನ ಕಣ್ಣಿಗೇಕೋ ಭೂತದಂತೆ ಕಾಣುತ್ತಿರುವಂತೆ ಕಾಣುತ್ತೆ. ನಾನು ಮಾತನಾಡಿದರೂ ಬೇಸರಿಕೆಯುಂಟಾಗುತ್ತಿದೆಯೆಂದು ಕಾಣುತ್ತೆ. ಇವನ ಸಹವಾಸ ನನ್ನ ಪ್ರಾಣದವರೆಗೂ ಬಂದುಬಿಟ್ಟಿತು.

"ಇಂತಹ ಅನುಭವ ನನಗೆ ಆಗಬೇಕಾದ್ದೇ. ಇನ್ನೂ ಹೆಚ್ಚು ಕಷ್ಟ ಬಂದರೂ ಅದನ್ನು ನಾನು ನಿರಾಕರಿಸುವವಳಲ್ಲ. ಆದರೆ ಈ ಲೋಕದಲ್ಲಿ ನಾನು ಮಾತ್ರವಲ್ಲ, ನನ್ನಂತಹ ಎಷ್ಟೋ ನರ್ಸ್‌ಗಳು ಸಹಸ್ರಾರು ಮಂದಿ ಈ ಲೋಕದಲ್ಲಿರಬೇಕು. ಆದರೆ ಅವರಿಗೂ ಈ ಕಷ್ಟ, ಈ ದುರ್ಬುದ್ಧಿ ಬೇಡ ವೆಂದು ಪ್ರಾರ್ಥಿಸುತ್ತಿದ್ದೇನೆ" ಎಂದುಕೊಂಡಳು.

ಕಾರು ಕಾಲುದಾರಿಯಲ್ಲಿ ಪ್ರವೇಶಿಸಿತು. ಕಾಲುದಾರಿಯಲ್ಲಿ ಹಳ್ಳ, ದಿಣ್ಣೆ, ಕೆಸರು ಹೇಳತೀರದು. ಕಾರು ಓಡಿಸುವವನು ಸ್ವಲ್ಪ ಏಮಾರಿದನೆಂದರೆ ಕಾರೇ ತಲೆಕೆಳಕಾಗಬೇಕು. ಹಾಗಿತ್ತು ಆ ದಾರಿ.

ಕಾರು ಒಂದು ಬಂಡೆ ಬಳಿ ನಿಂತಿತು. ನಳಿನಿ ಆ ಜಾಗವನ್ನು ನೋಡಿದಳು. ಆಕೆಯ ಮನಸ್ಸಿನಲ್ಲಿ,

"ರಾಜ್ ನನ್ನನ್ನು ಈ ಕಾಗೆ ಕೂಗದ ಕಾಡಿನಲ್ಲಿ ಕರೆದುಕೊಂಡು ಬಂದಿದ್ದಾನೆ. ಒಂದು ವೇಳೆ ನನ್ನನ್ನು ಇಲ್ಲೇ ಏನಾದರೂ ಮಾಡುತ್ತಾನೋ ಏನೋ? ರಹಸ್ಯ ನನಗೂ ತಿಳಿದಿದೆ. ವಿಷಪ್ರಯೋಗಮಾಡಿದವಳು ನಾನೇ. ಈ ವಿಷಯವು ವಾರ್ಡ್ ಬಾಯ್ ಬಾಷಾನಿಗೂ ಗೊತ್ತಿದೆ. ಆದಕ್ಕಾಗಿ ಬಾಷಾವನ್ನೂ ನನ್ನನ್ನೂ ಕೊಂದುಬಿಟ್ಟರೆ ತನಗೆ ಯಾವ ಕಷ್ಟವೂ ಇರುವುದಿಲ್ಲವೆಂದುಕೊಂಡು ನನ್ನಲ್ಲಿ ಒಳ್ಳೆಯ ಮಾತನ್ನಾಡಿ ಇಲ್ಲಿಗೆ ಕರೆದು ಕೊಂಡು ಬಂದಿರಬೇಕೆಂದು ಕಾಣುತ್ತದೆ" ಎಂದುಕೊಂಡಳು.

ಆದರೆ ನಳಿನಿ ಅಂದುಕೊಂಡಂತೆ ಆಗಲಿಲ್ಲ. ರಹಸ್ಯ ಮಂದಿರದ ಬಾಗಿಲ ಬಳಿ ನಿಂತಿತು ಕಾರು. ಕಾರಿನಿಂದಿಳಿದನು ರಾಜ್. ನಳಿನಿಯೂ ಆತ ನೊಂದಿಗೆ ಇಳಿದಳು.

ರಹಸ್ಯ ಮಂದಿರದಿಂದ ರಜಾಕ್ ಸರ್ರನೆ ಬಂದು ರಾಜ್‌ನನ್ನು ಜಾಗ್ರತೆ ಒಳಗೆ ಕರೆದುಕೊಂಡುಹೋದ.

ಕಾರು ಹೊರಗಡೆಯೇ ನಿಂತಿತ್ತು. ಕಾರಿನಲ್ಲಿದ್ದ ಪೆಟ್ರೋಲನ್ನು ತೆಗೆದು ಕಾರಿನ ಮೇಲೆಲ್ಲಾ ಸುರಿದು ಬೆಂಕಿಯನ್ನಿಟ್ಟರು. ಕಾರು ಧಗ ಧಗಿಸುತ್ತಿತ್ತು.

ಕಾರಿಗೆ ಬೆಂಕಿಯಿಡುವಾಗಲಂತೂ ರಾಜ್ ಕಕ್ಕಾಬಿಕ್ಕಿಯಾದ.

"ಅಯ್ಯೋ, ಹದಿಮೂರು ಸಾವಿರ ಸುರಿದಿದ್ದೇನೆ ರಜಾಕ್, ಕಾರನ್ನು ಸುಡಬೇಡ."

"ಹದಿಮೂರು ಸಾವಿರವಲ್ಲ, ಹದಿಮೂರು ಲಕ್ಷದ ಕಾರಾದರೂ ಈಗ ಸುಟ್ಟುಬಿಡಬೇಕಾದ್ದೇ."

ಕಾರು ಉರಿಯುತ್ತಲೇ ಇತ್ತು. ರಜಾಕ್ ಡ್ರೈವರನ್ನೂ ರಹಸ್ಯ ಮಂದಿರದ ಒಳಗಡೆ ಕರೆದುಕೊಂಡು ಸ್ವಿಚ್ಚನ್ನು ಹಾಕಿದನು. ಪುನಃ ಆ ಬಾಗಿಲು ಮರೆಯಾಗಿ ಬಂಡೆಯಂತೆ ಕಾಣಿಸಿತು.

ಕಾರು ಕಾಲುದಾರಿಯಲ್ಲಿ ಪ್ರವೇಶಿಸಿದ್ದೆ ದಾರಿಯಲ್ಲಿ ಕಾದಿದ್ದ ಜನರು ಕಾರನ್ನು ಹಿಂಬಾಲಿಸಿ ಬರುತ್ತಿದ್ದರು. ನಿಲ್ಲಿಸುವಂತೆಯೂ ಹೇಳುತ್ತಿದ್ದರು.

ಆದರೂ ಡ್ರೈವರನ ಸಾಮರ್ಥ್ಯದ ಮೇಲೆ ಕಾರು ಅವರ ಕೈಗೆ ಸಿಕ್ಕದೆ ಅದೆಷ್ಟೋ ಬೇಗನೆ ಹೊರಟುಹೋಗಿತ್ತು.

ಕಾರನ್ನು ಹಿಂಬಾಲಿಸಿದವರು ಎರಡು ಮೈಲಿಗಳ ಮೇಲೆ ನಡೆದ ನಂತರ ಕಾರು ಬೆಂಕಿ ಹತ್ತಿ ಉರಿಯುತ್ತಿದ್ದುದು ಕಾಣಿಸಿತು.

ಬರುತ್ತಿದ್ದವರು ಕಾರು ಉರಿಯುತ್ತಿದ್ದುದನ್ನು ಕಂಡು ಓಡಿದರು.

ಹತ್ತಿರ ಹೋಗಿ ನೋಡಿದರು. ಕಾರು ಉರಿಯುತ್ತಲೇ ಇತ್ತು. ಬೆಂಕಿಯನ್ನು ಆರಿಸಲು ಪ್ರಯತ್ನಿಸಿದರು. ಆದರೆ ಪಕ್ಕದಲ್ಲೆಲ್ಲೂ ನೀರು ಸಿಗಲಿಲ್ಲ. ಅಸಹಾಯಕರಾಗಿ ಪುನಃ ಬೇಗಬೇಗನೆ ಹಿಂತಿರುಗಿದರು.

ಕಾದಿದ್ದ ಥಾಮಸ್‌ರವರು ಅವರನ್ನು ಕುರಿತು ವಿಷಯವೇನೆಂದು ಕೇಳಿದರು.

"ನಾವು ಕಾರನ್ನು ಹಿಂಬಾಲಿಸಿಕೊಂಡೇ ಆದಷ್ಟು ಜಾಗ್ರತೆ ಹೋದೆವು. ಆದರೆ ನಾವು ಕಾರನ್ನು ಸಮೀಪಿಸುವಷ್ಟರಲ್ಲಿ ಕಾರಿನಲ್ಲಿದ್ದ ಡ್ರೈವರ್ ಮತ್ತು ಮುಸುಕುಹಾಕಿಕೊಂಡು ಕೂತಿದ್ದವರು ಕಾರಿನಲ್ಲೇ ಬೆಂಕಿಗೆ ಆಹುತಿಯಾಗಿರಬೇಕೆಂದು ಕಾಣುತ್ತೆ. ಕಾರಿನ ನಂಬರನ್ನು ಗುರ್ತಿಸಿಕೊಳ್ಳಲು ಪ್ರಯತ್ನಿಸಿದೆವು. ಅದೂ ಸರಿಯಾಗಿ ತಿಳಿಯಲಿಲ್ಲ" ಎಂದರು.

"ಬಹಳ ಹುಷಾರಿನ ಕಾನ್‌ಸ್ಟೇಬಲರಯ್ಯಾ, ನೀವು !" ಎಂದುಕೊಂಡು ಥಾಮಸ್‌ರವರು ಸ್ಟೇಷನ್‌ಗೆ ಹಿಂತಿರುಗಿದರು.

ಸ್ಟೇಷನ್ನಲ್ಲಿ ಜೊತೆಗೆ ಮಾತಾಡಲು ಇನ್ಸ್‌ಪೆಕ್ಟರ್ ಬಜ್ಜಯ್ಯನವರೂ ಇಲ್ಲ.

ಬಜ್ಜಯ್ಯನವರು ಎಲ್ಲಿಗೆ ಹೋದರೆಂಬುದು ಸಹಾ ಥಾಮಸ್‌ರವರಿಗೆ ತಿಳಿಯದು.

ಸುಮ್ಮನೆ ಒಂದು ಕಡೆ ಯೋಚನಾಗ್ರಸ್ಥರಾಗಿ ಕೂತುಬಿಟ್ಟರು.

"ಬಜ್ಜಯ್ಯನವರು ಎಲ್ಲಿಗೆ ಹೋಗಿದ್ದಾರಯ್ಯಾ?" ಎಂದು ಅಲ್ಲಿದ್ದ ಕಾನ್ಸ್ಟೇಬಲನ್ನು ಕೇಳಿದರು.

"ಅವರೆಲ್ಲಿ ಹೋದರೋ ನಮಗೆ ತಿಳಿಯದು. ಅವರು ಮಾತ್ರ ಒಬ್ಬಂಟಿಗರಾಗಿ ಹೋದಹಾಗಿತ್ತು" ಎಂದರು.

"ಮನೆಯಲ್ಲಿರಬೇಕು. ನಾನು ಕರೆಯುತ್ತಿದ್ದೇನೆಂದು ಹೇಳಿ ಕರೆದುಕೊಂಡು ಬಾ" ಎಂದು ಹೇಳಿ ಒಬ್ಬ ಕಾನ್ಸ್ಟೇಬಲನನ್ನು ಕಳುಹಿಸಿದರು.

ಥಾಮಸ್‌ರವರಿಗೇಕೋ ಬಹಳ ಬೇಜಾರಾಯಿತು. ಪಕ್ಕದ ಹೋಟಿಲಿನಿಂದ ಒಂದು ಓವಲ್‌ಟಿನ್‌ನನ್ನು ತರಿಸಿ ಕುಡಿದು ಒಂದು ಸಿಗರೇಟನ್ನು ಬಾಯಲ್ಲಿಟ್ಟು ಹೊಗೆಬಿಡುತ್ತಿದ್ದರು.

ಕಾನ್ಸ್ಟೇಬಲ್ ಓಡುತ್ತಾ ಬಂದು "ಸಾರ್, ಇನ್ಸ್ಪೆಕ್ಟರ್ ಸಾಹೇಬರು ಮನೆಯಲ್ಲೂ ಇಲ್ಲ. ಮನೆಗೆ ಇನ್ನೂ ಬರಲಿಲ್ಲವೆಂದು ಹೇಳಿದರು ಸಾರ್" ಎಂದನು.

"ಓಹೋ. ಸೆಕೆಂಡ್ ಷೋ ಸಿನಿಮಾಕ್ಕೆ ಹೋಗಿರಬೇಕೆಂದು ಕಾಣುತ್ತೆ. ಇವರಿಗೇತಕ್ಕೋ ಬರಬರುತ್ತಾ ಸಿನಿಮಾ ಹುಚ್ಚು ಹೆಚ್ಚಾಯಿತು" ಎಂದುಕೊಂಡು ಸುಮ್ಮನಿದ್ದುಬಿಟ್ಟರು.

## ೧೧

"ಅನ್ಯಾಯವಾಗಿ ಹಾಳು ಮಾಡಿದಿರಲ್ಲಾ ರಜಾಕರೇ. ಹದಿಮೂರು ಸಾವಿರದ ಕಾರಿಗೆ ಬೆಂಕಿ ಹಚ್ಚಿಬಿಟ್ಟರಲ್ಲಾ ?"

"ಸುಮ್ಮನಿರಿ ರಾಜ್ಞ. ನನ್ನ ಭಾಗ್ಯ ಚೆನ್ನಾಗಿದೆ. ಕಾರಿನ ರೂಪವನ್ನು ಒಂದೆರಡು ಬಾರಿ ನೋಡಿದ್ದೆನಾದ್ದರಿಂದ ಕಾರಿನ ಮೇಲೆ ಗುಂಡುಹಾರಿಸಲಿಲ್ಲ. ಇಲ್ಲದಿದ್ದರೆ ಕಾರು ಇಲ್ಲಿ ಬಂದು ನಿಂತದ್ದೇ ತಡ, ಡ್ರೈವರ್, ನೀನು ಮತ್ತು ಈಕೆಯನ್ನು ಸುಟ್ಟುಬಿಡುತ್ತಿದ್ದೆ."

"ಕಾರಣವೇನು ರಜಾಕ್ ? ನಮ್ಮ ವಿನಃ ಈ ದಾರಿ ಬೇರೆ ಯಾರಿಗೂ ತಿಳಿಯದೆಂಬುದು ನಿಮಗೆ ಗೊತ್ತಿದ್ದೂ ನೀವು ಹೀಗೆ ಆತುರಪಟ್ಟಿದ್ದೀರೆಂದರೆ ನನಗೇಕೋ ತುಂಬಾ ಆಶ್ಚರ್ಯವಾಗುತ್ತೆ."

"ಹೋಗಲಿ ಕುಳಿತುಕೊಳ್ಳಿ."

ಮೂವರೂ ಕುಳಿತುಕೊಂಡರು. ರಜಾಕನನ್ನು ಕಂಡ ನಳಿನಿ ಬೆಚ್ಚಿ ಬಿದ್ದಳು. ಆ ಎತ್ತರ, ದಪ್ಪ ಮೀಸೆ, ಕ್ರೂರ ಮುಖ, ವಕ್ರದಂತ ಇವುಗಳನ್ನು ನೋಡಿ ನಳಿನಿ ಕಣ್ಣು ಮುಚ್ಚಿಕೊಳ್ಳುವುದರಲ್ಲಿದ್ದಳು. ಒಮ್ಮೆ ರಜಾಕನನ್ನು ನೋಡಿದವಳು ಪುನಃ ಆತನನ್ನು ನೋಡಲೇ ಇಲ್ಲ. ಕಣ್ಣಿನ ದೃಷ್ಟಿಯನ್ನು ನೆಲದ ಕಡೆ ಇಟ್ಟಿದ್ದಳು.

ಕಾಫಿ ಫಲಾಹಾರಗಳ ನಂತರ ರಜಾಕ್ ಹೇಳುವುದಕ್ಕೆ ಮೊದಲಾದ.

"ಕೇಳು ರಾರ್ಜ. ಇಂದು ನಾನು ತಪ್ಪಿ ಬಂದದ್ದು ಒಂದು ಗಂಡಾಂತರ ವೆಂದೇ ಹೇಳಬೇಕು."

"ಎಲ್ಲಾದರೂ ಸಿಕ್ಕಿಕೊಂಡಿರೇನು ?"

"ಸಿಕ್ಕುವುದರಲ್ಲಿದ್ದೆ. ಆದರೆ ತಪ್ಪಿಸಿಕೊಂಡು ಹೇಗೆ ಬಂದೆನೋ ಎಂಬುದು ನನಗೇ ಸಂದೇಹವಾಗಿದೆ."

"ಹೇಳಿ ರಜಾಕರೇ. ನಡೆದದ್ದಾದರೂ ವಿವರಿಸಿ ಹೇಳಿ."

"ಹೇಳುತ್ತೇನೆ. ಈ ದೇವಿಯವರು ಯಾರು ?"

ನಳಿನಿ ತಲೆ ತಗ್ಗಿಸಿಕೊಂಡವಳು ಎತ್ತಲೇ ಇಲ್ಲ.

"ಇವರೇ ನನ್ನ ಪ್ರಾಣಸ್ನೇಹಿತೆ ನರ್ಸ್ ನಳಿನಿ. ನಿಮ್ಮ ಪರಿಚಯ ಮಾಡಿಸಲು ಇಲ್ಲಿಗೆ ಕರೆದುಕೊಂಡು ಬಂದಿದ್ದೇನೆ. ನೀವು ಅವಸರವಸರವಾಗಿ ನಮ್ಮ ಮೇಲೆಯೇ ಗುಂಡು ಹಾರಿಸುವ ವಿಷಯವನ್ನು ಪ್ರಸ್ತಾಪಿಸಲು ಮೊದಲುಮಾಡಿದಿರಿ. ನಿಮ್ಮ ಮಾತು ಮುಗಿದನಂತರ ನಳಿನಿಯ ಪರಿಚಯ ಮಾಡೋಣವೆಂದು ಸುಮ್ಮನಾದೆ."

"ಬಹಳ ಸಂತೋಷ."

ನಳಿನಿಯಂತೂ ಮಾತನಾಡಲೇ ಇಲ್ಲ.

"ಹೇಳುತ್ತೇನೆ ಕೇಳು ರಾರ್ಜ. ನಾನು ಪೇಟೆಯ ಕಡೆಯಿಂದ ಸುತ್ತು ಹಾಕಿಕೊಂಡು ಬರುತ್ತಿದ್ದೆ. ನಿನ್ನ ಕಾರು ಯಾವುದೋ ಮನೆಯ ಮುಂದೆ ನಿಂತಿರುವುದಾಗಿ ಕಾಣಿಸಿತು. ಅದಕ್ಕಾಗಿ ಆ ದಾರಿಯಲ್ಲೇ ಬರುತ್ತಿದ್ದೆ. ದಾರಿಯಲ್ಲಿ ನನ್ನ ಜನ್ಮವಿರೋಧಿ ಪತ್ತೇದಾರ ಥಾಮಸ್ ನಿಂತಿದ್ದುದು ನನಗೆ ತಿಳಿದಿರಲಿಲ್ಲ. ನಾನು ಅದೇ ದಾರಿಯಲ್ಲಿ ಬಂದೆ. ಮುಸುಕು ಹಾಕಿಕೊಂಡಿದ್ದೆ."

"ಮೊದಲು ಆತನು ನನ್ನನ್ನು ಗಮನಿಸಲಿಲ್ಲ. ನಾನು ಆತನಿಗೆ ಮುಖ ತೋರಿಸದಂತೆಯೇ ಆತನನ್ನು ಕಂಡದ್ದೇ ಹೆಚ್ಚು ಬೇಗನೆ ನಡೆಯುತ್ತಿದ್ದೆ.

“ಸ್ವಲ್ಪ ದೂರ ಬಂದು ಆತನು ಬರುತ್ತಿದ್ದಾನೋ ಇಲ್ಲವೋ ಎಂಬು ದಾಗಿ ಹಿಂತಿರುಗಿ ನೋಡಿದೆ. ಆತ ನನ್ನನ್ನು ಹಿಂಬಾಲಿಸುತ್ತಾ ಬರುತ್ತಿದ್ದಂತೆ ಭಾಸವಾಯಿತು.

“ಸ್ವಲ್ಪ ಜೋರಾಗಿಯೇ ಹೆಜ್ಜೆಯನ್ನಿಟ್ಟೆ. ಆತನು ಸರ್ಕಲಿನಲ್ಲಿದ್ದ ಪೋಲೀಸರಿಬ್ಬರನ್ನು ಜೊತೆಗೆ ಕರೆದುಕೊಂಡುಬಂದ. ಆ ಪೋಲೀಸರಿಬ್ಬರೂ ನನ್ನನ್ನು ಹಿಡಿಯಲು ಓಡಿಬರುತ್ತಿದ್ದಂತೆ ಕಾಣಿಸಿತು.”

“ನಾನೂ ಓಡಲು ಮೊದಲಾದೆ. ಮತ್ತೊಂದು ಸರ್ಕಲ್ ಬಂದಿತು. ಅಲ್ಲಿನ ನಾಲ್ಕಾರು ಪೋಲೀಸರು ಇವರೊಂದಿಗೆ ಸೇರಿ ನನ್ನನ್ನು ಹಿಂಬಾಲಿಸಿದರು.

“ದಾರಿಯಲ್ಲಿ ಒಬ್ಬ ಮಂತ್ರವಾದಿ ರೋಡಿನ ಮಗ್ಗುಲಲ್ಲಿ ಆಟದ ಪ್ರದರ್ಶನ ಮಾಡುತ್ತಿದ್ದ. ಗುಂಪು ಜನರು ಹೆಚ್ಚಾಗಿಯೇ ಇದ್ದರು. ಆ ಗುಂಪಿನಲ್ಲಿ ನಾನೂ ಹೋಗಿ ನಿಂತೆ.”

“ಗುಂಪಿನ ಬಳಿಯೇ ಪೋಲೀಸರೆಲ್ಲರೂ ಬಂದು ಸುತ್ತಲೂ ನಿಂತು ಕೊಂಡರು. ನಾನು ಹಾಕಿಕೊಂಡಿದ್ದ ಮುಸುಕನ್ನು ತೆಗೆದಿದ್ದೆ. ಪೋಲೀಸ್ ನವರು ನನ್ನನ್ನು ಗುರ್ತಿಸಲಿಲ್ಲ. ಮೆಲ್ಲನೆ ಆ ಜಾಗವನ್ನು ಬಿಟ್ಟು ಕದಲಿ ಅರ್ಧ ಫರ್ಲಾಂಗು ಬಂದಿರಬೇಕು. ಪುನಃ ಅವರು ನನ್ನನ್ನು ಹಿಂಬಾಲಿಸಿದರು.

“ಬಹಳ ದೂರ ಹಾಗೆಯೇ ಬರುತ್ತಲೇ ಇದ್ದರು. ನಾನು ಸರ್ರನೆ ಓಡಿಬಂದು ಒಂದು ಹಳ್ಳದಲ್ಲಿಳಿದುಬಿಟ್ಟೆ. ಅವರು ಸುತ್ತಾಡಿ ಅಲ್ಲೇ ನಿಂತು ಹೊಂಚು ಹಾಕಿದರು. ನಾನು ಆ ಪೋಲೀಸರ ಕೈಗೆ ಸಿಕ್ಕಿಲಿಲ್ಲ.

“ಅವರು ಮುಂದಕ್ಕೆ ನಡೆದು ಹೋದರು. ನಾನು ಬೇರೆ ಕಡೆಯ ದಾರಿಯಿಂದ ಈ ರಹಸ್ಯ ಮಂದಿರದ ಕಡೆ ಬಂದೆ. ಹಾಗೂ ಒಬ್ಬ ಮಾತ್ರ ಹಿಂಬಾಲಿಸಿದ್ದ. ಆದರೂ ಅವನ ಕಣ್ಣಿಗೆ ಮಣ್ಣೆರಚಿ ನಾನು ಇಲ್ಲಿಗೆ ಬಂದು ಸೇರಿದೆ. ಆಗಿನಿಂದಲೂ ಈ ಕಡೆ ಅನೇಕ ಪೋಲೀಸರು ಬಂದು ಹೊಂಚು ಹಾಕಿಕೊಂಡು ಹೋಗುತ್ತಿರುವುದನ್ನು ಈ ರಂಧ್ರದ ಮೂಲಕ ನೋಡುತ್ತಲೇ ಇದ್ದೇನೆ” ಎಂದು ಬಂಡೆಯ ಒಳಗಡೆಯಿಂದ ಮಾಡಿಟ್ಟಿರುವ ರಂಧ್ರವನ್ನು ತೋರಿಸಿದನು ರಜಾಕ್. ಆ ರಂಧ್ರದಿಂದ ಹೊರಗಡೆ ಸುತ್ತಾಡುವವರೂ ಮತ್ತು ಬಯಲು ಪ್ರದೇಶಗಳಷ್ಟೊಂದೂ ಚೆನ್ನಾಗಿ ಕಾಣಿಸುತ್ತಿತ್ತು.”

“ಸರಿ, ಮುಂದೆ ಹೇಳು ರಜಾಕ್.”

"ನಂತರ, ಈ ಪೋಲೀಸಿನವರನ್ನು ಹೊಡೆದು ಪ್ರಯೋಜನವೇನಿದೆ? ಥಾಮಸ್ ಸಿಕ್ಕಬೇಕು. ಹೊಡೆಯಬೇಕು ಎಂದು ಸುಮ್ಮನಿದ್ದೆ. ಆದರೆ ಆತನು ಈ ಕಡೆ ಬರಲೇ ಇಲ್ಲ. ನಾನು ಇಲ್ಲಿಗೆ ಓಡಿಬಂದ ವಿಷಯವನ್ನು ನೋಡಿದರೆ ಈಗಲೂ ನನ್ನ ಹೃದಯದಲ್ಲಿ ನಡುಕ ಹುಟ್ಟುವಂತಿದೆ ರಾರ್ಜ."

"ಥಾಮಸ್ ನಿಂತಿದ್ದುದು ಕಾಲುದಾರಿ ಬಳಿಯಿರುವ ಮೈನ್ ರೋಡಿನಲ್ಲಿ. ನೀನು ಹೇಗಿದ್ದರೂ ಮೈನ್ ರೋಡಿನಲ್ಲಿ ಸಿಕ್ಕುತ್ತೀಯೆಂದು ತಿಳಿದು ಅವನು ಅಲ್ಲೇ ನಿಂತಿದ್ದ ಹಾಗೆ ಕಾಣುತ್ತೆ. ನೀನು ಇಲ್ಲಿ ದಗಾ ಹಾಕಿ ಬಂದು ಸೇರಿಕೊಂಡೆ. ನನ್ನ ಸ್ಥಿತಿಯೇನಾಗಿತ್ತು ಗೊತ್ತೇ?"

"ನಿನ್ನ ವಿಷಯ ಏನಾಗಿತ್ತು ರಾರ್ಜ?"

"ಅದೂ ಭಯಂಕರ. ಥಾಮಸ್‌ನನ್ನು ಕಂಡು ನಿನಗೊಂದು ವಿಧವಾದ ಭಯವಾದರೆ, ನನಗೆ ಬೇರೆ ವಿಧವಾದ ಭಯವಾಗಿತ್ತು."

"ನಾನು ನಳಿನಿಯನ್ನು ಕರೆದುಕೊಂಡು ಕಾರಿನಲ್ಲಿ ಬರುತ್ತಿದ್ದೆ. ದಾರಿಯಲ್ಲಿ ನಿನ್ನ ಶಿಷ್ಯ ರಹಮರ್ಾಖರ್ಾ ಯಾರದೋ ಚೈನನ್ನು ಹೊಡೆದು ಸಿಕ್ಕಿ ಪೇಚಾಡುತ್ತಿದ್ದ. ಪೋಲೀಸಿನವರು ಅವನನ್ನು ಮುತ್ತಿಕೊಂಡಿದ್ದರು."

ರಜಾಕ್ ಈ ಮಾತನ್ನು ಕೇಳಿ ಬೆಚ್ಚಿಬಿದ್ದ. "ರಹಿಮರ್ಾಖರ್ಾ ನಿಜವಾಗಿಯೂ ಸಿಕ್ಕಿದ್ದಾನೆಯೇ? ಈಗ ಅವನು ನಮ್ಮಲ್ಲಿಲ್ಲವೇ?" ಎಂದು ಮಜೀದನನ್ನು ಕರೆದು ಕೇಳಿದನು. ಮಜೀದನು ಬಂದು,

"ಮಾಲೀಕ್, ರಹಿಮರ್ಾಖರ್ಾ ಎಲ್ಲೋ ಬಹಳ ಏಟು ತಿಂದು ಬಂದಂತಿದ್ದಾನೆ. ಮೈಯೆಲ್ಲವೂ ಬಲು ನೋವೆಂದು ಗೋಳಾಡುತ್ತಿದ್ದ. ಬ್ರಾಂದಿ ಕುಡಿಸಿದೆ. ಈಗ ಸ್ವಸ್ಥವಾಗಿ ನಿದ್ರೆ ಹೋಗುತ್ತಿದ್ದಾನೆ. ಕಾಲಿಗೆ ಬಿದ್ದಿರುವ ಪೆಟ್ಟು ಅಪಾಯಕರವಾದದ್ದೆಂದೇ ಹೇಳಬೇಕು."

"ಹೇಗೋ ಬಚಾಯಿಸಿಕೊಂಡು ಬಂದಿದ್ದಾನಲ್ಲಾ, ಅಷ್ಟೇ ಸಾಕು."

"ಬಲು ಸಾಹಸಗಾರನೇ ಇರಬೇಕು ರಜಾಕ್, ನಿನ್ನ ಶಿಷ್ಯ ರಹಮರ್ಾ. ಬಹಳ ಕಷ್ಟಬಿದ್ದು ಇಲ್ಲಿಗೆ ಬಂದಂತಿದೆ. ಇನ್ನು ಒಂದೆರಡು ವಾರ ಕಸುಬಿಗೆ ಕಳುಹಿಸಬೇಡಿ."

"ಒಂದುವಾರವೇನು? ಒಂದು ವರ್ಷ ಬೇಕಾದರೂ ಸುಮ್ಮನೆ ಕೂತು ತಿನ್ನಲಿ. ಅವನಿಗೆ ಅನ್ನ ಹಾಕಲು ನಾನು ಅಂಜುವವನಲ್ಲ."

"ಸರಿ. ಮುಂದೆ ಆದದ್ದು ತಿಳಿಸುತ್ತೇನೆ ಕೇಳು. ಕಾರು ಬರುತ್ತಿತ್ತು.

ನ್ಯೂ ರೋಡಿನ ಮಗ್ಗುಲಲ್ಲಿದ್ದ ಕಾಲುದಾರಿಯ ಕಡೆ ಡ್ರೈವರ್ ಸ್ಟೇರಿಂಗ್ ತಿರುಗಿಸುವುದರಲ್ಲಿದ್ದ. ಅಷ್ಟರಲ್ಲಿ ಥಾಮಸ್ ನಿಂತಿರುವುದನ್ನು ನೋಡಿದ ನಾನು ನಳಿನಿಯ ತಲೆಯನ್ನು ಅದುಮಿ ನಾನೂ ಬಗ್ಗಿದೆ. ಆತನು ನಮ್ಮಿಬ್ಬರನ್ನು ನೋಡಲಿಲ್ಲ. ಕಾರನ್ನು ನೆಟ್ಟಗೆ ನ್ಯೂ ರೋಡಿನಲ್ಲೇ ಓಡಿಸು ಎಂಬುದಾಗಿ ಡ್ರೈವರನಿಗೂ ಹೇಳಿದೆ. ಅವನೂ ಹಾಗೆಯೇ ಮಾಡಿದ. ಥಾಮಸ್ ಕಾರನ್ನು ನಿಲ್ಲಿಸುವಂತೆ ಕೂಗಾಡಿದರೂ ಪ್ರಯೋಜನವಾಗಲಿಲ್ಲ.

"ಪುನಃ ಸ್ವಲ್ಪ ದೂರ ಹೋಗಿ ನೋಡಿದೆವು. ನಳಿನಿಯೂ ಭಯಗೊಂಡವಳಂತೆ ಕಾಣಿತು. ಕತ್ತಲಾಗುತ್ತಾ ಬಂದಿತ್ತು. ಹಿಂತಿರುಗಿದೆವು. ಆಗಲೂ ಥಾಮಸ್ ಅಲ್ಲೇ ಕಾದಿದ್ದ. ಕಾಲುದಾರಿಯಲ್ಲಿ ಕಾರು ಕಾಲಿಟ್ಟದ್ದೇ ಪೋಲೀಸರು ನಿಲ್ಲುವಂತೆ ಸಿಳ್ಳು ಹೊಡೆದರು. ನಾವು ಕಾರನ್ನು ನಿಲ್ಲಿಸದೇ ಹೊರಟು ಬರುತ್ತಿದ್ದೆವು. ಡ್ರೈವರನ ಸಾಮರ್ಥ್ಯದಿಂದ ಜಾಗ್ರತೆ ಇಲ್ಲಿ ಬಂದು ಸೇರಿದೆವು. ನಮ್ಮ ಅದೃಷ್ಟಕ್ಕೆ ನೀವು ಎದುರಿಗೆ ಇದ್ದಿರಿ. ಬೇಗನೆ ಬಾಗಿಲು ತೆಗೆದುಕೊಂಡಿರಿ. ಇಂದು ನಾನು ಒಳ್ಳೆಯವರ ಮುಖವನ್ನೇ ಕಂಡದ್ದೆಂದು ಹೇಳಬೇಕು. ಏನಾದರೂ ಒಂದು ಕಡೆ ಅದೃಷ್ಟ— ಮತ್ತೊಂದು ಕಡೆ ದುರಾದೃಷ್ಟ ಎಂದೇ ಹೇಳಬೇಕು ರಜಾಕ್."

"ಅದೃಷ್ಟ, ನೀನು ತಪ್ಪಿಸಿಕೊಂಡು ಇಲ್ಲಿ ಬಂದು ಸೇರಿದ್ದು. ದುರದೃಷ್ಟ ನಿನ್ನ ಕಾರು ಸುಟ್ಟು ಹೋದದ್ದು. ಹಾಗೇ ತಾನೇ ?"

"ಹೌದು ರಜಾಕ್, ಬೀಬೀಜಾನ್ ಎಲ್ಲಿ ?"

ಆ ಮಾತಿಗೆ ರಜಾಕ್ ಉತ್ತರ ಕೊಡಲಿಲ್ಲ. ನಳಿನಿಯಿರುವಳೆಂಬುದನ್ನು ತಿಳಿದು ಉತ್ತರ ಕೊಡಲಿಲ್ಲ. ಅದಕ್ಕೆ ಬದಲಾಗಿ ಆ ಮಾತನ್ನು ಮರೆಸುವಂತೆ ಕಣ್ಸನ್ನೆ ಮಾಡಿ, ನಳಿನಿ ಇದ್ದಾಳೆ ಆಕೆಯೆದುರಿಗೆ ಈ ಮಾತನ್ನಾಡಬೇಡ ಎನ್ನುವಂತೆ ಸೈಗೆ ತೋರಿಸಿ,

"ಊಟ ಮಾಡುವಿಯಂತೆ ಬಾ ರಾಜ್."

"ಊಟ ಮಾಡುವುದಕ್ಕೆ ಎದ್ದು ಬರಲು ನನ್ನಿಂದ ಸಾಧ್ಯವಿಲ್ಲ ರಜಾಕ್. ಇಲ್ಲೇ ಯಾರ ಕೈಲಾದರೂ ಟೇಬಲ್ಲಿನ ಮೇಲೆಯೇ ತಂದಿಡಲು ಹೇಳು."

ರಜಾಕ್ ಮಜೀದನನ್ನು ಕರೆದು ಅನ್ನ, ಸಾರು ತೆಗೆದುಕೊಂಡು ಟೇಬಲ್ಲಿನ ಮೇಲೆ ತಂದಿಡಲು ಹೇಳಿದನು.

"ಕೈಕಾಲು ತೊಳೆದುಕೋ ನಳಿನಿ" ಎಂದನು ರಾಜ್.

ನಳಿನಿ ಮುಖ ಸಣ್ಣಗೆ ಮಾಡಿಕೊಂಡು ಕುಳಿತಿದ್ದಳು. ಉತ್ತರ ಕೊಡ ಲಿಲ್ಲ.

"ಹೋಗಲಿ. ಖಾಲಿ ಪ್ಲೇಟಿನಲ್ಲೇ ತೊಳೆದರಾಯಿತು."

ಪ್ಲೇಟಿನಲ್ಲೇ ಕೈತೊಳೆದಳು ನಳಿನಿ. ಮಜೀದ್ ತಂದಿಟ್ಟ ಅನ್ನ ಮತ್ತು ಮಾಂಸದ ಸಾರನ್ನು ತಿಂದಳು.

ರಾರ್ಜ, ತಾನು ಜಾಗ್ರತೆಯಾಗಿ ಊಟಮಾಡಿ ನಳಿನಿಯನ್ನು ಕುರಿತು,

"ನಳಿನಿ, ಇಲ್ಲೇ ಕೂತಿರು. ಒಂದು ನಿಮಿಷದಲ್ಲಿ ಬಂದುಬಿಡುತ್ತೇನೆ."

"ಜಾಗ್ರತೆ ಬಂದುಬಿಡಿ ರಾರ್ಜ."

"ಆಗಲಿ, ಬರುತ್ತೇನೆ" ಎಂದು ಹೇಳಿ ಒಳಗಿನ ಕೋಣೆ ಕಡೆ ಹೊರಟ.

ರಾರ್ಜಗಾಗಿ ರಜಾಕ್ ಅಲ್ಲೇ ಒಳಗಿನ ಕೋಣೆಯಲ್ಲಿ ಕಾದಿದ್ದನು. ರಾರ್ಜ ಬಂದದ್ದನ್ನು ಕಂಡು,

"ಬಾ, ರಾರ್ಜ. ಮುಂದೆ ನಿನ್ನ ತಂದೆಯ ಕೊಲೆಯ ಬಗ್ಗೆ ಏನು ಯೋಚನೆ ಮಾಡಿರುವೆ.... ?"

"ಏನೆಂದು ಹೇಳಲಿ ರಜಾಕ್. ಈಗ ನನ್ನ ತಂದೆಯು ವಿಷಪ್ರಯೋಗ ದಿಂದ ಸತ್ತುಹೋದರೆಂಬುದು ಅಕ್ಷರಶಃ ಈಗ ಬಂದಿರುವ ನರ್ಸ್ ನಳಿನಿಗೂ ಮತ್ತು ವಾರ್ಡ್‌ಬಾಯ್ ಬಾಷಾವಿಗೂ ಗೊತ್ತಿದೆ. ನಳಿನಿಗಿಂತಲೂ ಬಾಷಾ ನನ್ನನ್ನು ಬಹಳವಾಗಿ ಹೆದರಿಸಿ ಬೆದರಿಸುತ್ತಿದ್ದಾನೆ. ನಾನೂ ಈ ವಿಷಯವು ಬಟ್ಟಬಯಲಾಗದಿರಲಿ ಎಂದು ನೆನೆದು ಬಾಷಾ ಆಡುವ ಕಟುವಾದ ಮಾತು ಗಳಿಗೆಲ್ಲಾ ತಲೆ ತಗ್ಗಿಸಿಕೊಂಡಿದ್ದೇನೆ. ಎಷ್ಟು ದಿನ ಹೀಗಿರಲು ಸಾಧ್ಯ? ಎಂಬುದು ನನ್ನ ಜೀವನದಲ್ಲಿ ತೀರದ ಬೇಸರಿಕೆ ತಂದೊಡ್ಡಿದೆ ರಜಾಕ್."

"ಹೋಗಲಿ. ಈಗ ಹೇಗಿದ್ದರೂ ನರ್ಸ್ ನಳಿನಿ ಇಲ್ಲಿಗೆ ಬಂದದ್ದಾ ಯಿತು. ಇನ್ನು ಬಾಷಾವನ್ನೂ ಇಲ್ಲಿಗೇ ಕರೆದುಕೊಂಡು ಬಂದರೆ ತೀರಿತು. ಇಬ್ಬರಿಗೂ ಸ್ವರ್ಗಲೋಕದ ದಾರಿಯನ್ನು ತೋರಿಸಿಯೇ ಬಿಡಬಹುದಲ್ಲವೇ? ನೀನು ಸರಿ ಎಂದರೆ ತೀರಿತು ಅವರ ತಂಟೆ ತಕರಾರು."

"ಈಗಲೇ ಅವರಿಬ್ಬರ ಪ್ರಾಣಹತ್ಯ ಮಾಡುವುದಾದರೆ ತುಂಬಾ ಕಷ್ಟ ಕ್ಕೀಡಾಗಬೇಕಾಗುತ್ತೆ ರಜಾಕ್. ಈಗ ನನ್ನ ಮೇಲೆಯೂ ನಿನ್ನ ಮೇಲೆಯೂ ಮೇಲಿಂದ ಮೇಲೆ ಪೋಲೀಸ್ ಅಧಿಕಾರಿಗಳಿಗೂ ಪತ್ತೇದಾರರಿಗೂ ಸಿ.ಐ.ಡಿ. ಗಳಿಗೂ ಸಂದೇಹ ಹುಟ್ಟಿದೆ. ಅದನ್ನು ಪರಿಹರಿಸಿಕೊಳ್ಳಲು ಅವರು ನಮ್ಮನ್ನು

ಹಿಡಿಯಲು ಮಾಡುತ್ತಿರುವ ಪ್ರಯತ್ನ ಹೇಳತೀರದು. ನಮ್ಮ ಕೆಟ್ಟ ಸಮಯ ದಲ್ಲಿಯೂ ಒಳ್ಳೆಯದು ನಡೆಯುತ್ತಿರುವುದು ನಮಗೊಂದು ಭಾಗ್ಯವೇ ಸರಿ."

"ಹೋಗಲಿ. ಈಗ ನೀನು ಇಲ್ಲಿಯೇ ಮಲಗುತ್ತೀಯೋ ಅಥವಾ ಮನೆಗೆ ಹೋಗುವ ಯೋಚನೆಯೇನಾದರೂ ಇದೆಯೋ ?"

"ಮನೆಗೆ ಹೋಗದೆ ಹೋದರೆ, ಒಂದುವೇಳೆ ಥಾಮಸ್ ನನ್ನ ಮನೆಯ ಬಳಿ ಬಂದು ವಿಚಾರಿಸಿ ನಾನು ಮನೆಯಲ್ಲಿಲ್ಲದೆ ಹೋದುದನ್ನು ಗಮನಿಸಿ ಬಿಟ್ಟರೆ, ವಿಷಯ ತುಂಬಾ ದೂರಕ್ಕೆ ಹೋಗಬಹುದು. ಈಗ ಥಾಮಸ್ ನನ್ನನ್ನು ತೊಳೆದ ಮುತ್ತೆಂದು ನಂಬಿರುವನು. ಅವನ ಬಳಿ ನಾನು ಹಾಗೆಯೇ ನಡೆದುಕೊಂಡರೆ ನಮಗಂತೂ ಯಾವ ತೊಂದರೆಯೂ ಇರುವುದಿಲ್ಲ. ಬೇಕಾದರೆ ಇನ್ಸ್ಪೆಕ್ಟರ್ ಬಜ್ಜಯ್ಯನವರಿಗೆ ಮಾಡಿರುವಂತೆ ಥಾಮಸ್‌ಗೂ ಒಂದೆರಡು ದಿನ ನರಕಬಾಧೆ ಕೊಟ್ಟು ತನ್ನ ಪ್ರಾಣವನ್ನು ತಾನೇ ಅರ್ಪಣೆ ಮಾಡಿದಂತೆ ಮಾಡಬಹುದಲ್ಲವೆ ?"

"ಅದೇಕೆ ಹಾಗೆ ಮಾತನಾಡುತ್ತಿ ರಾಜ್ಜ ? ಇಲ್ಲಿ ಇನ್ಸ್ಪೆಕ್ಟರ್ ಬಜ್ಜಯ್ಯ ನಿಗೇನು ಕಡಿಮೆ ? ವೇಳೆವೇಳೆಗೆ ಊಟ, ತಿಂಡಿ, ಫಲಾಹಾರ ಎಲ್ಲವೂ ಇದೆ. ಒಟ್ಟಿನಲ್ಲಿ ಈಗ ಅವನ ಪ್ರಾಣ ನನ್ನ ಕೈಯಲ್ಲಿದೆ. ಉಳಿಸಬಹುದೆಂದರೆ ಉಳಿಸ ಬಹುದು. ಉರುಳಿಸಬಹುದೆಂದರೂ ಆಗದ ಕೆಲಸವೇನಲ್ಲ."

"ಈಗ ಹೇಗಿದ್ದಾರೆ ಬಜ್ಜಯ್ಯ."

"ಅವನಿಗೇನು ಧಾಡಿ. ಸೊಗಸಾಗಿದ್ದಾನೆ. ಇನ್ನೂ ಗಾತ್ರದಲ್ಲಿ ಮುಂದುವರೆಯುತ್ತಿದ್ದಾನೆಂದು ಹೇಳಬೇಕು."

"ನಾನು ಬೀಬೀಜಾ್ಗಳನ್ನು ನೋಡಿಕೊಂಡು ಬರುತ್ತೇನೆ ರಜಾಕ್" ಎಂದು ಹೇಳಿ ಪಕ್ಕದ ಕೋಣೆಯ ಬಾಗಿಲನ್ನು ತೆಗೆದು ನೆಲಮಾಳಿಗೆಯ ಕಡೆಗೆ ಹೊರಟನು ರಾಜ್ಜ.

ರಜಾಕನು ನಳಿನಿ ಕುಳಿತಿದ್ದ ಕಡೆ ಬಂದು ಮೌನವಾಗಿಯೇ ಕುಳಿತು ಯೋಚನೆಯಲ್ಲಿಯೇ ಮಗ್ನಳಾಗಿದ್ದವಳ ಮುಂದೆ ಎರಡು ಮೂರು ಬಾರಿ ಕೆಮ್ಮಿದನು. ಅವಳ ಯೋಜನೆಗಳೆಲ್ಲವನ್ನೂ ರಜಾಕ್‌ನ ಕೆಮ್ಮು ಮಾರ್ಪಡಿ ಸಿತು.

"ರಾಜ್ಜ ಹೋಗೋಣವೇ ?" ಎಂದಳು ನಳಿನಿ. ಸರಿಯಾಗಿ ನೋಡು ವಲ್ಲಿ ಆತ ರಜಾಕ್ ಆಗಿದ್ದ. ಪುನಃ ಯಾವ ಮಾತನ್ನೂ ಆಡಲಿಲ್ಲ.

"ರಾಜ್ ಈಗಲೇ ಬಂದುಬಿಡುತ್ತಾನೆ. ನಿಮಗೆ ಊಟವಾಯಿತೇ ?

ಆಗಿದೆಯೆಂಬುದಾಗಿ ತಲೆಯಲ್ಲಾಡಿಸಿದಳು.

"ತುಂಬಾ ಯೋಚನೆ ಮಾಡುತ್ತಿರುವಂತಿದೆಯಲ್ಲಾ !"

ಏನೂ ಯೋಚನೆಯಿಲ್ಲ ಎನ್ನುವಂತೆ ಕೈಯಿಂದ ಸಂಜ್ಞೆ ಮಾಡಿ ತೋರಿಸಿದಳು ನಳಿನಿ.

ನಳಿನಿಯು ಪಕ್ಕದಲ್ಲಿದ್ದ ಕುರ್ಚಿಯ ಮೇಲೆಯೇ ರಜಾಕ್ ಕುಳಿತನು. ನಳಿನಿ ಒಂದೆರಡು ಬಾರಿ ರಜಾಕನು ತನ್ನ ಪಕ್ಕದಲ್ಲಿದ್ದ ಕುಳಿತಿದ್ದಾನಲ್ಲಾ ಎಂಬುದಾಗಿ ದುರುಗುಟ್ಟಿಕೊಂಡು ನೋಡಿ ಪುನಃ ಒಂದೂ ಮಾಡಲಾರದೆ ಹಾಗೆಯೇ ಕುಳಿತಳು.

"ತಾವು ರಾಮರಾಯರಿಗೆ ವಿಷ ಕೊಟ್ಟದ್ದು ನಿಜವೇ ನಳಿನಿ ?"

ಪುನಃಪುನಃ ತನ್ನನ್ನು ವೃಥಾ ಪ್ರಶ್ನಿಸುತ್ತಿರುವುದನ್ನು ಕಂಡು ನಳಿನಿ ಅಂಜಿದಳು. ರಜಾಕ್‌ನ ದೃಷ್ಟಿ, ಮಾತಿನ ಧೋರಣೆ, ಕುಳಿತು ನೋಡುತ್ತಿರುವ ರೀತಿಯು ನಳಿನಿಯನ್ನು ಸಂದೇಹಕ್ಕೀಡುಮಾಡಿತು. ರಾಜ್ ಏತಕ್ಕೆ ಇನ್ನೂ ಬರಲಿಲ್ಲ ಎಂಬುದಾಗಿ ಆಕೆಯ ಮನಸ್ಸು ತತ್ತಳಿಸುತ್ತಿತ್ತು. ಜಾಗ್ರತೆ ಮನೆಗೆ ಹಿಂತಿರುಗಿದರೆ ಒಳ್ಳೆಯದೆಂದು ತಿಳಿದಳು.

ರಾಜ್ ಈಗ ಬರುತ್ತೇನೆಂದು ನಳಿನಿಗೆ ಹೇಳಿ ಹೋದವನು ನೆಟ್ಟಗೆ ಬೀಬೀಜಾ಼ ಬಳಿ ಹೋದನು. ಆಕೆಯ ಬಳಿ ಇಲ್ಲಸಲ್ಲದ ಯಾವ್ಯಾವುದೋ ಕೆಲಸಕ್ಕೆ ಬಾರದ ಸಮಾಚಾರಗಳನ್ನು ಚರ್ಚಿಸುತ್ತಾ ಕುಳಿತುಬಿಟ್ಟದ್ದ. ಬೀಬೀಜಾನಳೂ ಸಹ ರಾಜ್‌ನೊಂದಿಗೆ ಸರಸಸಲ್ಲಾಪಗಳಿಗೆ ಮೊದಲಾದಳು. ರಾಜ್ ಅವಳನ್ನು ಬಿಟ್ಟು ಜಾಗ್ರತೆ ಬರಲು ಸಾಧ್ಯವಾಗಲಿಲ್ಲ.

ನಳಿನಿ ರಹಸ್ಯಮಂದಿರಕ್ಕೆ ಬಂದಿರುವುದಾಗಿ ಬೀಬೀಜಾನಳಿಗೂ ಶಾಂತಳಿಗೂ ತಿಳಿಯದು. ಒಂದುವೇಳೆ ಬೀಬೀಜಾ಼ ನಳಿನಿ ಬಂದಿರುವ ಸಂಗತಿಯನ್ನು ತಿಳಿದುಕೊಂಡರೆ ತನ್ನ ಪ್ರಾಣಕ್ಕೇ ಬರುತ್ತದಲ್ಲಾ ಎಂದು ರಾಜ್ ಮನಸ್ಸಿನಲ್ಲಿ ಚಿಂತೆ.

ಹಾಗೂ ಹೀಗೂ ಬೀಬೀಜಾನಳಿಗೆ ಸಮಾಧಾನ ಹೇಳಿ ನಳಿನಿಯ ಬಳಿ ಬರುವಹೊತ್ತಿಗೆ ನಳಿನಿ ಕೆದರಿದ ತಲೆಗೂದಲಿನೊಂದಿಗೆ ಕಣ್ಣೀರ್ಗರೆಸುತ್ತಾ ಕುಳಿತಿದ್ದಳು.

ರಾಜ್‌ನನ್ನು ಕಂಡದ್ದೇ ಇನ್ನೂ ಹೆಚ್ಚಾಗಿ ಅಳಲು ಮೊದಲಾದಳು.

ನಳಿನಿಯ ಸೀರೆಯು ಅರ್ಧ ಆಕೆಯ ಸೊಂಟವನ್ನು ಅಗಲಿತ್ತು. ತೊಟ್ಟಿದ್ದ ಜಾಕೆಟ್ಟು ಅಸ್ತವ್ಯಸ್ಥವಾಗಿತ್ತು. ಕಣ್ಣು ಕೆಂಪಾಗಿತ್ತು. ತಲೆಯ ಕೂದಲು ಕೆಳಗೆ ನೆಲದಮೇಲೆ ಉರುಳುರುಳಿ ಮಣ್ಣೆಲ್ಲವೂ ತುಂಬಿಹೋಗಿತ್ತು. ಮುಖವೆಲ್ಲವೂ ಪರಚಿಹೋಗಿತ್ತು. ಕೈಕಾಲುಗಳಿಗಂತೂ ನೆಲಕ್ಕೆ ತಗುಲಿದು ದರ ಪರಿಣಾಮವಾಗಿಯೋ ಅಥವಾ ಗೋಡೆಗೆ ತಗುಲಿ ಉಜ್ಜಿರುವ ದೆಸೆ ಯಿಂದಲೋ ಏನೋ ಬೆನ್ನು ಮತ್ತು ಸೊಂಟಕ್ಕೆಲ್ಲಾ ಗಾಯವಾಗಿ ಎಳೆರಕ್ತ ಕಾಣಿಸುತ್ತಿತ್ತು. ಮುಖ ವಿಕಾರವಾಗಿತ್ತು.

ಇದನ್ನು ಕಂಡ ರಾರ್ಜ ಚಕಿತನಾದ. ನಳಿನಿ ರೌದ್ರಾವತಾರದಿಂದ ಕುಳಿತಿದ್ದಳು. ರಾರ್ಜ ಎರಡು ಮೂರುಬಾರಿ ಮಾತನಾಡಿಸಿದ. ತೋಳನ್ನು ಹಿಡಿದು ಕದಲಿಸಿದ. ಗಲ್ಲವನ್ನು ಹಿಡಿದೆತ್ತಿ ಹಲ್ಕಿರಿದ, ಮೊರೆಯಿಟ್ಟ, ಬೇಡಿದ. ನಂತರ ನಳಿನಿಯು ಬಾಯಿ ಬಿಚ್ಚಿದಳು.

"ರಾರ್ಜ, ನಾನು ನಿನಗೆ ಮಾಡಿದ ಉಪಕಾರಕ್ಕೆ ನನಗೆ ಒಳ್ಳೆಯ ಪ್ರತ್ಯುಪಕಾರವನ್ನು ಮಾಡಿದೆ. ಹೀಗೆ ಮಾಡಬೇಕೆಂಬ ಅಭಿಲಾಷೆ ಯನ್ನು ಎಷ್ಟು ದಿನಗಳಿಂದ ಇಟ್ಟುಕೊಂಡಿದ್ದೆ. ಹಾಗೆ ನನ್ನ ಮೇಲೆ ನಿನಗೆ ದ್ವೇಷವಿದ್ದಿದ್ದರೆ ಹೀಗ್ಗೆ ಮಾಡುವುದು ನಿನಗೆ ಯೋಗ್ಯವಲ್ಲ."

ರಾರ್ಜ ಅವಾಕ್ಕಾದ: ನಳಿನಿ ಕಣ್ಣೀರ್ಗರಿಸುತ್ತಾ ಆಡುತ್ತಿರುವ ಪ್ರತಿಯೊಂದು ಮಾತೂ ರಾರ್ಜನ ಹೃದಯವೆಲ್ಲವೂ ಸೂಜಿಯಿಂದ ಚುಚ್ಚು ವಂತಿತ್ತು.

"ಏನಾಯಿತು ನಳಿನಿ. ಯಾರಾದರೂ ಏನಾದರೂ ಅಂದರೇನು ?"

"ಯಾರೂ ಏನೂ ಅನ್ನಲಿಲ್ಲ. ನನಗೆ ಆಗಬೇಕಾದದ್ದು ಆಯಿತು. ನನಗೆ ಆದದ್ದು ಇಷ್ಟು ಮಾತ್ರ ಸಾಲದು. ಇನ್ನೂ ಇದಕ್ಕಿಂತಲೂ ಹತ್ತು ಪಾಲು ಹೆಚ್ಚು ಆಗಬೇಕಿತ್ತು. ಆದರೆ ಅಷ್ಟರವರೆಗೆ ನಾನು ಆಗುವಂತೆ ಆಸ್ಪದ ಕೊಡಲಾರೆ. ಅದಕ್ಕೆ ಮುಂಚಿತವಾಗಿಯೇ ನನ್ನ ದೇಹವನ್ನು ಬೆಂಕಿಗೋ, ಆಳವಾದ ಬಾವಿಗೋ, ಒಂದು ಮೊಳ ಹಗ್ಗಕ್ಕೋ ಬಲಿಯಾಗಿಸಿ ಬಿಡುತ್ತೇನೆ."

"ನಳಿನಿ, ಏತಕ್ಕೆ ಹೀಗೆ ಹುಚ್ಚುಹುಚ್ಚಾಗಿ ಮಾತನಾಡುತ್ತಿರುವೆ— ನಡೆದದ್ದಾದರೂ ಹೇಳು. ಇಲ್ಲಿರುವ ಯಾರಾದರೂ ನಿನಗೆ ಏನಾದರೂ ಹೇಳಿದರೇನು ?"

"ಏನೂ ಇಲ್ಲ. ಯಾರೂ ನನಗೆ ಒಂದನ್ನೂ ಹೇಳಲಿಲ್ಲ. ನನ್ನ ಕೊನೆಯ ನಿರ್ಧಾರ ಈಗಲೇ ಈ ಕ್ಷಣವೇ ನಾನು ನನ್ನ ಮನೆಗೆ ಹೋಗಲೇ ಬೇಕೆಂದು ತೀರ್ಮಾನಿಸಿರುವೆನು. ನೀನು ಬರುತ್ತೀಯೋ ಇಲ್ಲವೋ ಎಂಬುದನ್ನೂ, ನನ್ನನ್ನು ಇಲ್ಲಿಂದ ಈಗಲೇ ಕಳುಹಿಸುತ್ತೀಯೋ ಇಲ್ಲವೋ ಎಂಬುದನ್ನೂ ಕೇಳುತ್ತಿದ್ದೇನೆ. ಜಾಗ್ರತೆ ತಿಳಿಸು. ಊಂ ಹೇಳು ?"

"ನಳಿನಿ, ಏಕೆ ಹೀಗೆ ಅವಸರ ಬೀಳುತ್ತಿರುವೆ. ರಜಾಕನ ಬಳಿ ಕೇಳಿ ತಿಳಿದುಕೊಂಡು ಹೋಗೋಣ. ಅದಲ್ಲದೆ ನಾವು ಈಗ ಮನೆಗೆ ಹೋಗಬೇಕೆಂದರೆ ಆರು ಮೈಲಿ ನಡೆಯಬೇಕು. ಗಂಟೆ ಒಂಭತ್ತೂವರೆಯಾಗುತ್ತಾ ಬಂತು. ಈ ಕತ್ತಲೆಯಲ್ಲಿ ಈಗಲೇ ಹೋಗೆನ್ನುತ್ತೀಯಲ್ಲಾ ನಳಿನಿ. ಅದೂ ಅಲ್ಲದೆ ನಮ್ಮನ್ನು ಈ ರಾತ್ರಿಸಮಯದಲ್ಲಿ ಯಾರಾದರೂ ಕಂಡರೆ ಏನೆಂದುಕೊಂಡಾರು ? ಅದೂ ಹೋಗಲಿ, ಈ ಕಡೆಯಿಂದ ಯಾರಾದರೂ ಬರುತ್ತಾರೋ ಏನೋ ಎಂಬುದಾಗಿ ಪೋಲೀಸಿನವರು ಹೊಂಚುಹಾಕುತ್ತಲೇ ಇರಬಹುದು. ನಾವು ಹೋಗುವುದು ಹೇಗೆ ಸಾಧ್ಯ ? ನಳಿನೀ .... ನೀನು ಕೋಪಮಾಡದಿರು. ಯೋಚಿಸಿನೋಡು."

"ಯೋಚಿಸಿ ನೋಡಲು ನನಗೆ ಈಗ ಸಮಯವಿಲ್ಲ. ನೀನು ಈಗಲೇ ಮನೆಗೆ ಬರಲು ಸಾಧ್ಯವೇ ಅಸಾಧ್ಯವೇ ಎಂದು ನಾನು ಕಣಿಯನ್ನು ಕೇಳಲಿಲ್ಲ. ಇಷ್ಟವಿದ್ದರೆ, ಮನಸ್ಸಿನಲ್ಲಿ ಧೈರ್ಯವಿದ್ದರೆ, ನೀನು ನಿಜವಾಗಿಯೂ ಗಂಡಸೇ ಆಗಿದ್ದರೆ ತಕ್ಷಣ ನನ್ನೊಂದಿಗೆ ಬಂದುಬಿಡು. ಇಲ್ಲವಾದರೆ, ನೀನು ನಿನ್ನ ಜೀವವನ್ನು ಕಾಪಾಡಿಕೊಂಡು ಇಲ್ಲಿಯೇ ಹಾಯಾಗಿರು. ನಾನು ಹೋಗುತ್ತೇನೆ. ಹೆಚ್ಚು ನನ್ನೊಂದಿಗೆ ವಾದಿಸಬೇಡ. ನೀನು ಹಾಕುವ ಪ್ರಶ್ನೆಗಳಿಗೂ, ಸಂದೇಹಗಳಿಗೂ ನಾನು ಬದಲು ಕೊಡಲು ತಯಾರಾಗಿಲ್ಲ."

ಈ ಮಾತನ್ನು ಕೇಳಿದ ರಾರ್ಜ ರಜಾಕನನ್ನು ಹುಡುಕಿದನು. ಕಾವಲಿದ್ದ ಮಜೀದನು "ರಜಾಕರು ಎಲ್ಲಿಗೋ ಹೊರಗೆ ಹೊರಟುಹೋದರು" ಎಂದ.

"ಎಲ್ಲಿಗೆ ಹೋದರೋ ?"

"ಅದೆಲ್ಲಿಗೆ ಹೋದರೋ ನನ್ನಬಳಿ ಹೇಳಿ ಹೋಗುತ್ತಾರೇನು ?"

"ಹಾಗಾದರೆ ನಡಿ ನಳಿನಿ. ಮನೆಗೆ ಹೋಗೋಣ" ಎಂದನು ರಾರ್ಜ.

ನಳಿನಿ ಎದ್ದಳು. ಮಜೀದ್ ರಹಸ್ಯಮಂದಿರದ ಹೆಬ್ಬಾಗಿಲನ್ನು ತೆರೆದ. ರಾರ್ಜ ಮತ್ತು ನಳಿನಿ ರಹಸ್ಯ ಮಂದಿರದ ಬಾಗಿಲ ಆಚೆಗೆ ಬಂದರು.

ಒಂದೇ ಕಗ್ಗತ್ತಲೆಯು ಆವರಿಸಿಕೊಂಡಿದೆ. ಕಣ್ಣಿಗೆ ಒಂದೂ ಕಾಣಿಸುತ್ತಿಲ್ಲ. ಒಬ್ಬರಿಗೊಬ್ಬರು ಎದುರಿಗೆ ನಿಂತಿರುವುದೇ ಕಾಣಿಸುತ್ತಿಲ್ಲ. ರಾಜ್ಞ ಜೋಬಿನಲ್ಲಿದ್ದ ಬೆಂಕಿ ಪೆಟ್ಟಿಗೆಯನ್ನು ತೆಗೆದು ಗೀರಿ ಬೆಳಕಿನಲ್ಲಿ ಹಾದಿಯನ್ನು ಗುರ್ತಿಸಿಕೊಂಡು ನಡೆದ. ದಾರಿಯಲ್ಲಿ ಮುಳ್ಳು, ಸಣ್ಣ ಜಲ್ಲೀಕಲ್ಲು, ಕಾಲನ್ನು ಚುಚ್ಚಿ ಹಿಂಸಿಸುತ್ತಿತ್ತು. ಆದರೂ ಅದರಲ್ಲೇ ಆದಷ್ಟುಬೇಗ ಹೆಜ್ಜೆಯಿಡುತ್ತಿದ್ದರು.

"ನಳಿನೀ, ಏತಕ್ಕೆ ಹೀಗೆ ಕೋಪಮಾಡಿಕೊಂಡೆ. ನಾನು ಮಾಡಿದ ತಪ್ಪಾದ್ದರೂ ಏನು ?"

"ಹುಷ್. ಮಾತನಾಡದೇ ಬಾ. ಮನೆಯನ್ನು ಸೇರಿದ ಮೇಲೆ ನಡೆದ ವಿಷಯವನ್ನು ನಿನಗೆ ತಿಳಿಸುತ್ತೇನೆ. ಅದುವರೆಗೂ ದಾರಿಯಲ್ಲಿ ನನ್ನೊಂದಿಗೆ ನೀನು ಮಾತನಾಡದಿರು."

ಕಾಲು ದಾರಿಯನ್ನು ದಾಟಿ ಬಂದರು. ಮೇರ್ನ್ ರೋಡ್ ಸಿಕ್ಕಿತು. ಸುತ್ತಲೂ ಒಂದು ಬಾರಿ ನೋಡಿದನು ರಾಜ್ಞ. ಕಾರಿನಲ್ಲಿ ಹೋದಾಗ ಮತ್ತು ಕಾರಿನಿಂದ ಹಿಂತಿರುಗಿ ಬಂದಾಗ ಇದೇ ಜಾಗದಲ್ಲೇ ಪತ್ತೇದಾರ ಥಾಮಸ್‌ರವರು ಇದ್ದುದು ಎಂಬುದಾಗಿ ನೆನೆದನು ರಾಜ್ಞ. ತಾನು ಕಾರಿನಲ್ಲಿ ಹೋದಾಗ ಥಾಮಸ್‌ರವರು ಕಾರು ನಿಲ್ಲಿಸುವಂತೆ ಕೈತಟ್ಟಿ ಸಿಳ್ಳು ಹಾಕಿ ಕೂಗಿದ ಮತ್ತು ಪೋಲೀಸರು ಹಿಂದೆ ಓಡಿ ಬಂದ ಪ್ರತಿಯೊಂದು ದೃಶ್ಯಗಳೂ ರಾಜ್ಞ ಎದುರಿಗೆ ಬಂದು ಸುಳಿದಾಡುತ್ತಿತ್ತು.

ಎಷ್ಟೊಂದು ನೆನಪು, ಮರೆವು, ಭಯವಿದ್ದರೂ ಮೈನ್ ರೋಡಿನ ನಾಲ್ಕು ಕಡೆಯೂ ಯಾರಾದರೂ ಇದ್ದಾರೆಯೇ ಎಂಬುದನ್ನು ದೃಷ್ಟಿಸಿ ನೋಡಿಕೊಂಡು ಸರಸರನೆ ನಳಿನಿಯನ್ನು ಎಳೆದುಕೊಂಡು ಹೋಗುತ್ತಿದ್ದನು ರಾಜ್ಞ.

ದಾರಿಯಲ್ಲಿ ಪೋಲೀಸಿನವನೊಬ್ಬನು ಇವರಿಬ್ಬರ ಹಿಂದೆ ಬರುತ್ತಲೇ ಇದ್ದನು. ಪೋಲೀಸಿನವನು ಸಮೀಪಕ್ಕೆ ಬಂದನು. ಕೊನೆಗೆ ರಾಜ್ಞನ ಜೊತೆಯಲ್ಲೇ ಬರಲು ಸಿದ್ಧನಾದನು. ಆತನ ಕೈಯಲ್ಲಿ ಒಂದು ದಪ್ಪವಾದ ಲಾಠಿ ಮತ್ತು ಬಾಕು ಇದ್ದಿತು. ಅದನ್ನು ನೋಡಿಕೊಂಡನು ರಾಜ್ಞ. ಆ ಪೋಲೀಸಿನವನನ್ನು ನೋಡಿ,

"ಎಲ್ಲಿಂದ ಬರುತ್ತಿದ್ದೀಯಪ್ಪಾ ?" ಎಂದನು.

ಪೋಲೀಸಿನವನು ಆಶ್ಚರ್ಯ ಬಿದ್ದು,

"ಬಹಳ ಚೆನ್ನಾಗಿದೆ. ನಾನೇ ಈ ಪ್ರಶ್ನೆಯನ್ನು ನಿಮಗೆ ಹಾಕೋಣ ವೆನ್ನುವಷ್ಟರಲ್ಲಿ ನೀವೇ ನನಗೆ ಈ ಪ್ರಶ್ನೆ ಹಾಕಿರುವುದು ಬಹಳ ಚೆನ್ನಾಗಿದೆ. ನೀವೇ ಹೇಳಿ. ಈಗ ನೀವು ಬರುತ್ತಿರುವುದು ಎಲ್ಲಿಂದ........?"

"ನೀನ್ಯಾರೆಂಬುದನ್ನು ಮೊದಲು ತಿಳಿಸಿದರೆ ನಂತರ ನನ್ನ ವಿಷಯವು ತುಂಬಾ ಇದೆ. ಎಲ್ಲವನ್ನೂ ತಿಳಿಸುತ್ತೇನೆ."

"ನಾನು ಪೋಲೀಸ್ ದಫೇದಾರ್ ನಿಂಗ. ಈ ದಿನ ಸಂಜೆ ಆರು ಘಂಟೆಯಿಂದ ಇಲ್ಲೇ ಕಾವಲು ಕಾಯುತ್ತಿದ್ದೇನೆ."

"ಅಯ್ಯಯ್ಯೋ. ಒಳ್ಳೇ ಪೋಲೀಸ್ ದಫೇದಾರನಯ್ಯಾ ನೀನು. ಬಹಳ ಚೆನ್ನಾಗಿ ಡ್ಯೂಟಿ ನೋಡುತ್ತಿದ್ದೀರಿ. ನಾವು ಈ ಕಡೆ ಯಾವುದೋ ಮಾತನಾಡಿಕೊಂಡು ಬರುತ್ತಿದ್ದೆವು. ನಮ್ಮನ್ನು ಒಬ್ಬ ಚಂಡಾಳ ಮುದುಕ ಯಾವುದೋ ನೆಪಹೇಳಿ ಈ ಕಡೆ ಕರೆದುಕೊಂಡು ಬಂದ. ನಂತರ ಅವನ ಮಾತನ್ನು ನಂಬಿ ಸ್ವಲ್ಪ ದೂರ ಬಂದೆವು. ಅವನೊಂದಿಗೆ ಮಾತನಾಡುತ್ತಾ ಬಂದದ್ದರಿಂದ ನಾವು ಎಲ್ಲಿಗೆ ಬಂದೆವು ? ಎಷ್ಟು ದೂರ ಬಂದಿದ್ದೆವು ಎಂಬುದು ತಿಳಿಯಲಿಲ್ಲ. ಇಲ್ಲಿ ಕರೆದುಕೊಂಡು ಬಂದ ನಂತರ ಅವನೂ ಸುತ್ತು ಅವನ ಕಡೆಯವರು ನಾಲ್ವರೂ ಇಲ್ಲೇ ಕುಳಿತಿದ್ದರು. ನಮ್ಮನ್ನು ಹೊಡೆದು ಈಕೆಯನ್ನು ಅವಮಾನಗೊಳಿಸಿ ನಮ್ಮಲ್ಲಿದ್ದ ಹಣವನ್ನೂ, ಒಡವೆಯನ್ನೂ ಕಿತ್ತುಕೊಂಡು ನಮ್ಮನ್ನು ಓಡಿಸಿದರು. ನಾವು ತಪ್ಪಿ ಬಂದದ್ದು ಪುನರ್ಜನ್ಮ" ಎಂದ. ರಾರ್ಜನ ಮಾತನ್ನು ಕೇಳಿ ಪೋಲೀಸಿನವನೂ ಗೋಳಿಟ್ಟ.

"ಸುಮ್ಮನಿರಿ ಸಾರ್. ಈಕಡೆ ಯಾರೋ ಕೆಲವರು ಗುಂಪುಕಟ್ಟಿಕೊಂಡಿದ್ದಾರೆ. ಯಾರನ್ನೂ ಸುಮ್ಮನೆ ಬಿಡುತ್ತಿಲ್ಲ. ಹೇಗಾದರೂ ನಾವು ಕಂಡು ಹಿಡಿಯದೇ ಬಿಡುವುದಿಲ್ಲ. ನಡೆಯಿರಿ ನಾನೂ ನಿಮ್ಮೊಂದಿಗೆ ಬರುತ್ತೇನೆ. ನಿಮ್ಮ ಮನೆಯವರೆಗೆ ನಿಮಗೆ ಯಾವ ಅಪಾಯವೂ ಸಂಭವಿಸದಂತೆ ಬಿಟ್ಟು ಬರುತ್ತೇನೆ" ಎಂದು ಹೇಳಿ ಪೋಲೀಸಿನವನು ಜೊತೆಯಲ್ಲೇ ಹೊರಟನು.

ಪೋಲೀಸಿನವನು ಜೊತೆಯಲ್ಲಿದ್ದದ್ದರಿಂದ ಬೇರೆ ಹೊಂಚು ಹಾಕುತ್ತಿದ್ದ ಪೋಲೀಸಿನವರು ನಳಿನಿ ಮತ್ತು ರಾರ್ಜನನ್ನು ಮಾತನಾಡಿಸಲಿಲ್ಲ. ಅದೂ ಒಂದು ಒಳ್ಳೆಯದೆಂದೇ ತಿಳಿದುಕೊಂಡನು ರಾರ್ಜ.

ನಳಿನಿಯ ಮನೆ ಬಂತು. ಪೋಲೀಸಿನವನು "ಈಗ ಯಾವ ಭಯವೂ ಇರುವುದಿಲ್ಲ. ನೆಮ್ಮದಿಯಾಗಿ ಮನೆಯನ್ನು ಸೇರಿ" ಎಂದನು.

ಅಮಾಯಕನಾದ ಒಂದೂ ಅರಿಯದ ಪೋಲೀಸಿನವನನ್ನೂ ಅವನ ಚರ್ಯೆಯನ್ನೂ ಕಂಡು ರಾರ್ಜ್‌ಗೆ ಅಯ್ಯೋ ಎನಿಸಿತು. ಆತನ ಕೈಗೆ ಐದು ರೂಪಾಯಿ ನೋಟೊಂದನ್ನಿಟ್ಟು ಕಳುಹಿಸಿದನು. ರಾರ್ಜ್, ನಳಿನಿ ಬಾಗಿಲ ಬೀಗ ತೆಗೆದು ಒಳಗೆ ನಡೆದರು. ರಾರ್ಜ್ ಸಹಾ ನಳಿನಿಯೊಂದಿಗೆ ಹೋದ. ಹೋದದ್ದೇ ಯಾವ ಮಾತನ್ನೂ ಪ್ರಸ್ತಾಪಿಸಲಿಲ್ಲ. ಸುಮ್ಮನೆ ಅವರ ಪಾಡಿಗೆ ಅವರು ಒಂದೊಂದು ಕಡೆ ಬೇರೆಯಾಗಿ ಮಲಗಿಬಿಟ್ಟರು.

## ೧೨

ಬೆಳಗಾಯಿತು. ನಳಿನಿ ಡ್ರೆಸ್ ಮಾಡಿಕೊಂಡು ಆಸ್ಪತ್ರೆಗೆ ಹೊರಡಲು ತಯಾರಾದಳು. ರಾರ್ಜ್ "ಆಸ್ಪತ್ರೆಗೆ ಹೋಗುವುದು ಬೇಡ. ನೆನ್ನೆಯೆಲ್ಲಾ ಅಳುತ್ತಲೇ ಇದ್ದೆ. ಕಾರಣ ತಿಳಿಯಲಿಲ್ಲ. ಈ ದಿನ ಲೀವ್ ಲೆಟರ್ ಬರೆದು ಕೊಟ್ಟುಬಿಡು. ನಾಳೆಯಿಂದ ಬೇಕಾದರೆ ಡ್ಯೂಟಿಗೆ ಹೋಗುವಿಯಂತೆ" ಎಂದು ಎಷ್ಟೋ ಹೇಳಿದ. ನಳಿನಿ ಕೇಳಲಿಲ್ಲ.

"ಹೊರಗೆ ನಡೆಯಿರಿ ಬೀಗ 'ಹಾಕಬೇಕು" ಎಂದು ಹೇಳಿ ಮೆಲ್ಲನೆ ರಾರ್ಜ್‌ನನ್ನು ಒಳ್ಳೆಯ ಮಾತಿನಿಂದ ಹೊರಗಟ್ಟಿದಳು. ತಾನು ಆಸ್ಪತ್ರೆಗೆ ತೆರಳಿದಳು.

ರಾರ್ಜ್ ಮತ್ತೆಲ್ಲಿಗೆ ಹೋದಾನು ! ನೆಟ್ಟಗೆ ತನ್ನ ಮನೆಗೇ ಹೋದನು. ರಾರ್ಜ್ ಹೋಗುವ ಮೊದಲನೆಯ ದಿನವೇ ರಾರ್ಜ್‌ನಿನ ಚಿಕ್ಕಮ್ಮ, ಹರಿ, ಗಿರಿ, ರವಿ, ಎಲ್ಲರೂ ಚಿಟ್ಟದಪುರದಿಂದ ಬೆಂಗಳೂರಿಗೆ ಬಂದಿದ್ದರು. ರಾರ್ಜ್‌ನನ್ನು ಕಾಣದೆ ಪರಿತಪಿಸುತ್ತಿದ್ದರು.

ರಾರ್ಜ್ ಮನೆಯೊಳಕ್ಕೆ ಕಾಲಿಟ್ಟ ತಕ್ಷಣವೇ ಪ್ರತಿಯೊಬ್ಬರೂ ಬಾಚಿ ತಬ್ಬಿಕೊಂಡರು. ಚಿಕ್ಕಮ್ಮನೂ ಸಹ ತನ್ನ ಗಂಡ ರಾಮರಾಯರು ಮೃತರಾದ ಬಗ್ಗೆ ನೆನೆದು ತನಗೂ ದುಃಖವಿದೆ ಎಂಬುದನ್ನು ರಾರ್ಜ್‌ಗೆ ತೋರಿಸಲೋ ಏನೋ ಸುಮ್ಮನೆ ಕಣ್ಣೀರಿಟ್ಟು ಬುಸುಗುಟ್ಟಿದರು.

ರಾರ್ಜ್ ಎಲ್ಲರಿಗೂ ಸಮಾಧಾನ ಹೇಳಿ ತಾನು ವಿಶ್ರಾಂತಿ ತೆಗೆದುಕೊಳ್ಳಲು ಹೋದ.

ಅಷ್ಟರಲ್ಲಿ ಚಿಕ್ಕಮ್ಮ "ನೆನ್ನೆಯೆಲ್ಲಾ ಎಲ್ಲಿಗೆ ಹೋಗಿದ್ದೆಯಪ್ಪಾ ರಾರ್ಜ್" ಎಂದಳು.

"ನನ್ನ ಹಣೇ ಬರಹ. ಏನು ಮಾಡಲಿ ಚಿಕ್ಕಮ್ಮ. ಈ ದೊಡ್ಡ ಸಂಸಾರವನ್ನು ನನ್ನ ತಲೆಗೆ ಕಟ್ಟಿ ತಂದೆಯವರು ವಿಧಿವಶರಾದರು. ನೋಡಿ ಈ ಎಳೆ ಕೂಸುಗಳನ್ನು. ಇವರಿಗೇನು ಗೊತ್ತಿದೆ ಪಾಪ! ಇವರನ್ನು ಸಾಕಿ ಸಲಹುವ ಭಾರ ನನ್ನದಲ್ಲವೆಂದರೆ ಬಿಟ್ಟೀತೆ? ಅದಕ್ಕಾಗಿಯೇ ಹೊಲ ಗದ್ದೆಗಳ ಕಡೆ ಹೋಗಿ ಗಮನಿಸುತ್ತಿದ್ದೆ" ಎಂದನು ಗದ್ಗದ ಸ್ವರದಲ್ಲಿ.

ಚಿಕ್ಕಮ್ಮನಾದ ಲಕ್ಷಮ್ಮ ರಾರ್ಜನಿನ ನಡತೆಯನ್ನು ಕಂಡು ಮರುಗಿ ದಳು. ರಾರ್ಜ ಎಷ್ಟು ಉತ್ತಮಗುಣವುಳ್ಳವನೆಂದು ಹೊಗಳಿಕೊಂಡಳು.

ಪ್ಹೋಲೀಸ್ ಜವಾನನೊಬ್ಬನು ರಾರ್ಜ ಮನೆಯ ಗೇಟಿನ ಬಳಿ ಬಂದು "ರಾಜಾರಾಯರು ಇದ್ದಾರೆಯೇ?" ಎಂದನು. ಆಗ ಮುಂಜಾನೆ ಆರೂ ಕಾಲು ಘಂಟೆ ಇರಬಹುದು.

ಇಷ್ಟು ಮುಂಜಾನೆ ರಾರ್ಜನನ್ನು ಹುಡುಕಿಕೊಂಡು ಯಾರು ಬಂದಾರು? ಒಂದು ವೇಳೆ ಭಕ್ಷೀಸು ಕೇಳಲು ಬಂದಿರಬೇಕೋ ಏನೋ ಎಂದುಕೊಂಡು ಗೇಟಿನಲ್ಲಿದ್ದ ಜವಾನ,

"ಈಗ ನೋಡಲು ಸಾಧ್ಯವಿಲ್ಲ. ಅವರು ಈಗ ತಾನೆ ಬಂದರು. ನೀವು ಮದ್ಯಾಹ್ನ ಹನ್ನೆರಡು ಘಂಟೆ ಹೊತ್ತಿಗೆ ಬಂದರೆ ಕಾಣಬಹುದು" ಎಂದನು.

"ಅಂತೂ ಈಗ ಒಳಗಿದ್ದಾರೆಯೇ?"

"ಹೌದು ಈಗ ತಾನೆ ಬಂದರು. ಇನ್ನೂ ಬಂದು ಐದು ನಿಮಿಷಗಳಾ ಗಿರಬೇಕು."

"ಹೋಗಲಿ ಈ ಚೀಟಿಯನ್ನು ಅವರ ಕೈಗೆ ಕೊಟ್ಟು ಬನ್ನಿ." ಎಂದು ಪೋಲೀಸಿನವನು ಒಂದು ಕಾಗದದ ಚೂರಿನಲ್ಲಿ ಯಾವುದೋ ವಿಷಯವನ್ನು ಬರೆದು ಗೇಟಿನಲ್ಲಿದ್ದ ಜವಾನನ ಕೈಗೆ ಕೊಟ್ಟನು.

ಗೇಟಿನಲ್ಲಿದ್ದ ಜವಾನನು ಆ ಚೀಟಿಯನ್ನು ತೆಗೆದುಕೊಂಡು ಹೋಗಿ ಕೊಡಲು ಪ್ರಯತ್ನಿಸಿದನು. ಆದರೆ ಚೀಟಿ ಕೊಡಲು ಆಗಲಿಲ್ಲ. ಮಕ್ಕಳು ಮರಿ ಚಿಕ್ಕಮ್ಮನೊಂದಿಗೆ ರಾರ್ಜ ತನ್ನ ಕಾಲವನ್ನು ಸಂತೋಷದಿಂದ ಕಳೆ ಯುತ್ತಿದ್ದ. ಅದಲ್ಲದೆ ಬಂಧು ಬಳಗದೊಂದಿಗೆ ಒಂದುಗೂಡಿ ನಲಿದಾಡುತ್ತಿ ರುವ ಸಮಯದಲ್ಲಿ ಪೋಲೀಸಿನವನ ಪತ್ರ ಪರಿಚಯ ಮಾಡುವುದು ಒಳ್ಳೆಯ ದಲ್ಲವೆಂಬ ಭಾವನೆ ಜವಾನನಲ್ಲುಂಟಾಯಿತು.

ಬಂಗಲೆಯ ಒಳಗಡೆಯಿಂದ ಹೊರಗೆ ಬಂದು "ಈಗ ನೀವು ಏನು ಮಾಡಿದರೂ ಸಾಧ್ಯವಿಲ್ಲ. ನಾಳೆ ಬನ್ನಿ. ಖಂಡಿತ ನೋಡಿ ಮಾತನಾಡ ಬಹುದು. ನಿಮಗೂ ಏನಾದರೂ ಗಿಟ್ಟಬಹುದು."

"ಗಿಟ್ಟಿಸಿಕೊಳ್ಳಲು ನಾನು ಇಲ್ಲಿಗೆ ಬರಲಿಲ್ಲವಯ್ಯಾ. ಅವರನ್ನು ಅಟ್ಟಿಸಿಕೊಂಡು ಹೋಗಲು ಬಂದಿದ್ದೇನೆ" ಎಂದ.

ಜವಾನನಿಗೆ ರೇಗಿತು. ಹೊರಟು ಹೋಗಲು ಎರಡು ಮೂರು ಬಾರಿ ಅವಕಾಶಕೊಟ್ಟನು. ಪೋಲೀಸಿನವನು ಕೇಳಲೇ ಇಲ್ಲ. ವಾದಿಸಿ ಕೊಂಡೇ ನಿಂತಿದ್ದ.

ಕೊನೆಗೆ ಪೋಲೀಸಿನವನ ಕುತ್ತಿಗೆಯನ್ನು ಹಿಡಿದು ಜವಾನನು ತಳ್ಳಿದ. ಪಕ್ಕದಲ್ಲಿದ್ದ ದಿಣ್ಣೆಯಮೇಲೆ ಪೋಲೀಸಿನವನು ಬಿದ್ದು ಅವನಿಗೆ ಜೋರಾ ಗಿಯೇ ಪೆಟ್ಟಾಯಿತು.

ಅದಾದನಂತರವೂ ಗೇಟಿನಲ್ಲಿದ್ದ ಜವಾನ ವಿಷಯವನ್ನು ರಾರ್ಜನಿಗೆ ತಿಳಿಸಲಿಲ್ಲ. ಹೇಗಾದರೂ ತನ್ನ ಯಜಮಾನನಿಗೆ ಯಾವ ಚಿಂತೆಯೂ ಇಲ್ಲ ದಂತೆ ನೋಡಿಕೊಳ್ಳುವುದೇ ತನ್ನ ಧ್ಯೇಯ ಎಂದು ತಿಳಿದುಕೊಂಡಿದ್ದ.

ಏಟುತಿಂದ ಪೋಲೀಸಿನವನು ನೆಟ್ಟಗೆ ಥಾಮಸ್‌ರವರಿಗೆ ಬಂದು ಸುದ್ದಿ ತಲುಪಿಸಿದನು. ಅಷ್ಟರಲ್ಲಿ ಕಳೆದರಾತ್ರಿ ಕಾವಲಾಗಿದ್ದು ನಳಿನಿಯ ಮನೆಯವರೆಗೂ ಬಿಟ್ಟುಹೋದ ಪೋಲೀಸಿನವನು ಬಂದು ವಿಷಯವನ್ನು ತಿಳಿಸಿದನು. ಪತ್ತೇದಾರರಿಗೆ ಗುಮಾನಿಯಾಯಿತು. ಮನೆಯನ್ನು ತೋರಿಸು ವಂತೆ ಪೋಲೀಸಿನವನನ್ನು ಹೇಳಿ ಮನೆಯನ್ನು ನೋಡಿಕೊಂಡರು ಪತ್ತೇ ದಾರ ಥಾಮಸ್. ಅದು ನರ್ಸ್ ನಳಿನಿಯ ಮನೆಯಾಗಿತ್ತು. ಮನೆಯನ್ನು ಕಂಡನಂತರ ಥಾಮಸ್‌ರವರ ಮನಸ್ಸಿನಲ್ಲಿ ನರ್ಸ್ ನಳಿನಿ ರಾರ್ಜನಿಗೇನೋ ಮಾಯೆಮಾಡಿದ್ದಾಳೆ ಎಂದು ಊಹಿಸಿದರು.

ಪೋಲೀಸಿನವನನ್ನು ಹೋಗುವಂತೆ ಹೇಳಿ ಥಾಮಸ್‌ರವರು ನೆಟ್ಟಗೆ ರಾರ್ಜ ಮನೆಯಕಡೆ ನಡೆದರು. ರಾರ್ಜ ಮನೆಗೂ ಬಂದರು.

ಗೇಟಿನಲ್ಲಿದ್ದ ಜವಾನನ ಕೈಯಲ್ಲಿ "ರಾರ್ಜ ಮನೆಯಲ್ಲಿದ್ದಾನೆಯೇ ?" ಎಂದು ಕೇಳಿದರು.

ಜವಾನ "ಇದ್ದಾರೆ" ಎಂದ.

"ಪತ್ತೇದಾರ ಥಾಮಸ್‌ರವರು ಬಂದಿದ್ದಾರೆಂದು ತಿಳಿಸು" ಎಂದರು.

"ಆಗಲಿ" ಎಂದು ಜವಾನನು ಮನೆಯೊಳಗೆ ಪ್ರವೇಶಿಸಿ ರಾರ್ಜನಿನ ಬಳಿ ಸುದ್ದಿಯನ್ನು ತಿಳಿಸಿದ.

ರಾರ್ಜ ಜವಾನನಬಳಿ "ನಾನು ಮನೆಯಲ್ಲಿಲ್ಲವೆಂದು ಹೇಳಬಾರದಾಗಿತ್ತೇನೋ ?" ಎಂದು ಆರ್ಭಟಿಸಿದ.

"ಇಲ್ಲ ಸ್ವಾಮಿ. ನೀವು ಮನೆಯಲ್ಲೇ ಇರುವಂತೆ ಹೇಳಿದ್ದೇನೆ. ಪತ್ತೇದಾರರು ಗೇಟಿನ ಹೊರಗಡೆ ಕಾದಿದ್ದಾರೆ. ಇನ್ನುಮೇಲೆ ಮತ್ತೊಮ್ಮೆ ನೀವು ಮನೆಯಲ್ಲಿಲ್ಲ ಎಂದು ಹೇಗೆ ಹೇಳೋದು" ಎಂದನು.

"ಏನಾದರೂ ಮಾಡಿ ದಯವಿಟ್ಟು ಥಾಮಸ್‌ನನ್ನು ಎಲ್ಲಾದರೂ ಹಾಳಾಗಿ ಹೋಗುವಂತೆ ನೆಪ ಹೇಳಿ ಕಳಿಸು" ಎಂದು ಹೇಳಿ ಜವಾನನ ಕೈಗೆ ನಾಲ್ಕಾಣೆಯನ್ನಿಟ್ಟನು ರಾರ್ಜ.

ಜವಾನ ಕಕ್ಕಾಬಿಕ್ಕಿಯಾದ. ಮೊದಲು ಮನೆಯಲ್ಲಿರುವರೆಂದು ಹೇಳಿ, ಈಗ ಮನೆಯಲ್ಲಿಲ್ಲವೆಂದು ಹೇಗೆ ಹೇಳೋದು ಎಂದು ಕೈಕೈ ಹಿಸುಕಿಕೊಂಡ. ಅವನಿಗೆ ಒಂದೂ ಹೊಳೆಯಲಿಲ್ಲ.

ಪುನಃ ತಾನು ನಿಂತಿದ್ದ ಗೇಟಿನಬಳಿ ಬಂದು ನಿಂತುಕೊಂಡ. ಎದುರಿಗಿದ್ದ ಥಾಮಸ್‌ರವರನ್ನು ಮಾತನಾಡಿಸಲೇ ಇಲ್ಲ.

ಥಾಮಸ್‌ರವರು "ಏನಯ್ಯಾ ! ಕರೆದೆಯೋ ನಿಮ್ಮ ಯಜಮಾನರನ್ನು?" ಎಂದರು.

"ಯಾವ ಯಜಮಾನರನ್ನು....?" ಎಂದು ಪ್ರಶ್ನೆಹಾಕಿದ ಜವಾನ.

ಜವಾನನು ಆಡಿದಮಾತು ಥಾಮಸ್‌ರವರಿಗೆ ಆಶ್ಚರ್ಯವನ್ನುಂಟು ಮಾಡಿತು. "ಏನಯ್ಯಾ ಈಗತಾನೇ ನಿಮ್ಮ ಯಜಮಾನರು ರಾರ್ಜ ಮನೆಯಲ್ಲಿದ್ದಾರೆ ಎಂದು ಹೇಳಿ ಕರೆದುಕೊಂಡು ಬರುವಂತೆ ಹೇಳಿಹೊರಟೆ. ಈಗ ಬಂದಮೇಲೆ ನಿನ್ನ ಮಾತೇ ಬದಲಾವಣೆಯಾಗಿದೆಯಲ್ಲಪ್ಪಾ. ಕಾರಣವೇನು ?" ಎಂದರು.

"ಸಾರ್ ನನ್ನ ಮಾತು ಬದಲಾವಣೆಯಾಗುವುದು ಮಾತ್ರವಲ್ಲ. ಸ್ವಲ್ಪ ಅಪ್ಪಿ ತಪ್ಪಿದರೆ ಕೈಕಾಲುಗಳೂ ಬದಲಾವಣೆ ಹೊಂದುತ್ತಿರುತ್ತೆ. ಈಗ ಮನೆಯಲ್ಲಿ ರಾರ್ಜರವರಿಲ್ಲ. ಸಂಜೆ ಬರಬಹುದು ಎಂಬುದಾಗಿ ಅವರ ಚಿಕ್ಕಮ್ಮನವರಾದ ಲಕ್ಷಮ್ಮನವರು ಹೇಳಿದರು. ರಾರ್ಜರವರು ಗದ್ದೆ ಕಡೆ ಹೋಗಿರಬೇಕು. ವೃಥಾ ನನ್ನೊಂದಿಗೆ ವಾದಿಸಬೇಡಿ. ಸುಮ್ಮನೆ ಕಾಲು

ನೋಯಿಸಿಕೊಂಡು ಅವರಿಗಾಗಿ ಕಾಯುತ್ತಾ ಗೇಟಿನಲ್ಲಿ ನಿಂತಿರಬೇಡಿ. ನಾನು ಹೇಳುವುದನ್ನು ಕೇಳಿ" ಎಂದನು.

ಜವಾನನ ಮಾತನ್ನು ಕೇಳಿ ಥಾಮಸ್‌ರವರಿಗೆ ಸಿಟ್ಟು ಬಂದಿತು. ಕಾಸಿಗೆ ಯೋಗ್ಯತೆ ಇಲ್ಲದ ಕರ್ಮಾಂತರದೋನು ತನ್ನನ್ನು ಹೀಗೆ ಅನಾವಶ್ಯ ವಾಗಿ ಮಾತನಾಡಿಸಿಬಿಟ್ಟನಲ್ಲಾ ಎಂದು ತಿಳಿದುಕೊಂಡು ಅದೇ ಸರ್ಕಲ್ಲಿನ ಬಳಿ ಇದ್ದ ಪೋಲೀಸಿನವರಿಬ್ಬರನ್ನು ಕರೆದು ಕಾಕಿ ಉಡುಪನ್ನು ಕಳಚಿ ಬೇರೆ ಉಡುಪನ್ನು ತೊಟ್ಟುಕೊಂಡು ರಾಜ್ ಮನೆಯ ಹಿತ್ತಿಲ ಬಾಗಿಲ ಕಡೆ ಒಬ್ಬ, ಗೇಟಿನ ಕಡೆ ಮತ್ತೊಬ್ಬನು ಕಾವಲಾಗಿದ್ದು ರಾಜ್ ಎಲ್ಲಿಗೆ ಹೋಗುತ್ತಾನೆ –ಎಲ್ಲಿಂದ ಬರುತ್ತಾನೆ ಮತ್ತು ಸ್ನೇಹಿತರು ಇವರುಗಳನ್ನು ಗುರ್ತಿಸಿಕೊಂಡು ಹೇಳುವಂತೆ ಪೋಲೀಸಿನವರನ್ನು ಅಲ್ಲೇ ಹೊಂಚುಹಾಕುವಂತೆ ಹೇಳಿ ಅವರು ಸ್ಟೇಷನ್‌ಗೆ ಹೊರಟುಬಂದರು.

ನಳಿನಿಯ ಮನೆಯ ಬಳಿ ಪುನಃ ಹೋಗಿ ನೋಡಿದರು. ನಳಿನಿ ಮನೆ ಬೀಗಹಾಕಿತ್ತು.

ಆಸ್ಪತ್ರೆಯ ಕಡೆ ಹೋಗಿ ನೋಡೋಣ ಎಂದು ಹೊರಟರು. ಆಸ್ಪತ್ರೆಯ ಗೇಟಿನಿಂದ ಬಾಷಾ ಸಿಳ್ಳು ಹಾಕುತ್ತಾ ಬರುತ್ತಿದ್ದ.

ಬಾಷಾನನ್ನು ಮಾತನಾಡಿಸೋಣವೆಂದುಕೊಂಡರು ಥಾಮಸ್. ಆದರೆ ಅದ್ಯಾವ ಕಾರಣದಿಂದಲೋ ಆತನನ್ನು ಮಾತನಾಡಿಸಲಿಲ್ಲ. ನೆಟ್ಟಗೆ ಆಸ್ಪತ್ರೆಯ ಕಡೆಗೆ ಮಫ್ಲರನ್ನು ಕಟ್ಟಿಕೊಂಡು ಹೊರಟರು. ಫಸ್ಟ್ ವಾರ್ಡಿನ ಬಳಿ ಹೋಗಿ ನಿಂತರು.

ನಳಿನಿ ಕಾಣಿಸಲಿಲ್ಲ. ವಾರ್ಡ್ ಡಾಕ್ಟರ್ ಪುಟ್ಟಣ್ಣನವರು ಥಾಮಸ್ ರವರನ್ನು ಗುರ್ತಿಸದೆ,

"ಯಾರಪ್ಪಾ ನೀನು ?" ಎಂದರು.

"ನಾನು ಒಬ್ಬರನ್ನು ನೋಡಲು ಬಂದೆ" ಎಂದರು ಥಾಮಸ್ ಏನೂ ಅರಿಯದ ಅಮಾಯಕರಂತೆ.

"ಯಾರನ್ನು ನೋಡಬೇಕು ?"

"ಅವರ ಹೆಸರು ಮರೆತುಬಿಟ್ಟಿದ್ದೇನೆ. ಎದುರಿಗೆ ಕಂಡರೆ ಗುರ್ತಿಸಿ ಕೊಳ್ಳಬಲ್ಲೆ" ಎಂದರು. ಅಷ್ಟರಲ್ಲಿ ನಳಿನಿಯು ಕೈಯಲ್ಲಿ ಇಂಜಕ್ಷನ್ ಟ್ಯೂಬಿನ ಪ್ಯಾಕೆಟ್ಟನ್ನು ತೆಗೆದುಕೊಂಡು ಬರುತ್ತಿದ್ದಳು. ನಳಿನಿ ಆಸ್ಪತ್ರೆಯ

ಸ್ಟೋರಿನಿಂದ ಇಂಜಕ್ಷನ್ ಟ್ಯೂಬನ್ನು ತೆಗೆದುಕೊಂಡು ಬರುತ್ತಿರಬೇಕೆಂದು ಥಾಮಸ್‌ರವರು ಊಹಿಸಿದರು.

ನಳಿನಿ ಥಾಮಸ್‌ರವರನ್ನು ನೋಡಿದಳು. ಗುರುತು ಸಿಕ್ಕದಂತೆ ಮುಖ ಮರೆಮಾಡಿಕೊಂಡಿದ್ದರೂ ಸಹಾ ನಳಿನಿ ಥಾಮಸ್‌ರವರನ್ನು ನೋಡಿ ಪತ್ತೇದಾರ ಥಾಮಸ್‌ರವರೇ ಎಂದು ತಿಳಿದುಕೊಂಡಳು. ಅವಳ ಮನಸ್ಸಿನಲ್ಲಿ ಯಾವಾಗಲೂ ಪೋಲೀಸರು, ಸಿ.ಐ.ಡಿ.ಗಳು, ಪತ್ತೇದಾರರು, ಇನ್ಸ್ಪೆಕ್ಟರು, ನ್ಯಾಯಾಧಿಪತಿಯ ತೀರ್ಪು, ಕಾರಾಗೃಹವಾಸದ ದೃಶ್ಯಗಳು ಎದುರಿಗೆ ಬಂದು ನಿಂತು ಮಾಯವಾಗುತ್ತಿದ್ದುದರಿಂದ ಥಾಮಸ್‌ರವರನ್ನು ಗುರ್ತಿಸಿಕೊಂಡಳು.

ದೂರದಿಂದಲೇ ಥಾಮಸ್‌ರವರನ್ನು ನೋಡಿಕೊಂಡ ನಳಿನಿ ಫಸ್ಟ್ ವಾರ್ಡ್ ಸಮೀಪಿಸುವಾಗ ತಲೆತಗ್ಗಿಸಿಕೊಂಡು ವಾರ್ಡಿನೊಳಕ್ಕೆ ಪ್ರವೇಶಿಸುವುದರಲ್ಲಿದ್ದಳು.

ವಾರ್ಡಿನ ಮೆಟ್ಟಲ ಬಳಿಯೇ ನಿಂತಿದ್ದ ಥಾಮಸ್ ನಳಿನಿಯ ಕೈಯಲ್ಲಿದ್ದ ಇಂಜಕ್ಷನ್ ಟ್ಯೂಬಿನ ಪೆಟ್ಟಿಗೆಯನ್ನು ನೋಡಿದರು. ಆ ಪೆಟ್ಟಿಗೆಯ ಮೇಲೆ "ಪೆಟ್ಯುಟ್ರಿನ್ ಟೀ ಲ್ಯಾಕ್ಸ್" ಎಂದು ಬರೆದಿತ್ತು.

ಯಾರೋ ಮಲಬದ್ಧತೆಯಿಂದ ನರಳುತ್ತಿರುವ ರೋಗಿಗೆ ಕೊಡಲು ತೆಗೆದುಕೊಂಡು ಹೋಗುತ್ತಿದ್ದಾಳೆಂದು ತಿಳಿದುಕೊಂಡರು ಥಾಮಸ್.

ನಂತರ ನಳಿನಿಯನ್ನು ದೃಷ್ಟಿಸಿ ನೋಡಿದರು. ನಳಿನಿ ಭಯಗೊಂಡು ವಾರ್ಡಿನೊಳಕ್ಕೆ ಹೋದಳು.

ವಾರ್ಡ್ ಡಾಕ್ಟರ್ ಪುಟ್ಟಣ್ಣ ನಳಿನಿಯನ್ನು ಕುರಿತು,

"ಇವನ್ಯಾರೋ ಸಮಯವಿಲ್ಲದ ಸಮಯದಲ್ಲಿ ಯಾರನ್ನೋ ಕಾಣಬೇಕೆಂದು ಬಂದಿರುವನು. ಯಾರನ್ನು ನೋಡಬೇಕೆಂದು ತಿಳಿಸೆಂದರೆ, ಆತನು ನೋಡಬೇಕಾದವನ ಹೆಸರು ತಿಳಿಯದೆಂದು ಹೇಳಿದನು. ಮೊದಲು ಆತನನ್ನು ಇಲ್ಲಿಂದ ಹೋಗುವಂತೆ ಹೇಳು. ಅಪ್ಪಿತಪ್ಪಿ ಅಸಿಸ್ಟೆಂಟ್ ಮೆಡಿಕಲ್ ಆಫೀಸರ್ ಬಂದರೆ ನಮ್ಮ ಪ್ರಾಣ ಹೋಗುತ್ತೆ" ಎಂದರು.

ಅದಕ್ಕೆ ನಳಿನಿಯು,

"ಡಾಕ್ಟರ್ ಸಾರ್. ಇವರು ಪತ್ತೇದಾರ ಥಾಮಸ್ ಎಂದು. ರಾಮರಾಯರು ಸತ್ತದಿನ ನಮ್ಮೆಲ್ಲರನ್ನೂ ವಿಚಾರಿಸಲು ಬರಲಿಲ್ಲವೇ? ಅವರೇ ಇವರು. ದಯವಿಟ್ಟು ನೀವೇ ಇವರನ್ನು ಸ್ವಲ್ಪ ಹೊರಟುಹೋಗುವಂತೆ

ಮಾಡಿ. ನಿಮ್ಮಮೇಲೆ ಅವರಿಗೇನೋ ಸಂಶಯವಿದೆಯೆಂದು ಕಾಣುತ್ತೆ. ಅವರು ಮನಸ್ಸು ಮಾಡಿದರೆ ನಿನುಗೂ ಸಹಾ ಷಣ್ಮುಗಂನಿಗೆ ಆಗಿರುವ ಗತಿ ಆಗಬಹುದು" ಎಂದಳು ನಳಿನಿ.

ನಳಿನಿಯ ಮಾತನ್ನು ಕೇಳಿದ್ದೆ ಪುಟ್ಟಣ್ಣನವರಿಗೆ ಕೈಕಾಲು ಅದುರಲು ಆರಂಭವಾಯಿತು.

"ಅಯ್ಯೋ, ಈಗ ನಾನೇನು ಮಾಡಲಿ. ಒಂದುವೇಳೆ ನನ್ನ ಮೇಲೆ ಸಂದೇಹವಿದೆಯೆಂದು ತಿಳಿದು, ವಿಚಾರಣೆ ಮಾಡಿ ತಿಳಿದುಕೊಳ್ಳಬೇಕೆಂದು ನೆನೆದು, ಸ್ಟೇಷನ್ನಿಗೆ ಕರೆದುಕೊಂಡು ಹೋಗಿ–ನಿಜ ಹೇಳುತ್ತೀಯೋ ಇಲ್ಲವೋ ಎಂದು ಎರಡು ಬಿಗಿದರೆ ನನ್ನಗತಿ ಏನಾಗಬೇಕು" ಎಂದು ತತ್ತರಿಸಿ ಹೋದರು.... ಮುಖದಲ್ಲಿ ಬೆವರೂರಿತು. ನಳಿನಿಯನ್ನು ಕಂಡು,

"ನಳಿನಿ ದಯವಿಟ್ಟು ಅವನನ್ನು ಇಲ್ಲಿಂದ ಹೋಗುವಂತೆ ಹೇಳು" ಎಂದರು.

ಅದಕ್ಕೆ ನಳಿನಿಯು,

"ಸಾರ್ ನನಗೆ ಅರ್ಧ ಘಂಟೆ ಲೀವ್ ಕೊಡುವ ಹಾಗಿದ್ದರೆ ಆತನನ್ನು ಆಸ್ಪತ್ರೆಯ ಗೇಟಿನ ಆಚೆಗೆ ಓಡಿಸಿ ಬರುತ್ತೇನೆ" ಎಂದಳು.

"ಹಾಗೆಯೇ ಮಾಡು ನಳಿನೀ....ಹಾಗೆಯೇ ಮಾಡು...." ಎಂದು ಅಂಗಾಲಾಚಿದರು ಪುಟ್ಟಣ್ಣ.

ಇದೇ ಸಮಯವೆಂದು ತಿಳಿದು ನಳಿನಿ ನೆಟ್ಟಗೆ ಥಾಮಸ್‌ರವರ ಬಳಿ ಬಂದು,

"ಪತ್ತೇದಾರರೇ, ಇಲ್ಲಿ ಯಾರನ್ನು ಪತ್ತೆಮಾಡಲು ಬಂದಿರಿ?" ಎಂದಳು.

ಆ ಮಾತನ್ನು ಕೇಳಿದ ಥಾಮಸ್‌ರವರು ನಳಿನಿ ಒಬ್ಬ ಗಂಡುಬೀರಿ ಯಿರಬೇಕೆಂದೇ ಊಹಿಸಿದರು.

ಥಾಮಸ್‌ರವರೊಂದಿಗೆ ಮಾತನಾಡುವ ಸಮಯದಲ್ಲಿ ನಳಿನಿ ತನ್ನ ಜೀವನದ ಬಗ್ಗೆ ಕಿಂಚಿತ್ತೂ ಯೋಚನೆಯಿಲ್ಲದೆ ತನ್ನನ್ನು ತಾನೇ ಮರೆತು ಹೋಗಿದ್ದಳು. ಆಕೆಯ ಕಣ್ಣುಗಳು ನೈಜತೆ ತುಂಬಿ ನಿರ್ಮಲವಾಗಿತ್ತು.

ನಳಿನಿಯನ್ನು ಆ ರೂಪದಲ್ಲಿ ಕಂಡ ಥಾಮಸ್‌ರು,

"ಸಿಸ್ಟರ್ ನಾನು ಇಲ್ಲಿಗೆ ಬಂದಿರುವುದು ಒಂದು ರಹಸ್ಯ ಕೊಲೆಗಾರ

ನನ್ನು ಕಂಡುಹಿಡಿಯಲು ! ಆ ಕೊಲೆಗಾರನು ಸಿಕ್ಕುವನೆಂದೇ ನನ್ನ ನಂಬಿಕೆ. ಆದರೆ ಆತನು ನನಗಿಂತಲೂ ಒಂದು ಕೈ ಹೆಚ್ಚಾದವನಾಗಿದ್ದರೆ ನಾನು ಮಾಡುವುದೇನಿದೆ !"

"ವೇದಾಂತ, ಆಧಾರ, ಉದಾಹರಣೆ ಇವುಗಳನ್ನು ಬೆರೆಸಿ ಮಾತನಾಡ ಬೇಡಿ ಪತ್ತೇದಾರರೇ ? ನಿಮಗಿಲ್ಲಿ ಯಾರ ಮೇಲೆ ಸಂದೇಹವಿದೆಯೆಂಬು ದನ್ನು ತಿಳಿಸಿ. ನನಗೆ ಅವರ ಬಗ್ಗೆ ತಿಳಿದುದನ್ನು ಹೇಳುತ್ತೇನೆ."

"ಸಿಸ್ಟರ್ ನೀವು ಅಸಮಾಧಾನಪಡದಿದ್ದರೆ ನಾನು ನಿಮ್ಮೊಂದಿಗೆ ಒಂದೆ ರಡು ಮಾತುಗಳನ್ನಾಡಲು ಇಷ್ಟಪಡುತ್ತೇನೆ."

"ಓಹೋ ಅದಕ್ಕೇನಂತೆ ಯಾವ ಮಾತನ್ನಾದರೂ ಕೇಳಿ. ಹೇಳಲು ತಯಾರಾಗಿದ್ದೇನೆ" ಎಂದಳು.

ಆದರೆ ಆಸ್ಪತ್ರೆಯ ಕಡೆ ಅತ್ತಿಂದಿತ್ತ ಇತ್ತಿಂದತ್ತ ಸಂಚರಿಸುತ್ತಿದ್ದ ಜನ ಗಳು ಮಾತ್ರ ನಳಿನಿ ಮತ್ತು ಥಾಮಸ್‌ರವರು ನಿಂತು ಮಾತನಾಡುತ್ತಿರುವು ದನ್ನು ಕಂಡು ದುರುಗುಟ್ಟಿಕೊಂಡು ನೋಡುತ್ತಾ ಹೋಗುತ್ತಿದ್ದರು. ಅನಾವಶ್ಯಕವಾಗಿ ನಾಲ್ಕಾರು ಸಲ ಅದೇ ಕಡೆ ಅವರ ಮೇಲೆಯೇ ದೃಷ್ಟಿ ಯಿಡುತ್ತಾ ಹೋಗುತ್ತಿದ್ದರು.

ಅದರಲ್ಲೊಬ್ಬ "ನರ್ಸಮ್ಮ ಸಿಕ್ಕೋದು ತುಂಬಾ ಶ್ರಮ. ಸಿಕ್ಕಿದರಂತೂ ಇಂಥವರೇ ಸಿಕ್ಕಬೇಕು. ಯಾವ ರೋಗವೂ ಅಂಟುವುದಿಲ್ಲ" ಎನ್ನುತ್ತಿದ್ದ.

ಮತ್ತೊಬ್ಬ, "ಇನ್ನೂ ವ್ಯಾಪಾರ ಕುದಿರಿಲ್ಲವೆಂದು ಕಾಣುತ್ತೆ. ಸುಮ್ಮನಿರಿ, ಆ ಇಸಂ ಆ ಕಡೆ ಕದಲಿದನೆಂದರೆ ನಾವು ವ್ಯಾಪಾರಮಾಡಿ ಕುದುರಿಸಿಕೊಳ್ಳೋಣ" ಎನ್ನುತ್ತಿದ್ದ.

ಇನ್ನೂ ದಾರಿಹೋಕರನೇಕರು ಅವರವರ ಇಷ್ಟಬಂದಂತೆ ಮಾತನಾಡಿ ಕೊಳ್ಳುತ್ತಾ ಇದ್ದುದು ನಳಿನಿಯ ಕಿವಿಗೂ ಥಾಮಸ್‌ರವರಿಗೂ ಕೇಳಿಸುತ್ತಿತ್ತು.

ನಳಿನಿಯು "ಪತ್ತೇದಾರರೇ, ದಯವಿಟ್ಟು ನನ್ನನ್ನು ಸಂಜೆ ಆರು ಘಂಟೆ ನಂತರ ಬಂದು ಕಂಡು ಮಾತನಾಡಿರಿ. ಇಲ್ಲಿ ಸುತ್ತಾಡುವ ಜನ ನಮ್ಮಿಬ್ಬರ ಮೇಲೆ ಸಂದೇಹಿಸುವಂತಿದ್ದಾರೆ. ಅಲ್ಲದೆ ಆಸ್ಪತ್ರೆಯಲ್ಲಿ ಅನೇಕ ಕೆಲಸಗಳಿವೆ" ಎಂದಳು.

"ಆಗಲಿ ಸಿಸ್ಟರ್. ನಾನು ಸಂಜೆ ಬರುತ್ತೇನೆ. ನಿಮಗೆ ತುಂಬಾ ವಂದನೆ. ಸಂಜೆ ಬರುತ್ತೇನೆ" ಎಂದು ಹೇಳಿ ಹೊರಡಲುದ್ಯುಕ್ತರಾದರು.

ಅದೇ ಸಮಯದಲ್ಲಿ ಬಾಷಾ ರೋಗಿಯೊಬ್ಬನಿಗೆ ಸಿಗರೇಟು ತಂದು ಕೊಡಲು ಹೊರಗೆ ಅಂಗಡಿ ಕಡೆ ಹೋಗಿದ್ದವನು ಬರುತ್ತಿದ್ದ. ಥಾಮಸ್‌ರವರು ನಳಿನಿಯೊಂದಿಗೆ "ಸಂಜೆ ಬರುತ್ತೇನೆ. ತುಂಬಾ ವಂದನೆ" ಎಂದು ಆಡಿದ ಮಾತನ್ನು ಕೇಳಿಸಿಕೊಂಡ.

ಥಾಮಸ್‌ರವರು ಆಸ್ಪತ್ರೆಯ ಗೇಟನ್ನು ದಾಟಿದರು. ನಳಿನಿಯು ವಾರ್ಡನ್ನು ಸೇರಿದಳು. ವಾರ್ಡಿನೊಳಗೆ ಪ್ರವೇಶಿಸುವ ಹಾಗೆಯೇ ಬಾಷಾ ಅಟ್ಟಹಾಸದಿಂದ ಚಲನಚಿತ್ರ ನಟನಂತೆ "ಏನು ಸಿಸ್ಟರ್, ನಿನಗೆ ತುಂಬಾ ವಂದನೆ. ಸಂಜೆ ಬರುತ್ತೇನೆ" ಎಂದು ನಳಿನಿಯ ಕಿವಿಯಲ್ಲಿ ಬೀಳುವಂತೆ ಅಣಕಿಸಿ ಮಾತನಾಡಿದನು.

ಬಾಷಾ ಎಂದರೆ ಆ ವಾರ್ಡಿನಲ್ಲಿ ಬಲು ಸಲಿಗೆ. ವಾರ್ಡ್ ಡಾಕ್ಟರ್ ಪುಟ್ಟಣ್ಣನವರು,

"ಏನೋ ಬಾಷಾ. ಯಾವ ಸಿನಿಮಾಕ್ಕೆ ಹೋಗಿದ್ದೆಯೋ! ಡೈಲಾಗ್ಸ್ ಪಾಠ ಮಾಡಿಕೊಂಡು ಬಂದವನಂತಿದ್ದೀಯಲ್ಲಾ!" ಎಂದರು.

"ಇದು ಸಿನಿಮಾ ನಾಟಕಗಳ ಡೈಲಾಗ್ಸ್ ಅಲ್ಲಾ ಸಾಮಿ. ನಿಜವಾಗಿ ಕಣ್ಣಿಂದ ನೋಡಿದ ಪ್ರತ್ಯಕ್ಷ ಪ್ರೇಮಿಗಳಿಬ್ಬರ ಡೈಲಾಗ್ಸ್" ಎಂದನು ನಳಿನಿಯನ್ನು ಓರೆಗಣ್ಣಿನಿಂದ ನೋಡುತ್ತಾ.

ಬಾಷಾವಿನ ಕಣ್ಸನ್ನೆ, ಮುಗುಳುನಗೆ, ತುಂಟತನದ ಮಾತುಗಳು, ನಳಿನಿಯನ್ನು ಕೋಪಕ್ಕೀಡುಮಾಡಿತು.

"ಬಾಷಾ, ಏನೋ! ಮಾನಮರ್ಯಾದೆಯಿಲ್ಲದೆ ಮಾತನಾಡುತ್ತಿದ್ದೀ. ಹಿಂದುಮುಂದು ನೋಡಿ ಮಾತನಾಡು. ನೀನು ಈ ಆಸ್ಪತ್ರೆಯಲ್ಲಿ ಹತ್ತಾರು ವರ್ಷ ಕೆಲಸಮಾಡಿ ಇಲ್ಲಿ ಕೆಲಸ ಮಾಡುವ ಪ್ರತಿಯೊಬ್ಬರ ಬಳಿಯೂ ಸಲಿಗೆ ತೋರಿಸಿ ನಿನ್ನಿಷ್ಟ ಬಂದಂತೆ ಮಾತನಾಡಬಹುದು. ಆದರೆ ನಾನು ನಿನ್ನ ಮಾತುಗಳಿಗೆ ಜಗ್ಗುವವಳಲ್ಲ. ನಾಲಿಗೆ ಹಿಡಿದು ಮಾತನಾಡು. ಸುಮ್ಮನೆ ವಟವಟನೆಂದು ಮಾತನಾಡಿಬಿಟ್ಟರೆ ಕೊನೆಗೆ ಸರಿಯಾದ ಶಿಕ್ಷೆ ಅನುಭವಿಸಬೇಕಾದೀತು" ಎಂದಳು.

"ಸುಮ್ಮನಿರು ಸಾಕು. ನನಗೆ ಗೊತ್ತಿಲ್ಲವೇ ನಿನ್ನ ಶೋಕು. ಮರ್ಯಾದೆ ಕೆಡಿಸಿಕೊಳ್ಳಬೇಕೆಂಬ ಆಸೆಯಿದ್ದರೆ ಮಾತನ್ನು ಮುಂದುವರಿಸು" ಎಂದನು.

"ಸರಿ, ನಾಳೆ ಮೆಡಿಕಲ್ ಆಫೀಸರ ಬಳಿ ನಿನ್ನ ವಿಷಯ ತಿಳಿಸುತ್ತೇನೆ" ಎಂದಳು ನಳಿನಿ ಉಗ್ರಾವತಾರದೊಂದಿಗೆ.

"ಮೆಡಿಕಲ್ ಆಫೀಸರೇನು, ಅವರಪ್ಪನ ಹತ್ತಿರ ತಿಳಿಸು. ಭಯವಿಲ್ಲ."

"ನಾಳೆ ಗೊತ್ತಾಗುತ್ತೆ ನಿನಗೆ."

"ನನಗೆ ಗೊತ್ತಾಗುವುದೇನಿದೆ. ಮೆಡಿಕಲ್ ಆಫೀಸರ್ ನನ್ನನ್ನೇನೂ ಮಾಡಲು ಸಾಧ್ಯವಿಲ್ಲ. ನನ್ನ ಸರ್ವೀಸಿನಲ್ಲಿ ಇಂತಹ ಮೆಡಿಕಲ್ ಆಫೀಸರು ಎಷ್ಟೋ ಜನ ಬಂದು ಹೋದದ್ದಾಯಿತು" ಎಂದನು.

ವಾರ್ಡ್ ಡಾಕ್ಟರ್ ಪುಟ್ಟಣ್ಣನವರಿಗೂ ಬಾಷಾವಿನ ಮಾತುಗಳನ್ನು ತಡೆದುಕೊಳ್ಳಲಾಗಲಿಲ್ಲ.

"ಬಾಯಿ ಮುಚ್ಚೋ ಸಾಕು. ಸುಮ್ಮನೆ ತಲೆಹರಟಬೇಡ" ಎಂದರು.

"ನೀವು ಸುಮ್ಮನಿರ್ರೀ ಸಾಕು. ನೀವ್ಯಾರು ನನ್ನ ಬಾಯಿ ಮುಚ್ಚಿಸುವವರು. ನೀವೂ ಸಹಾ ಇವಳನ್ನು ಗಂಟುಹಾಕಿಕೊಳ್ಳಿ. ನಿಮಗೂ ಮಜಾ ಕೊಡ್ತಾಳೆ. ಈಗ ಬಂದುಹೋದನಲ್ಲಾ ಪತ್ತೇದಾರ ಥಾಮಸ್ ! ಅವನಿಗೂ ಬಲೆಯಲ್ಲಿ ಹಾಕಿಕೊಂಡಿದ್ದಾಳೆ. ಈಗ ನಿಮಗೂ ಹಾಕಿಕೊಳ್ಳುವುದರಲ್ಲಿದ್ದಾಳೆ. ನಿಮ್ಮ ತಲೆ ಸವರಿ ನೈಸ್ ಮಾಡಿಕೊಂಡುಬಿಟ್ಟರೆ ಸಾಕು-ಎನ್ನುವ ಹಂಬಲ ಆಕೆಗೆ. ಆಕೆಯ ಕಟ್ಟು ಮೊಲೆಗಳನ್ನು ಹಿಡಿತದಲ್ಲಿಟ್ಟುಕೊಂಡು ಅನುಭವಿಸಬೇಕೆಂಬ ಆಸೆ ನಿಮಗೆ. ಕೊನೆಗೆ ನನ್ನ ಬಾಯಲ್ಲಿ ಮಾತ್ರ ಬರೀ ಮಣ್ಣೇ! ನಾನು ಮಾಡಿದ ಪಾಪವೇನಿದೆ ? ಆಕೆಗೆ ಗೊತ್ತಿದೆ ನಾನು ಎಂತಹ ಒಳ್ಳೆಯವನೆಂದು. ನಾನು ಮನಸ್ಸು ಮಾಡಿದರೆ ಸಾಕು-ಇವಳು ಒಂದರೆಕ್ಷಣದಲ್ಲಿ ಖೈದಿಯಾಗಬೇಕು. ಇನ್ನೂ ನಾನು ಸರಿಯಾಗಿ ಹೇಳಿಬಿಡಬಹುದು. ಆದರೆ....ಆದರೆ...."

"ನಿನಗೆಷ್ಟೋ ದುರಹಂಕಾರ. ವಾರ್ಡಿನಿಂದ ಹೊರಗೆ ಹೋಗು. ಇಲ್ಲಿ ಕಾಲಿಡಬೇಡ" ಎಂದು ಗದರಿಸಿ ಪುಟ್ಟಣ್ಣನವರು ಬಾಷಾವಿನ ಕೆನ್ನೆಯ ಮೇಲೆ ಫಳಾರನೆ ಹೊಡೆದರು.

ನಳಿನಿ ಮುಖ ಸಣ್ಣಗೆ ಮಾಡಿಕೊಂಡು ಬಾಷಾವಿನ ಮಾತುಗಳನ್ನು ಕೇಳುತ್ತಿದ್ದಳು.

ಏಟುಬಿದ್ದದ್ದೇ ತಡ. ಬಾಷಾ ನೆಟ್ಟಗೆ ಓಡಿದ. ಪುನಃ ಹಿಂತಿರುಗಿ ವಾರ್ಡ್ ಡಾಕ್ಟರ್ ಪುಟ್ಟಣನವರ ಬಳಿ ಬಂದು,

"ನೋಡೋ ಪುಟ್ಟಣ್ಣ. ಇದು ಬೆಂಗಳೂರಿದೆ. ಇದು ಕೆಂಚೇನ ಹಳ್ಳಿಯಲ್ಲ. ಇಲ್ಲಿ ನಾನು ಲಡತ್ ಕೊಡೋದಕ್ಕೂ ಸರಿ, ಲಡತ್ ಮಾಡೋ ದಕ್ಕೂ ಸರಿ. ಸಿದ್ಧವಾಗಿಸ್ತೀನಿ. ಇನ್ನು ಒಂದರ್ಧ ಘಂಟೆಯಲ್ಲಿ ನಿನ್ನನ್ನು ಏನು ಮಾಡುತ್ತೇನೆಂದು ತಿಳಿದುಕೋ. ನನ್ನ ಗ್ಯಾಂಗ್ ಬಂದಿತೆಂದರೆ ಸಾಕು. ನಿನ್ನ ಮೂಳೆಗಳೆಲ್ಲವೂ ಪುಡಿಪುಡಿಯಾಗಿಬಿಡುತ್ತೆ" ಎಂದು ಹೇಳಿ ರಭಸದಿಂದ ಓಡುವುದರಲ್ಲಿದ್ದವನು ಪುನಃ,

"ಏ ನಳಿನೀ, ನೀನು ಷಣ್ಮುಗಂನಿಗೆ ತೋರಿಸಿದೆಯಲ್ಲಾ ಸಿನಿಮಾ! ಹಾಗೆ ನನ್ನ ಬಳಿಯೂ ತೋರಿಸಲು ಸಾಧ್ಯವಿಲ್ಲ. ನಾಳೆ ನೀನು ಆಸ್ಪತ್ರೆಗೆ ಡ್ಯೂಟಿಗೆ ಬರುವುದು ನೋಡುತ್ತೇನೆ" ಎಂದು ಹೇಳಿ ಓಡಿದನು.

ಪುಟ್ಟಣ್ಣನವರು "ಶುದ್ಧ ಈಡಿಯೆಟ್ ಇದ್ದ ಹಾಗೆ ಇದ್ದಾನೆ" ಎಂದು ಗೊಣಗುಟ್ಟುತ್ತಾ ವಾರ್ಡಿನ ಒಳಗೆ ಹೋದರು. ನಳಿನಿ ಚಿಂತಾಕ್ರಾಂತ ಳಾಗಿದ್ದಳು.

ವಾರ್ಡಿನಲ್ಲಿದ್ದ ರೋಗಿಗಳೆಲ್ಲರೂ ಬಾಷಾವನ್ನು ದೂಷಿಸಲು ಮೊದಲಾ ದರು. ಬಾಷಾವಿನ ಚರ್ಯೆಯೂ ರೋಗಿಗಳಿಗೆ ಹಿಡಿಸುತ್ತಿರಲಿಲ್ಲ. ರೋಗಿ ಗಳಿಗೆಂದು ಕೊಡುತ್ತಿದ್ದ ರೊಟ್ಟಿ, ಹಾಲು, ಮತ್ತು ಸಕ್ಕರೆ ಮತ್ತು ರೋಗಿಗಳ ಸಂಬಂಧೀಕರು ಮನೆಯಿಂದ ತಂದುಕೊಡುತ್ತಿದ್ದ ತಿಂಡಿ ತಿನಸುಗಳನ್ನೆಲ್ಲಾ ರೋಗಿಗಳಿಗೆ ಹೆದರಿಸಿ ತಾನು ಅಪಹರಿಸಿಕೊಂಡುಹೋಗಿ ಅದನ್ನು ಅಗ್ಗವಾಗಿ ಮಾರಿ, ಬಂದ ಹಣದಲ್ಲಿ ಚೆನ್ನಾಗಿ ಕುಡಿದು ಕಂಡಕಂಡಂತೆ ಮಾತಾಡಿ ದೂಷಿ ಸುತ್ತಿದ್ದುದರಿಂದ ರೋಗಿಗಳೂ ಸಹಾ ಆತನ ಮೇಲೆ ದ್ವೇಷಾಸೂಯೆಗಳ ನ್ನಿಟ್ಟೇ ಇದ್ದರು.

"ನಾವೂ ಮೆಡಿಕಲ್ ಆಫೀಸರ ಬಳಿ ಅವನು ಕೆಟ್ಟ ಚರ್ಯೆಯನ್ನು ಹೇಳುತ್ತೇವೆ" ಎಂದರು ಅಲ್ಲಿದ್ದ ರೋಗಿಗಳೆಲ್ಲಾ.

ಮಿಕ್ಕ ಡಾಕ್ಟರುಗಳೂ, ವಾರ್ಡ್ ಬಾಯ್ ಮತ್ತು ಆಸ್ಪತ್ರೆಗೆ ಸೇರಿದ ನೌಕರರೆಲ್ಲರೂ ಪುಟ್ಟಣ್ಣನವರಿಗೆ ಸಮಾಧಾನ ಹೇಳಿದರು.

ಯಾರು ಯಾವ ಸಮಾಧಾನ ಹೇಳಿದರೂ ನಳಿನಿಯು ಮಾತ್ರ ಹುಚ್ಚು ಹಿಡಿದವಳಂತೆ ಸುಮ್ಮನೆ ಒಂದು ಕಡೆ ನಿಂತಿದ್ದಳು. ಅವಳ ಯೋಚ ನೆಯು ಅನೇಕ ಕಡೆ ಸಾಗುತ್ತಿತ್ತು.



೧೩

ಪತ್ತೇದಾರರು ಪೋಲೀಸ್ ಸ್ಟೇಷನನ್ನು ಸೇರಿದರು. ಅಷ್ಟರಲ್ಲೇ ರಾಜ್ ಮನೆಯ ಮುಂದೆ ಕಾವಲಿದ್ದ ಭೀಮಸಿಂಗನು ಓಡಿಬಂದು,

"ಸ್ವಾಮಿಾ, ರಾಜ್ ಈಗತಾನೇ ಕಾರಿನಲ್ಲಿ ಎಲ್ಲಿಗೋ ಹೋದರು."

"ಆ ಕಾರನ್ನು ನೀವು ಹಿಂಬಾಲಿಸಲಿಲ್ಲವೇ ?"

"ಇಲ್ಲ ಸಾರ್."

ಪತ್ತೇದಾರ ಥಾಮಸ್‌ರವರು ಅವಸರವಸರವಾಗಿ ಸ್ಟೇಷನ್ ಮುಂದಿದ್ದ ಟ್ಯಾಕ್ಸಿಯನ್ನು ಗೊತ್ತುಮಾಡಿಕೊಂಡು ಹೊರಟರು. ಟ್ಯಾಕ್ಸಿ ಡ್ರೈವರನು ಬಲು ಹುಷಾರಾಗಿಯೇ ಒಳ್ಳೇ ಸ್ಪೀಡಿನಲ್ಲಿಯೇ ಹೋಗುತ್ತಿದ್ದನು.

ಪುನಃ ಥಾಮಸ್‌ರವರಿಗೆ ಶನಿಕಾಟ ಹಿಡಿಯಿತು. ಟ್ಯಾಕ್ಸಿ ರಾಜ್ ಮನೆಯ ಮುಂದೆ ನಿಂತಿತು. ಕಾವಲು ನಿಂತಿದ್ದವರು, ರಾಜ್‌ನ ಕಾರು ಬಲಗಡೆಗೆ ಹೋಯಿತೆಂದೂ, ಅದು ಹೊರಟು ಆಗಲೇ ಒಂದು ಗಂಟೆಯಾಗುತ್ತಾ ಬಂದಿತೆಂದೂ ಹೇಳಿದರು.

ಥಾಮಸ್‌ರವರಿಗೆ ಮನಸ್ಸು ಥತ್ ಎನಿಸಿತು. ಪ್ರತಿಯೊಂದು ಕೆಲಸವೂ ಹೀಗೆಯೇ ಆಗುತ್ತಿದೆಯಲ್ಲಾ ಎನ್ನುವ ಸಂಕಟ ಪ್ರಾಪ್ತವಾಯಿತು. ಏನಾದರೂ ಸರಿ, ಇದೇ ರೋಡಿನಲ್ಲೇ ಹೋಗಿನೋಡುವುದೇ ಲೇಸೆಂದುಕೊಂಡರು. 'ಪುನಃ ನಳಿನಿಯ ಮನೆಯ ಕಡೆ ಹೋಗಿ ನೋಡೋಣವೆ' ಎಂದುಕೊಂಡು ನಳಿನಿಯ ಮನೆಯ ಬಳಿ ಹೋಗಿ ನೋಡಿದರು. ಆ ಮನೆ ಬೀಗ ಹಾಕಿತ್ತು.

ಸ್ಟೇಷನ್‌ಗೆ ಹೊರಡೋಣ ಎಂದುಕೊಂಡು ಹೊರಟರು ಥಾಮಸ್. ಟ್ಯಾಕ್ಸಿಯು ಸರ್ಕಲ್ಲಿನ ಮುಂದೆ ಹೋಗಲಾಗಲಿಲ್ಲ. ಜನರ ಗುಂಪು ಹೇಳತೀರದು. ನಾಲ್ಕೈದು ಮಂದಿ ಪೋಲೀಸರು ಆ ಗುಂಪನ್ನು ಚದುರಿಸಲು ವಿಶ್ವಪ್ರಯತ್ನ ಮಾಡುತ್ತಿದ್ದರು.

ಅಲ್ಲಿ ನೆರೆದಿದ್ದ ಪ್ರತಿಯೊಬ್ಬರ ಬಾಯಲ್ಲೂ 'ಯಾರೋ ಕೂಲಿಗಾರನ ಮೇಲೆ ಲಾರಿ ಹತ್ತಿದೆ' ಎಂಬುವ ಮಾತೇ ಹರಡಿತ್ತು!

ಟ್ಯಾಕ್ಸಿಯಿಂದಿಳಿದು ಗುಂಪಿನೊಳಗೆ ನುಗ್ಗಿದರು. ಲಾರಿಯ ಮುಂದಿನ ಚಕ್ರವು ಸೊಂಟದಮೇಲೆ ಬಂದಿದೆ. ಎರಡು ಕೈಗಳೂ ಅರ್ಧಕ್ಕರ್ಧ ತುಂಡಾಗಿಲ್ಲದಿದ್ದರೂ ಸ್ವಾಧೀನವಿಲ್ಲ. ಲಾರಿಗೆ ಸಿಕ್ಕಿರುವವನು ಮೂರ್ಛಿತನಾಗಿದ್ದಾನೆ. ಅಷ್ಟರಲ್ಲಿ ಆಸ್ಪತ್ರೆಯ ಆಂಬುಲೆನ್ಸ್ ಕಾರು ಧ್ವನಿ ಮಾಡುತ್ತಾ ಆ

ಜಾಗಕ್ಕೆ ಬಂದಿತು. ಗಾಯಗೊಂಡವನನ್ನು ಎತ್ತಿ ಕಾರಿನೊಳಗೆ ಮಲಗಿಸಿದರು. ಲಾರಿಯ ಕೆಳಗೆ ರಕ್ತ ಹರಿದು ಪಕ್ಕದ ಹಳ್ಳದಲ್ಲಿ ಹೆಪ್ಪುಗಟ್ಟುತ್ತಿತ್ತು.

ಸಿ.ಐ.ಡಿ.ಗಳೂ ಥಾಮಸ್‌ರವರೂ ಟ್ಯಾಕ್ಸಿಯಲ್ಲಿ ಕುಳಿತು ಆಂಬುಲೆನ್ಸ್ ಕಾರನ್ನು ಹಿಂಬಾಲಿಸಿದರು.

ಆಸ್ಪತ್ರೆಯ ಡ್ಯೂಟಿ ಡಾಕ್ಟರು ಗಾಯಗೊಂಡವನನ್ನು ಪರೀಕ್ಷಿಸಿ ತಕ್ಷಣ ಚಿಕಿತ್ಸೆ ನಡೆಸಿದರು.

ಗಾಯಗೊಂಡವನ ತಲೆಯಮೇಲೆ ಚಕ್ರ ಹರಿದು ತಲೆಯ ಚರ್ಮವೆಲ್ಲ ಕಿತ್ತುಹೋಗಿ ಕೆಳಕ್ಕೂ ಬೀಳದೆ ತಲೆಗೂ ಅಂಟಿಕೊಳ್ಳದೆ ಜೋಲಾಡುತ್ತಿತ್ತು.

ಸಧ್ಯಕ್ಕೆ ಅಲ್ಲಿದ್ದ ಡ್ಯೂಟಿ ಡಾಕ್ಟರು ಸರಿದುಹೋಗಿದ್ದ ಚರ್ಮದ ತಲೆಗೆ ಟಿಂಕ್ಚರನ್ನು ಹಾಕಿದರು. ಗಾಯಗೊಂಡವನ ಆರ್ತನಾದ ಎಲ್ಲ ದಿಕ್ಕುಗಳಿಗೂ ಕೇಳುವಂತಿತ್ತು. ತಲೆಯೆಲ್ಲಾ ಕೆಂಪಾಗಿದ್ದು ಮಾಂಸಖಂಡಗಳು ಎದ್ದುಕಾಣುತ್ತಿತ್ತು. ಕೈಗಳಿಗೂ ಸೊಂಟಕ್ಕೂ ಬ್ಯಾಂಡೇಜ್ ಕಟ್ಟಿದ್ದರು.

ಗಾಯಗೊಂಡವನ ಮುಖದ ಪರಿಚಯ ಮಾಡಿಕೊಳ್ಳಲು ಯಾರಿಗೂ ಸಾಧ್ಯವಾಗಲಿಲ್ಲ. ಥಾಮಸ್‌ರವರು ಅವನ ಬಾಯಿಂದ ಏನು ವಿಷಯ ಬರುತ್ತದೋ ಅದನ್ನು ತಿಳಿದುಕೊಳ್ಳಲು ಆತುರದಿಂದ ಕಾದಿದ್ದರು.

ಗಾಯಗೊಂಡವನ ಆರ್ತನಾದ ನಿಲ್ಲಲೇ ಇಲ್ಲ. ಒಂದೇ ಕೂಗು, ಒಂದೇ ಗಲಾಟೆ. ಆಸ್ಪತ್ರೆಯೆಲ್ಲವೂ ಕಿತ್ತುಹೋಗುವಂತೆ ಕಿರಚುತ್ತಿದ್ದ. ಡಾಕ್ಟರು ಅವನನ್ನು ಸಮಾಧಾನ ಪಡಿಸುತ್ತಿದ್ದರು.

ಲಾರಿಯವನ ಸ್ಟೇಟ್‌ಮೆಂಟ್ ಬರೆದುಕೊಳ್ಳುವುದರಲ್ಲಿದ್ದರು ಥಾಮಸ್. ಲಾರಿಯ ಡ್ರೈವರ್ ಥಾಮಸ್‌ರ ಕಾಲನ್ನು ಹಿಡಿಯುತ್ತಿದ್ದನು. ಲಾರಿಯ ಮಾಲೀಕನೊಂದಿಗೂ ಅನೇಕ ಚರ್ಚೆ ಮಾಡುತ್ತಿದ್ದರು ಥಾಮಸ್.

ಅಷ್ಟರಲ್ಲಿ ಒಬ್ಬ ಡಾಕ್ಟರು ಓಡಿಬಂದು "ಪತ್ತೇದಾರರೇ, ಗಾಯಗೊಂಡವನು ಮಾತನಾಡುವಂತಿದೆ. ಜಾಗ್ರತೆ ಬನ್ನಿ !" ಎಂದರು.

ಥಾಮಸ್‌ರವರು ಲಾರಿ ಡ್ರೈವರ್ ಮತ್ತು ಮಾಲೀಕನನ್ನು ಅಲ್ಲಿಯೇ ಇರುವಂತೆ ಹೇಳಿ ಗಾಯಗೊಂಡವನ ಬಳಿ ಓಡಿದರು.

ಗಾಯಗೊಂಡವನಿಗೆ ಸ್ಮೃತಿ ತಪ್ಪಿತ್ತು. ಬಾಯಿಗೆ ಬಂದದ್ದನ್ನು ಮಾತನಾಡುತ್ತಿದ್ದನು. ಅವನಾಡುತ್ತಿದ್ದ ಮಾತು ಅವನಿಗೇ ಅರ್ಥವಾಗದು. ಥಾಮಸ್‌ರವರು ಅವನನ್ನು ಆಗತಾನೇ ನೋಡಿದರು. ಆತನುಟ್ಟಿದ್ದ ಬಟ್ಟೆಯ

ಗುರ್ತಿನಿಂದ ಪರಿಚಯವು ಮನಸ್ಸಿಗೆ ನಾಟಿತು. ಅವನು ನರಳುತ್ತಲೇ ಇದ್ದ.

ಥಾಮಸ್‌ರವರ ಪಕ್ಕದಲ್ಲೇ ಡಾಕ್ಟರು ನಿಂತಿದ್ದರು. ಥಾಮಸ್‌ರವರು, "ನಿನ್ನ ಹೆಸರೇನಪ್ಪಾ !" ಎಂದರು.

ನರಳುತ್ತಿದ್ದವನು ಮಾತನಾಡಲಿಲ್ಲ. ಅರ್ಧ ಘಂಟೆಯ ನಂತರ, "ನನ್ನ ಹೆಸರು ಬಾಷಾ !" ಎಂದ. ಪತ್ತೇದಾರರು ಅವಾಕ್ಕಾದರು.

"ನೀನು ಏನು ಕೆಲಸ ಮಾಡುತ್ತಿದ್ದೆಯಪ್ಪಾ !"

"ವಿಸೆಂಟ್ ಆಸ್ಪತ್ರೆಯ ಫಸ್ಟ್ ವಾರ್ಡಿನಲ್ಲಿ ವಾರ್ಡ್‌ಬಾಯ್ ಕೆಲಸ ಮಾಡುತ್ತಿದ್ದೆ" ಎಂದ ತೊದಲುನುಡಿಗಳಿಂದ. ಆ ಎರಡು ಪ್ರಶ್ನೆಗಳಿಗೆ ಉತ್ತರ ಕೊಡಬೇಕಾದರೆ ಅವನ ಪ್ರಾಣ ಅವನಲ್ಲಿರಲಿಲ್ಲ. ಪುನಃ ಸ್ಮೃತಿ ತಪ್ಪುತ್ತಿತ್ತು.

ಥಾಮಸ್‌ರವರೂ ಡಾಕ್ಟರೂ ಅವನ ಪಕ್ಕದಲ್ಲೇ ಕೂತರು. ಡಾಕ್ಟರು, "ಇವನು ಬಹಳ ಪೋಕರಿಯಾಗಿದ್ದ ಪತ್ತೇದಾರರೇ ! ಅದೂ ಅಲ್ಲದೆ ಈ ಆಸ್ಪತ್ರೆಯಲ್ಲಿ ಹೆಚ್ಚು ದಿನ ಸರ್ವೀಸ್ ಮಾಡಿದ್ದೇನೆಂಬ ಹೆಮ್ಮೆಯಿಂದ ಮಾನಮರ್ಯಾದೆಯಿಲ್ಲದೆ ಮನಸ್ಸಿಗೆ ಮಾತನಾಡಿಬಿಡುತ್ತಿದ್ದ. ಅನ್ಯಾಯ, ಪಾಪ ! ಈಗ ಈ ಅಪಮೃತ್ಯುವಿಗೀಡಾಗಿದ್ದಾನೆ" ಎಂದರು.

"ಈಗ ಈತನು ಬದುಕಲಾರನೇ ಡಾಕ್ಟರ್ !"

"ಹೇಗೆ ಬದುಕಲು ಸಾಧ್ಯ ! ಮೈಯಲ್ಲಿನ ಅರ್ಧ ರಕ್ತವು ಅಡ್ಡರಸ್ತೆಗೆ ಆಹುತಿಯಾಗಿದೆ. ಇನ್ನೆರಡು ಘಂಟೆಗಳ ಕಾಲ ಬದುಕಿದ್ದರೆ ಹೆಚ್ಚು."

ಅಲ್ಲಿ ಥಾಮಸ್ ಮತ್ತು ಡಾಕ್ಟರ ವಿನಹ ಮತ್ಯಾರೂ ಇರಲಿಲ್ಲ.

ನರಳುತ್ತಿದ್ದ ಬಾಷಾ ಪುನಃ ಮಾತನಾಡಲಾರಂಭಿಸಿದ.

ಥಾಮಸ್‌ರವರು ಬಾಷಾವನ್ನು ಮೆಲುದನಿಯಿಂದ,

"ಬಾಷಾ, ನಿನ್ನ ಮೇಲೆ ಲಾರಿ ಬಂದಿತಲ್ಲಾ, ತಪ್ಪು ಯಾರದ್ದು ? ನೀನಾಗಿ ನೀನೇ ಸಿಕ್ಕಿದೆಯೋ ಅಥವಾ ಲಾರಿ ಡ್ರೈವರನ ತಪ್ಪೋ ?"

"ತ-ಪ್ಪು .... ನ-ನ್ನ-ದೇ" ಎಂದ. ನಂತರ,

"ರಾ-ಮು-ರಾ-ಯ-ರ-ನ್ನು ಕೊಲೆ ಮಾಡಿದವನು ರಾ-ಜಾ-ಮತ್ತು" ಎಂದು ಅಲ್ಲಿಗೇ ನಿಲ್ಲಿಸಿದ. ಮುಂದಕ್ಕೆ ಆತನ ನಾಲಗೆ ತಿರುಗಲಿಲ್ಲ.

ಎಲ್ಲೋ ದೂರದಲ್ಲಿ ನಾಯಿಗಳು ಗುಂಪಾಗಿ ಸೇರಿ ಬಗುಳುವಂತೆಯೂ ಅಳುವಂತೆಯೂ ಕೇಳಿಬರುತ್ತಿತ್ತು.

ಬಾಷಾ ತಣ್ಣಗಾಗಿದ್ದ. ನರಳುವಿಕೆ ನಿಂತಿತ್ತು. ಆತನ ಒರಟುತನ

ಶಾಂತವಾಯಿತು. ರೋಷಾವೇಶಗಳಿಂದ ತಾಂಡವವಾಡುತ್ತಿದ್ದ ಆತನ ಮುಖವು ಮುಗುಳ್ನಗೆಯನ್ನು ಹೊಂದಿತ್ತು.

ಡಾಕ್ಟರು ಮುಟ್ಟಿನೋಡಿದರು. 'ಬಾಷಾ ಬಾಳನ್ನು ಬಿಟ್ಟು ಹಾರಿದ' ಎಂದು ಪತ್ತೇದಾರರಿಗೆ ತಿಳಿಸಿದರು.

ಪತ್ತೆದಾರರ ಕಣ್ಣುಗಳಿಂದ ಒಂದೆರಡು ಹನಿಗಳು ಉದುರಿತು. ಬಾಷಾವಿನ ಆತ್ಮಕ್ಕೆ ಶಾಂತಿಯುಂಟಾಗಲೆಂದು ಮಹಾತ್ಮ ಏಸುಕ್ರಿಸ್ತನನ್ನು ಬೇಡುತ್ತಿದ್ದರು.

'ಬಾಷಾ ಸತ್ತುಹೋದ' ಎಂಬ ಸುದ್ದಿಯು ಆಸ್ಪತ್ರೆಯಲ್ಲೆಲ್ಲಾ ಹರಡಿತು. ನಳಿನಿ ಮತ್ತು ವಾರ್ಡ್ ಡಾಕ್ಟರ್ ಪುಟ್ಟಣ್ಣನವರ ಕಿವಿಗೂ ಬಿತ್ತು. ಫಸ್ಟ್‌ವಾರ್ಡಿನ ರೋಗಿಗಳಿಗಂತೂ ಹಾಲಿನಲ್ಲಿ ಸಕ್ಕರೆ ಬಿದ್ದಂತಾಯಿತು. ಇನ್ನುಮೇಲಾದರೂ ನೆಮ್ಮದಿಯಾಗಿ ನಮಗೆ ಆಸ್ಪತ್ರೆಯವರಿಂದ ಹಂಚಲ್ಪಡುವ ಹಾಲು, ರೊಟ್ಟಿಯನ್ನು ತಿನ್ನಬಹುದು ಎಂದುಕೊಳ್ಳುತ್ತಿದ್ದರು.

"ನಳಿನಿ, ಈಗ ನಮ್ಮ ಗತಿ ಏನಾಗಬೇಕು?" ಎಂದರು ಪುಟ್ಟಣ್ಣ.

"ಸುಮ್ಮನಿರಿ ಡಾಕ್ಟರೇ. ಯಾಕೆ ಹೀಗೆ ಹೆದರಿ ಸಾಯುತ್ತೀರಿ."

"ಬಾಷಾ ಸಾಯುವಾಗ ಒಂದುವೇಳೆ ನಮ್ಮಮೇಲೆ ಏನಾದರೂ ಹೇಳಿ ಸತ್ತಿರಬೇಕು ನಳಿನಿ."

"ಹಾಗೆ ಹೇಳಿ ಸತ್ತಿದ್ದರೆ ನಮಗೆ ತುಂಬ ಒಳ್ಳೆಯದಾಯಿತು."

ಪುಟ್ಟಣ್ಣ ನಳಿನಿಯೊಂದಿಗೆ ಹೆಚ್ಚು ಮಾತನಾಡಲಿಲ್ಲ.

ಥಾಮಸ್‌ರವರು ಬಾಷಾ ಮರಣಹಾಸಿಗೆಯಲ್ಲಿ ಹೇಳಿದ ಮಾತುಗಳು ಬರೆದುಕೊಂಡಿದ್ದರು. ಸಾಕ್ಷ್ಯಕ್ಕಾಗಿ ಡಾಕ್ಟರ ಕೈಬರಹವನ್ನು ಹಾಕಿಕೊಂಡಿದ್ದರು. ನಂತರ ಪೋಲೀಸ್ ಸ್ಟೇಷನ್ನಿಗೆ ನಡೆದರು.

ಸ್ಟೇಷನ್ನಿನಲ್ಲಿ ಇನ್ಸ್‌ಪೆಕ್ಟರ್ ಬಜ್ಜಯ್ಯನವರು ಕಾಣಲಿಲ್ಲ. ರಾಜ್ ಎಲ್ಲಿಗೋ ಹೋಗಿದ್ದವನು ಬರಲಿಲ್ಲವೆಂದು ಅಲ್ಲಿದ್ದ ಕಾನ್ಸ್‌ಟೇಬಲ್‌ಗಳು ಹೇಳಿದರು.

ಬಾಷಾವಿನ ಮಾತಿನಂತೆ ರಾಮರಾಯರ ಸಾವಿಗೆ ರಾಜ್‌ನೇ ಕಾರಣನಿರಬೇಕೆಂದು ಊಹಿಸಿದರು. ರಾಜ್ ಚರ್ಯೆಯು ಸಹಾ ಸಂದೇಹಕ್ಕೊಳಗಾಗುವಂತೆ ಮಾಡಿತು. ಅದೂ ಅಲ್ಲದೆ ಅರೆಕ್ಷಣ ಎಡಬಿಡದ ಇನ್ಸ್‌ಪೆಕ್ಟರ್

ಬಜ್ಜಯ್ಯನವರು ಎಲ್ಲಿಗೆ ಹೋದರೆಂಬುದು ದೊಡ್ಡ ಪ್ರಶ್ನೆಯಾಗಿಬಿಟ್ಟಿತ್ತು ಥಾಮಸ್‌ರವರಿಗೆ.

ಪುನಃ ರಾರ್ಜ ಮನೆಗೆ ತೆರಳಿದರು. ರಾರ್ಜ ಮನೆಯಲ್ಲಿಲ್ಲವೆಂದು ಅಲ್ಲಿ ಗೇಟಿನಲ್ಲಿ ನಿಂತಿದ್ದ ಜವಾನ ತಿಳಿಸಿದ. ಆತನನ್ನು ಹಿಡಿದುತರಲು ಪೋಲೀಸರು ಮಾರುವೇಷದಿಂದ ಕಾಯುತ್ತಿದ್ದರು.

ಅಲ್ಲಿ ಪೋಲೀಸ್ ವ್ಯಾನ್ ಬಂದು ನಿಂತಿತು. ಒಂದುವೇಳೆ ಬಜ್ಜಯ್ಯನವರು ಬಂದಿರಬೇಕೇನೋ ಎಂದುಕೊಂಡರು ಥಾಮಸ್. ಆದರೆ ವ್ಯಾನಿನಲ್ಲಿದ್ದವನು,

"ಪತ್ತೇದಾರರೇ, ರಾರ್ಜನನ್ನು ಹಿಡಿದು ತಂಬು. ಸ್ಟೇಷನ್ನಿನಲ್ಲಿ ಕೂರಿಸಿದ್ದೇವೆ" ಎಂದನು.

ಪತ್ತೇದಾರರು ಸಂತೋಷಭರಿತರಾಗಿ ವ್ಯಾನಿನಲ್ಲಿ ಕೂತು ಸ್ಟೇಷನ್ನಿಗೆ ತೆರಳಿದರು.

ರಾರ್ಜ ಎದುರಿಗೆ ಬಂದು ಕುರ್ಚಿಯ ಮೇಲೆ ಕೂತಿದ್ದ. ಥಾಮಸ್‌ರವರನ್ನು ಕಂಡದ್ದೇ ಬಹಳ ಸರಳವಾಗಿ ಯಾವ ವಿಷಯವನ್ನೂ ಅರಿಯದವನಂತೆ,

"ನಮಸ್ಕಾರ ಪತ್ತೇದಾರರೇ ?" ಎಂದು ಬಹಳ ವಿನಯ ವಿಧೇಯತೆಗಳನ್ನು ತೋರ್ಪಡಿಸುತ್ತಾ.

"ಓಹೋ, ಏನು ರಾರ್ಜ ! ನಿಜವಾಗಿಯೂ ಒಂದು ನಾಡಿನ ರಾಜನನ್ನೇ ಕಾಣಬಹುದು. ನಿಮ್ಮನ್ನು ಕಾಣುವುದು ತುಂಬಾ ಕಷ್ಟವಾಗಿದೆಯಲ್ಲಾ !"

"ಅದೆಲ್ಲಾ ಒಂದೂ ಇಲ್ಲ. ಸ್ವಲ್ಪ ಜಮೀನಿನ ಕೆಲಸಕ್ಕಾಗಿ ಅಲೆದಾಟವಿತ್ತು. ಅದಲ್ಲದೆ ನನ್ನ ಚಿಕ್ಕಮ್ಮ ಮತ್ತು ಮಕ್ಕಳೆಲ್ಲರೂ ಹುಣಸೂರಿನಿಂದ ಇಲ್ಲಿಗೆ ಬಂದಿದ್ದು ನೆನ್ನೆಯ ರಾತ್ರಿ ಪುನಃ ಹೊರಟರು. ಅವರೊಂದಿಗೂ ಕೆಲಸವಿದ್ದೇಇತ್ತು. ನಿಮ್ಮನ್ನು ಆಗಾಗ ಸಂಧಿಸಿ ಮಾತಾಡಲು ನನಗೆ ಅವಕಾಶ ಸಿಗಲಿಲ್ಲ. ದಯವಿಟ್ಟು ಕ್ಷಮಿಸಬೇಕು" ಎಂದನು ರಾರ್ಜ. ರಾರ್ಜನನ್ನು ದುರುಗುಟ್ಟಿ ನೋಡುತ್ತಾ ಪತ್ತೇದಾರರು ಅಲ್ಲೇ ನೆರೆದಿದ್ದ ಮಿಕ್ಕವರೆನ್ನೆಲ್ಲಾ ಹೋಗುವಂತೆ ಆಜ್ಞಾಪಿಸಿದರು.

"ರಾರ್ಜ, ಈಗ ನೀವು ಹೋದಿರಲ್ಲಾ. ಅದೇ ನಮ್ಮ ಪೋಲೀಸರು ನಿಮ್ಮನ್ನು ಹಿಡಿದು ಕರೆತಂದರಲ್ಲಾ ! ಆ ಕಾಲುದಾರಿಯಲ್ಲಿ ನಿಮ್ಮ ಕಾರು

ಹೋಗಲು ಕಾರಣವೇನು ? ಮೆಯಿನ್ ರೋಡನ್ನು ಬಿಟ್ಟು ಕಾಲುದಾರಿಯ ಕಡೆ ಹೋಗಬೇಕಾದ ಪ್ರಮೇಯವೇನಿತ್ತು ?"

ನನ್ನ ಜಮೀನುಗಳ ವ್ಯವಹಾರದ ಬಗ್ಗೆ ಆ ರಸ್ತೆಯಲ್ಲಿ ಹೋಗಬೇಕಿತ್ತು. ಅದಕ್ಕಾಗಿಯೇ ಆ ಕಡೆ ಹೋಗಬೇಕಾಯಿತು."

"ರೋಡಿನ ಮಗ್ಗುಲಲ್ಲಿರುವ ಕಾಲುದಾರಿಯ ಕಡೆ ನಿಮ್ಮ ಜಮೀನಿದೆಯೇ ?"

"ಇಲ್ಲ, ಮೆಯಿನ್ ರೋಡಿನ ಕಡೆಯೇ ಇದೆ."

"ಮತ್ತೆ ಕಾಲುದಾರಿಯ ಕಡೆ ಕಾರು ಪ್ರವೇಶಮಾಡುವುದೆಂದರೆ ಕಾರಣವಿಲ್ಲದೇ ಇರುತ್ತದೆಯೇ ?"

"ಅದು ಡ್ರೈವರನ ಅಜಾಗರೂಕತೆಯೇ ಆಗಿರಬೇಕು."

"ಒಪ್ಪಬೇಕಾದ್ದೇ ! ಅದೂ ಹೋಗಲಿ, ಬಾಷಾ ಎಂಬುವನಿಗೂ ನಿಮಗೂ ಏನಾದರೂ ಸಂಬಂಧವಿದೆಯೇ ?"

"ನನಗೂ ಅವನಿಗೂ ಸಂಬಂಧ ! ಅವನೊಬ್ಬ ಆಸ್ಪತ್ರೆಯ ವಾರ್ಡ್ ಬಾಯ್."

"ಒಟ್ಟಿನಲ್ಲಿ ನಿಮಗೂ ಅವನಿಗೂ ಪರಿಚಯವಿದ್ದಿತೇನು ?"

"ನನ್ನ ತಂದೆಯವರು ಆಸ್ಪತ್ರೆಯಲ್ಲಿದ್ದಾಗ ಅವನ ಕೈಲಿ ಕೆಲಸ ಮಾಡಿಸಿಕೊಳ್ಳುತ್ತಿದ್ದೆ. ಅದೂ ದುಡ್ಡನ್ನು ಕೊಟ್ಟು."

"ಅವನಿಗೆ ನಿಮ್ಮಮೇಲೇನಾದರೂ ಹಗೆತನವಿತ್ತೇ ?"

"ಅರರೆ, ಪಾಪ ! ಅವನಿಗೆ ನನ್ನ ಮೇಲೆ ಹಗೆತನ ಬೆಳಸಲು ಕಾರಣವೇನಿದೆ ? ಅದೆಲ್ಲಾ ಬರೀ ಸುಳ್ಳು."

"ಅದೂ ಹೋಗಲಿ. ಅದೇ ವಾರ್ಡಿನ ನರ್ಸ್ ಕೆಲಸ ಮಾಡುತ್ತಿರುವ ನಳಿನಿಗೂ ನಿಮಗೂ ಏನಾದರೂ ಸ್ನೇಹ ಬೆಳೆದಿದೆಯೇ ?"

"ಆಸ್ಪತ್ರೆಯಲ್ಲಿ ಆಕೆಯನ್ನು ನೋಡಿದ್ದೇನೆ ಅಷ್ಟೆ. ಎಲ್ಲಾದರೂ ಸಿಕ್ಕಿದರೆ ಮಾತನಾಡಿಸುವುದು ರೂಢಿ. ಆಕೆಯ ಮನೆಗೆ ಆಗಾಗ ಹೋಗಿಬರುವುದು ಸಹಜ."

"ಈಗ ಅಂದರೆ ನಾಲ್ಕೈದು ದಿನಗಳಿಂದೀಚೆಗೆ ಆಕೆಯ ಮನೆಯ ಹತ್ತಿರ ಹೋಗಿಬಂದಿರೋ ?"

"ಹೋದಹಾಗೆ ಜ್ಞಾಪಕವಿಲ್ಲ."

"ಸರಿಯಾಗಿ ಜ್ಞಾಪಿಸಿಕೊಂಡು ಮಾತನಾಡಿ ಮಿಸ್ಟರ್ ರಾಜ್" ಎಂದರು

ಥಾಮಸ್. ಅವರ ಮಾತಿನಲ್ಲಿ ಕೋಪದ ಚಿನ್ಹೆಗಳು ಎದ್ದು ಕಾಣುತ್ತಿತ್ತು.

ರಾರ್ಜ ಸ್ವಲ್ಪ ಬೆದರಿದ. ಥಾಮಸ್‌ರವರ ಮಾತುಗಳು ಅವನನ್ನು ಭಯಕ್ಕೀಡುಮಾಡುತ್ತಿತ್ತು. ಒಂದುವೇಳೆ ಬಾಷನೋ ಅಥವಾ ನಳಿನಿಯೋ ವಿಷಯವನ್ನು ಹೇಳಿರಬೇಕು ಎಂದುಕೊಂಡ. ಥಾಮಸ್‌ರವರ ಮಾತಿಗೆ ಸರಿಯಾಗಿ ಉತ್ತರ ಕೊಡಲು ರಾರ್ಜ ತತ್ತರಿಸಿದ.

"ಕೇಳಿದ್ದಕ್ಕೆ ಜವಾಬು ಕೊಡಿ ರಾರ್ಜ."

"ಸಾರ್ ಈಗ ನನಗೆ ಸ್ವಲ್ಪ ಅರ್ಜೆಂಟ್ ಕೆಲಸವಿದೆ. ನಂತರ ಬಂದು ಕಾಣುತ್ತೇನೆ" ಎಂದ.

"ಅದು ಆಗದ ಮಾತು ಮಿಸ್ಟರ್ ರಾರ್ಜ. ಈಗ ನಾನು ಕೇಳುವ ಪ್ರಶ್ನೆಗಳಿಗೆ ಸರಿಯಾಗಿ ಉತ್ತರ ಕೊಡಲೇಬೇಕು. ತೆಗೆದುಕೊಳ್ಳಿ ಸಿಗ ರೇಟನ್ನು" ಎಂದು ಥಾಮಸ್‌ರವರು ಸಿಗರೇಟಿನ ಪ್ಯಾಕನ್ನು ತೆಗೆದು ರಾರ್ಜನ ಮುಂದೆ ನೀಡಿದರು. ರಾರ್ಜ ಸಿಗರೇಟೊಂದನ್ನು ತೆಗೆದುಕೊಂಡು ಬಾಯಲ್ಲಿ ಟ್ಟುಕೊಂಡು ಹೊತ್ತಿಸಿದ. ಥಾಮಸ್‌ರವರೂ ಸಹ ಒಂದು ಸಿಗರೇಟನ್ನು ಹೊತ್ತಿಸಿದರು. ಹೋಟಲಿನಿಂದ ಕಾಫಿಯನ್ನು ತರಿಸಿಕೊಟ್ಟರು ಥಾಮಸ್. ಕಾಫಿ ಕುಡಿದ ನಂತರ ಪುನಃ ಥಾಮಸ್‌ರವರು,

"ನಿಜ ಹೇಳಿ ರಾರ್ಜ. ಮೊನ್ನೆಯ ದಿವಸ ನೀವು ನಳಿನಿಯೊಂದಿಗೆ ಆಕೆಯ ಮನೆಗೆ ಹೋಗಿದ್ದಿರೆಂದು ಯಾರೋ ಹೇಳಿದಹಾಗೆ ಜ್ಞಾಪಕ."

ರಾರ್ಜ ಮರೆತುಹೋದ ವಿಷಯವನ್ನು ಜ್ಞಾಪಿಸಿಕೊಂಡಂತೆ,

"ಹೌದು ಸಾರ್ ಮರೆತುಹೋಗಿದ್ದೆ. ಷಣ್ಮುಗಂನ ವಿಷಯವನ್ನು ಕೇಳಿಕೊಂಡು ಬರಲು ಹೋಗಿದ್ದುದು ಮರೆತುಬಿಟ್ಟಿದ್ದೀನಿ. ದಯವಿಟ್ಟು ಕ್ಷಮಿಸಿ. ಆಕೆಯ ಮನೆಗೆ ಹೋದದ್ದು ನಿಜ."

"ಷಣ್ಮುಗಂನ ವಿಷಯವನ್ನು ಮಾತಾಡಲು ಹೋಗುತ್ತಿದ್ದೆ ಎನ್ನುತ್ತೀ ರಲ್ಲಾ. ಷಣ್ಮುಗಂನ ಯಾವ ವಿಷಯವನ್ನು ಕೇಳಲು ಹೋಗಿದ್ದಿರಿ ?"

"ಅದೇ ಸಾರ್....ನಿಜವಾಗಿಯೂ ಷಣ್ಮುಗಂ ನಮ್ಮ ತಂದೆಯವರಿಗೆ ವಿಷ ಹಾಕಿ ಕೊಂದನೇ ಅಥವಾ ಹೇಗೆ ಎಂಬುದಾಗಿ ತಿಳಿದುಕೊಂಡು ಬರಲು ಹೋಗಿದ್ದೆ."

"ಅಲ್ಲ ಮಿಸ್ಟರ್ ರಾರ್ಜ. ನೀವು ನಿಮ್ಮ ಪತ್ನಿ ಬರೆದಿಟ್ಟು ಹೋದ ನಂತರ ಆಕೆ ಬರೆದಿಟ್ಟದ್ದ ಕಾಗದದಲ್ಲಿ ಶಾಂತಳೊಂದಿಗೆ ರಾಮರಾಯರ ಕೊಲೆ ಮಾಡಲು ಷಣ್ಮುಗಂ ಸಹಕರಿಸಿದ್ದಾನೆ ಎಂಬುದಾಗಿ ತೋರಿದ್ದಾಳೆ

ಅದನ್ನು ನೀವು ನಂಬಿದ್ದೀರಿ....ಕಾಗದವನ್ನು ಪ್ರತ್ಯಕ್ಷವಾಗಿ ನನಗೆ ತಂದು ತೋರಿಸಿದ್ದೀರಿ. ಪುನಃ ನೀವು ನಳಿನಿಯ ಬಳಿ ಈ ವಿಷಯವನ್ನೇ ಪ್ರಸ್ತಾಪಿಸಲು ಹೋಗಿದ್ದೀರೆಂಬುದು ಶುದ್ಧ ಸುಳ್ಳೆಂದೇ ಭಾವಿಸಬೇಕಾಗಿದೆ. ಬೇರಾವ ಕೆಲಸಕ್ಕೋ ನೀವು ಆಕೆಯ ಬಳಿ ಹೋಗಿರಬೇಕು."

"ಸಾರ್ ಬೇರೆ ಕೆಲಸವೆಂದರೆ ಹೆಂಗಸಸಲ್ಲಿ ನನಗಿರುವ ಕೆಲಸವಾದರೂ ಏನು? ಅನ್ಯಥಾ ಭಾವಿಸಬೇಡಿ. ನಾನು ಪರಸ್ತ್ರೀಯರನ್ನು ಕಣ್ಣೆತ್ತಿಯೂ ನೋಡುವವನಲ್ಲ ಸಾರ್. ಲೋಕದಲ್ಲಿರುವ ಪ್ರತಿಯೊಬ್ಬ ಸ್ತ್ರೀಯೂ(ಶಾಂತಳ ವಿನಃ) ನನಗೆ ತಾಯಿಯರೆಂದೇ ಭಾವಿಸಿರುವೆನು. ಅಂತಹದರಲ್ಲಿ ನಳಿನಿಯನ್ನು ನಾನು ಇಚ್ಛಿಸಿರುವ ಹಾಗೆ ತಾವು ತಪ್ಪು ಭಾವನೆ ಮಾಡಿಕೊಂಡಿದ್ದೀರಿ. ದಯವಿಟ್ಟು ಹಾಗೆಲ್ಲಾ ತಪ್ಪಾಗಿ ಊಹೆ ಮಾಡಬೇಡಿ ಸಾರ್."

"ನಾನು ಹಾಗೆ ತಪ್ಪಾಗಿ ಊಹಿಸುತ್ತಿಲ್ಲ ರಾರ್ಜ. ಜನಗಳು ಅಂದುಕೊಳ್ಳುತ್ತಿದ್ದಾರೆ." ಥಾಮಸ್‌ರವರ ಕಣ್ಣುಗಳು ಕೆಂಪಗಾಗುತ್ತಾ ಬಂದಿತ್ತು. ಮುಖದಲ್ಲಿ ಮಾರ್ಪಾಡಾಗಿ ರುದ್ರಕಳೆಯು ಹೊಂಚುಹಾಕುತ್ತಿತ್ತು. ಆ ಮುಖಚರ್ಯೆಯನ್ನು ರಾರ್ಜ ಎಂದೂ ನೋಡಿರಲಿಲ್ಲ. ಥಾಮಸ್‌ರ ಮಾತುಗಳು ಪ್ರತಿಯೊಂದೂ ರಪ್‌ರಪ್‌ನೆ ಕೆನ್ನೆಯಮೇಲೆ ಬಡಿಯುವಂತಿತ್ತು.

"ಜನಗಳು ಸಾವಿರ ಅಂದುಕೊಳ್ಳುತ್ತಾರೆ. ಅದಕ್ಕಾಗಿ ನೀವು ನನ್ನನ್ನು ಗದುರಿಸಲು ಕಾರಣವೇನಿದೆ ಪತ್ತೇದಾರರೇ? ನೀವು ಪತ್ತೇದಾರರಾದ ಮಾತ್ರಕ್ಕೇ ನನ್ನನ್ನು ನಿಮ್ಮ ಸ್ಟೇರ್ಷನ ಅಂತರಂಗದ ಕೋಣೆಯಲ್ಲಿ ಕುಳ್ಳಿರಿಸಿಕೊಂಡು ಕಂಡಕಂಡ ಪ್ರಶ್ನೆಗಳನ್ನು ಹಾಕಿ ಮಾನಮರ್ಯಾದೆಯಿಲ್ಲದೆ ಮಾತನಾಡಿಸುವುದು ಸರಿಯಲ್ಲ. ನನ್ನನ್ನು ನೀವು ಯಾವುದನ್ನೂ ಕೇಳಬಾರದು. ಪತ್ತೇದಾರರೆಂಬುದಕ್ಕಾಗಿ ಇಷ್ಟು ಹೊತ್ತಿನವರೆಗೂ ಮರ್ಯಾದೆ ಕೊಟ್ಟು ನಿಮ್ಮ ಪ್ರಶ್ನೆಗಳಿಗೆ ಉತ್ತರ ಕೊಡುತ್ತಾ ಬಂದೆ. ಇನ್ನು ಮುಂದೆ ನೀವು ಕೇಳುವ ಪ್ರಶ್ನೆಗಳಿಗೆ ನಾನು ಉತ್ತರಕೊಡಲು ತಯಾರಾಗಿಲ್ಲ........ ಕೊಡಲಾರೆ" ಎಂದನು. ರಾರ್ಜನ ಮುಖವೂ ಕೆಂಪಾಯಿತು.

ಪತ್ತೇದಾರರು ಹಾಕಿಕೊಂಡಿದ್ದ ಅಂಗಿಯನ್ನು ಬಿಚ್ಚಿಟ್ಟು ಕೈಯಲ್ಲಿ ಒಂದು ಹಂಟೆಂಗನ್ನು ತೆಗೆದುಕೊಂಡರು.

"ರಾರ್ಜ, ನಿನಗೆ ಇಷ್ಟುಹೊತ್ತೂ ಮರ್ಯಾದೆ ಕೊಟ್ಟು ಮಾತನಾಡಿಸಿದ್ದಕ್ಕಾಗಿ ನನ್ನನ್ನು ಶಿಕ್ಷಿಸಬೇಕು. ಶ್ರೀಮಂತ ಕುಟುಂಬದಲ್ಲಿ ಹುಟ್ಟಿದ

ಸುಖಪುರುಷನೆಂಬ ಧೋರಣೆಯಲ್ಲಿ ಇಷ್ಟು ಹೊತ್ತೂ ನಯವಿನಯಗಳಿಂದ ಕೇಳಿದೆ. ಅದಕ್ಕೆ ನೀನು ಕೊಟ್ಟ ಮರ್ಯಾದೆ ನನ್ನ ಮೇಲೆ ಕೋಪೋದ್ರೀಕ್ತನಾಗಿ ಕಣ್ಣುಗಳಲ್ಲಿ ಕೆಂಡವನ್ನು ಸುರಿಸಿದ್ದು, ಅಲ್ಲವೇ ? ಈಗ ನಾನು ಕೇಳುವ ಪ್ರಶ್ನೆಗಳಿಗೆ ಸರಿಯಾಗಿ ಉತ್ತರ ಕೊಡದೇಹೋದರೆ ನೀನು ಈ ಹಂಟೆಂಗಿನ ಏಟಿಗೆ ಗುರಿಯಾಗಬೇಕಾಗುತ್ತೆ" ಎಂದರು ಥಾಮಸ್.

"ನನ್ನನ್ನು ಪರಿಶೋಧನೆ ಮಾಡಲು ಇಲ್ಲಿಗೆ ಕರೆತಂದಿದ್ದೀರೆಂದು ಕಾಣುತ್ತೆ. ನಾನು ಕಳ್ಳತನ ಮಾಡಿಲ್ಲ, ಥಾಮಸ್. ನಾನು ಕೊಲೆಗಾರ ಮೊದಲೇ ಅಲ್ಲ. ನನ್ನನ್ನು ಹಿಡಿದುತರಲು ನಿಮಗೆ ಹಕ್ಕೇನಿದೆ ? ಈಗ ಅಂದರೆ ಈ ಕ್ಷಣದಲ್ಲಿ ನೀವು ನನ್ನನ್ನು ಏನು ಬೇಕಾದರೂ ಬೈದು ಒಂದುವೇಳೆ ಹೊಡೆದರೂ ಹೊಡೆಯಬಹುದು. ನಂತರ ನಾನು ನಿಮಗೆ ಮಾಡುವ ಮರ್ಯಾದೆ ಬೇರೆ ಇದೆ" ಎಂದನು ರಾಜಾ ಮದಮಾತ್ಸರ್ಯಗಳಿಂದ ತುಂಬಿದವನಾಗಿ.

ಪತ್ತೇದಾರ ಥಾಮಸ್‌ರವರಿಗಂತೂ ರಾರ್ಜ ಆಡಿದ ಮಾತುಗಳನ್ನು ಕೇಳಿ ಸಹಿಸಿಕೊಂಡಿರಲು ಸಾಧ್ಯವಾಗಲಿಲ್ಲ. ಕೈಯಲ್ಲಿದ್ದ ಹಂಟಿಂಗಿನಿಂದ ಬಲವಾಗಿ ಬಾಯಮೇಲೆ ಹೊಡೆದರು. ರಾರ್ಜನ ಬಾಯಲ್ಲಿ ರಕ್ತವು ಸುರಿಯಿತು.

ರಾರ್ಜ ಮೇಲಕ್ಕೆದ್ದು ಪತ್ತೇದಾರರ ಮೇಲೆ ಕೈಮಾಡಿದ. ಪತ್ತೇದಾರರನ್ನು ಕೆಳಗುರುಳಿಸಿಕೊಂಡು ಕೈಯಲ್ಲಿದ್ದ ಹಂಟೆಂಗನ್ನು ಕಿತ್ತುಕೊಂಡು ಅದೇ ಹಂಟೆಂಗಿನಿಂದಲೇ ತಲೆಯಬುರುಡೆ ಗಾಯವಾಗುವಂತೆ ಹೊಡೆದ. ಥಾಮಸ್‌ರವರು ರಾರ್ಜ ಕೈಲಿದ್ದ ಹಂಟೆಂಗನ್ನು ಕಿತ್ತುಕೊಳ್ಳಲು ಮೊದಲಾದರು. ಕೊನೆಗೆ ರಾರ್ಜ ಕಿಟಕಿಯ ಆಚೆ ಬಿಸಾಟನು.

ಇಬ್ಬರಿಗೂ ಮಲ್ಲಯುದ್ಧ ಪ್ರಾರಂಭವಾಯಿತು. ಥಾಮಸ್ ಒಂದೇಟು ಹೊಡೆದರೆ ರಾರ್ಜ ಕೆಳಗುರುಳುತ್ತಿದ್ದ. ರಾರ್ಜನ ಏಟಿಗೆ ಥಾಮಸ್‌ರವರು ಸ್ಮೃತಿತಪ್ಪುತ್ತಿದ್ದರು. ಇಬ್ಬರಿಗೂ ಸರಿಯಾದ ಮಲ್ಲಯುದ್ಧ. ಇಬ್ಬರೂ ಒಳ್ಳೆಯ ಜೋಡಿಯೇ. ಸರಿಯಾಗಿ ಹತ್ತು ನಿಮಿಷ ಇಬ್ಬರೂ ಹೊಡೆದಾಡಿ ಸುಸ್ತಾದರು.

ಕೋಣೆಯ ಬಾಗಿಲು ಚಿಲುಕ ಹಾಕಿದ್ದರಿಂದ ಬೇರೆ ಪೋಲೀಸರು ಕೋಣೆಯೊಳಗೆ ಬರಲು ಸಾಧ್ಯವಿರಲಿಲ್ಲ. ರಾರ್ಜನನ್ನು ಪುನಃ ಕುರ್ಚಿಯ ಮೇಲೆ ಕುಳ್ಳಿರಿಸಿದರು ಥಾಮಸ್.

ರಾರ್ಜ ಮೃದುವಾಗಿ ಬೆಳೆದವನಾಗಿದ್ದುದರಿಂದ ಈ ಏಟುಗಳಿಗೆ ಸುಸ್ತಾಗಿ ಹೋಗಿದ್ದ. ಆತನು ಎಂದೂ ಆ ವಿಧವಾಗಿ ಹೋರಾಡಿರಲಿಲ್ಲ. ಥಾಮಸ್ ರವರಿಗಿಂತಲ೨ ರಾರ್ಜ ಶಕ್ತಿಯಲ್ಲಿ ಎರಡು ಪಾಲು ಹೆಚ್ಚಾಗಿದ್ದರೂ ಹೊಡೆ ದಾಟದಲ್ಲಿ ಅವನಿಗೆ ಅನುಭವವಿರಲಿಲ್ಲ. ಬಲವಾಗಿ ಎರಡು ಮೂರು ಏಟು ಬಿದ್ದದ್ದೇ ರಾರ್ಜ ಸುಸ್ತಾಗಿ ಬೆಂಡಾಗಿ ಹೋದ. ಪುನಃ ಒತ್ತಿ ಕೇಳಿದರು ಥಾಮಸ್,

"ನಿಜ ಹೇಳು ನಿನಗೂ ಆ ನರ್ಸಳಿಗೂ ಏನಾದರೂ ಸಂಬಂಧವಿತ್ತೇ ?"

"ನಾನು ಮಾತನಾಡುವುದಿಲ್ಲ. ಯಾವ ಉತ್ತರವನ್ನೂ ಕೊಡಲು ಇಷ್ಟವಿಲ್ಲ" ಎಂದನು ರಾರ್ಜ. ಥಾಮಸ್‌ರವರು ಎರಡು ಮೂರು ಬಾರಿ ರಾರ್ಜನನ್ನು ಕೇಳಿ ನೋಡಿದರು. ರಾರ್ಜ ಯಾವ ವಿಷಯವನ್ನೂ ಹೇಳು ವುದಿಲ್ಲವೆಂದು ಹಠ ಹಿಡಿದ.

ಕೋಣೆಯ ಬಾಗಿಲನ್ನು ತೆರೆದು ಇಬ್ಬರು ಪೋಲೀಸರನ್ನು ಕರೆದು ರಾರ್ಜನನ್ನು ಕಾವಲಿದ್ದು ನೋಡಿಕೊಳ್ಳುವಂತೆ ಹೇಳಿ ಥಾಮಸ್‌ರವರು ಹೊರ ಹೊರಟರು.

ನಳಿನಿಯ ಮನೆಯ ಬಳಿ ಬಂದರು. ಮನೆಯು ಮುಚ್ಚಿತ್ತು. ಬಾಗಿಲನ್ನು ತಟ್ಟಿದರು ಥಾಮಸ್. ನಳಿನಿ ಬಾಗಿಲು ತೆರೆದಳು. ನಳಿನಿ ಆಗ ಅಳುತ್ತಲೇ ಇರುವಂತಿತ್ತು. ಕಣ್ಣುಗಳು ಕೆಂಪಾಗಿತ್ತು. ಥಾಮಸ್‌ರವ ರನ್ನು ಆರಾಮುಕುರ್ಚಿಯ ಮೇಲೆ ಕುಳಿತುಕೊಳ್ಳುವಂತೆ ಹೇಳಿದಳು. "ಸಿಸ್ಟರ್ ! ನೀವು ಕಣ್ಣೀರ್ಗರಿಸುವಂತೆ ಕಾಣುತ್ತೆ ?" ಎಂದರು ಥಾಮಸ್.

"ಕಣ್ಣೀರು ಕನ್ಯೆಯರಿಗೆ ಸಹಜ ಪತ್ತೇದಾರರೇ ! ಆದರೆ ಈ ಕಣ್ಣೀ ರನ್ನು ನೋಡಿ ಗಂಡಸರು ಮರುಗಬಾರದು. ಹೆಂಗಸರ ಕಣ್ಣಿನಲ್ಲಿನ ಕಂಬನಿಯು ಕಲ್ಯಾಣದಿಂದ ಕರ್ಮಾಂತರದವರೆಗೂ ಬಿಡದು. ನನ್ನ ವಿಧಿ ಒಂದು ವಿಧಾನದಿಂದ ವರ್ತಿಸುತ್ತಿದೆ. ಅದನ್ನು ನೆನೆದು ಕಣ್ಣೀರ್ಗರಿಸಿದೆ. ಅಷ್ಟೆ."

"ನೀವು ತುಂಬಾ ಮನನೊಂದುಹೋಗುತ್ತಿದ್ದೀರೆಂದು ಕಾಣುತ್ತೆ."

"ಅದು ಹೋಗಲಿ ಈಗ ತಾವು ಬಂದ ಕಾರಣ ? ತಾವು ಆಸ್ಪತ್ರೆಯ ಬಳಿ ಬಂದು ನನ್ನನ್ನು ಮಾತನಾಡಿಸಲು ಕಾರಣ ? ರಾಮರಾಯರ ಕೊಲೆ ವಿಷಯವಾಗಿ ನನ್ನಲ್ಲಿ ಏನಾದರೂ ತಿಳಿದುಕೊಂಡು ಹೋಗಲು ಬಂದಿರು ವಿರೇನು ?"

"ಹೌದು ನಳಿನಿ. ನಿಮ್ಮಲ್ಲಿ ರಾಮರಾಯರ ಕೊಲೆಯ ವಿಷಯವಾಗಿ ಕೇಳಲು ಬಂದೆ. ಒಂದು ಮಾತನ್ನು ಜ್ಞಾಪಕದಲ್ಲಿಡಿ....ನೋಡಿ ಸಿಸ್ಟರ್. ಈ ತರಹದ ಕೊಲೆ ದರೋಡೆ ಮತ್ತು ಕಳ್ಳತನದ ಕೇಸುಗಳಲ್ಲಿ ಪೋಲೀಸ್ ಡಿಪಾರ್ಟ್‌ಮೆಂಟಿನವರ ಬಳಿ ನಿಜ ತಿಳಿಸಿ ಅನ್ಯೋನ್ಯದಿಂದ ವರ್ತಿಸುವುದೇ ಅಪರಾಧಿಗಳ ಮತ್ತು ಅಪರಾಧಿಗೆ ಸಹಕರಿಸಿದವರ ಹಿತವಾಗಿರುತ್ತೆ. ಹಾಗಲ್ಲದೆ ಪೋಲೀಸರಿಗೆ ಮೋಸಮಾಡಿ ತನ್ನ ಕಳ್ಳರ ಗುಂಪನ್ನು ನಂಬಿ ನೆಚ್ಚಿ ಇದ್ದ ಸಮಾಚಾರವನ್ನು ಮುಚ್ಚಿಟ್ಟು ಮನಬಂದಂತೆ ಮಾತನಾಡಿದರೆ ಖಂಡಿತ ಅಪ ರಾಧಿಗಳು ಮರುಕಗೊಳ್ಳಬೇಕಾಗುತ್ತೆ. ಸಿಸ್ಟರ್....ನೀವು ಹಾಗೆ ಅಪರಾಧ ಮಾಡಿದ್ದೀರೆಂದು ನಾನು ಊಹಿಸಿಲ್ಲ. ಆದರೂ ನಾನು ಹೇಳುವುದನ್ನು ಹೇಳಿದ್ದೇನೆ. ಮುಂದೆ ನಿಮಗೆ ಒಂದೆರಡು ಪ್ರಶ್ನೆಗಳನ್ನು ಕೇಳಬೇಕೆಂಬ ಬಯಕೆ ನನ್ನಲ್ಲುಂಟಾಗಿದೆ. ನಿಮಗೆ ಒಪ್ಪಿಗೆ ಇದ್ದರೆ ಕೇಳಲು ಹಿಂಜರಿಯುವುದಿಲ್ಲ."

"ಕೇಳಿ ಪತ್ತೇದಾರರೇ. ಎಂದಾದರೊಂದು ದಿನ ಗುಟ್ಟು ಬಟ್ಟಬಯಲಾಗಬೇಡವೇ ? ತಪ್ಪು ಮಾಡಿದ್ದಕ್ಕೆ ಶಿಕ್ಷೆ ಅನುಭವಿಸದೇ ಇರಬೇಕೆಂಬ ದುರಾಸೆ ನನ್ನಲ್ಲಿಲ್ಲ. ಶಿಕ್ಷೆ ಅನುಭವಿಸಲು ತಯಾರಾಗಿದ್ದೇನೆ."

"ಸರಿ. ನಿಮಗೂ ರಾಮರಾಯರ ಮಗ ರಾಜ್‌ಗೂ ಏನಾದರೂ ಸಂಬಂಧವುಂಟೇ ?"

"ಉಂಟು. ಅವರು ಆಸ್ಪತ್ರೆಗೆ ಬರುತ್ತಿದ್ದರು. ಅವರ ತಂದೆಯನ್ನು ನೋಡುವ ಸಲುವಾಗಿ."

"ಅದಲ್ಲ. ಅವರಿಗೂ ನಿಮಗೂ.... ?"

"ಹೌದು ಪತ್ತೇದಾರರೇ ನಾನು ಅವರನ್ನು ಪ್ರೇಮಿಸಿದ್ದೇನೆ. ನಾನು ಈ ಕೆಲಸ ನಮಗೆ ಉತ್ತಮವಲ್ಲವೆಂದು ಎಷ್ಟೋ ಬಾರಿ ಹೇಳಿದ್ದೆ. ಆದರೂ ಆತ ನನ್ನನ್ನು ಬಿಡಲಿಲ್ಲ. ನನ್ನ ಕೈಗೆ ಸ್ವಲ್ಪ ದುಡ್ಡಿನ ಆಸೆ ತೋರಿಸಿ ಕೈ ಬೆಚ್ಚಗೆ ಮಾಡಿದ. ಅದರಲ್ಲೂ ನನ್ನ ತಾತ್ಕಾಲಿಕ ಗಂಡ ಷಣ್ಮುಗಂ ಸ್ಟೇಷನ್‌ಗೆ ಕರೆಯಿಸಿಕೊಳ್ಳಲ್ಪಟ್ಟ. ನನಗೂ ಡಿಸೆಂಬರ್ ತಿಂಗಳ ಛಳಿಯನ್ನು ತಡೆಯಲು ಸಾಧ್ಯವಿರಲಿಲ್ಲ. ರಾಜ್ ನನ್ನ ಕೈ ಹಿಡಿದ. ನಾನೂ ಸಮ್ಮತಿಸದೇ ಇರಲು ಸಾಧ್ಯವಾಗಲಿಲ್ಲ. ನನಗೂ ರಾಜ್‌ಗೂ ಪ್ರೇಮಸಂಬಂಧವಿದೆ."

"ಬಾಷಾವಿಗೂ ನಿಮಗೂ ಏನಾದರೂ .... ?"

"ಬಾಷಾ ವಾರ್ಡ್‌ಬಾಯ್ ಎಂಬುದು ನಿಮಗೆ ಜ್ಞಾಪಕವಿರಬಹುದು. ಷಣ್ಮುಗಂ ಸ್ಟೇಷನ್‌ಗೆ ಹೋದ ನಂತರ ನಾನು ಕಾಮುವನ್ನು ತಡೆಯಲಾರದೆ

ರಾರ್ಜ ಮಾತ್ರವಲ್ಲ ಆಸ್ಪತ್ರೆಯ ಇನ್ನೂ ಒಂದಿಬ್ಬರೊಂದಿಗೆ ಪ್ರೇಮಿಸಿದ್ದೆ. ಅದನ್ನು ಗುರಿಯಿಟ್ಟು ನೋಡುತ್ತಿದ್ದ ಬಾಷಾ ನನ್ನನ್ನು ರುಚಿ ನೋಡಬೇಕೆಂದು ಹಾಹಾಕರಿಸಿದ. ಆದರೆ ನಾನು ಆತನ ಅಭಿಲಾಷೆಗೆ ಒಪ್ಪಲಿಲ್ಲ."

"ಹಾಗೆ ನಿರಾಕರಿಸಲು ಕಾರಣ?"

"ಇದೇನು ಹೀಗೆ ಕೇಳುತ್ತಿದ್ದೀರಿ ಪತ್ತೇದಾರರೇ. ಅದು ನನ್ನ ಇಷ್ಟಕ್ಕೊಳಪಟ್ಟದ್ದು. ಮನಸ್ಸು ಒಪ್ಪಿದರಲ್ಲವೇ ? ಅವನು ಕೇಳಿದ ಮಾತ್ರಕ್ಕೇ ಪ್ರೇಮಿಸಲು ಸಾಧ್ಯವೇ ?"

"ಅದೂ ಹೋಗಲಿ. ರಾಮರಾಯರು ವಿಷ ಕುಡಿದು ಸಾಯಬೇಕಾದರೆ ರಾರ್ಜ ಮುಖ್ಯ ಕಾರಣನೆಂಬುದಾಗಿ ಬಾಷಾ ಮರಣ ಹೊಂದುವ ಮೊದಲು ಹೇಳಿ ಪ್ರಾಣ ಬಿಟ್ಟಿದ್ದಾನೆ. ಅಂತಹದರಲ್ಲಿ ಈಗ ರಾರ್ಜನೇ ತಪ್ಪಿತಸ್ಥನೆಂಬುದಾಗಿ ನಂಬಿದ್ದೇನೆ. ಅವನನ್ನು ಸಹಕರಿಸುವಿರೇನೋ ಎಂಬ ಸಂದೇಹದಿಂದ ಕೇಳಿದೆ. ಬೇರೆ ಅನ್ಯಥಾ ಭಾವಿಸಬೇಡಿ. ರಾರ್ಜ ತಪ್ಪಿತಸ್ಥನೆಂಬುದು ನಿಜವಾದದ್ದೇ ಆದರೆ ಷಣ್ಮುಗಂ ಬಿಡುಗಡೆ ಮಾಡಲ್ಪಡುತ್ತಾನೆ. ಅವನಿಗೆ ಬಿಡುಗಡೆಯಾಗುತ್ತೆ. ನೀವು ಈ ರಾಮರಾಯರ ಮರಣದ ವಿಷಯದಲ್ಲಿ ರಾರ್ಜಗೆ ಏನಾದರೂ ಸಹಾಯ ಮಾಡಿರುವಿರೇನು ?"

"ಹೌದು ಪತ್ತೇದಾರರೇ ? ಸಹಾಯಮಾಡಿರುವೆನು" ಎಂದಳು ನಳಿನಿ. ನಳಿನಿಗೆ ನಡುಕ ಹುಟ್ಟಿತು. ಆದರೆ ಒಂದು ಮಾತನ್ನು ಮಾತ್ರ ನಿರ್ಧರಿಸಿಕೊಂಡಿದ್ದಳು. ಅದೇ, ಸಾವಿನ ನಂತರ ಮಿಕ್ಕ ತೊಂದರೆಗಳೊಂದೂ ಇರುವುದಿಲ್ಲವೆಂದು. ನಳಿನಿ ಮುಂದೆ ಯಾವುದೋ ಮಾತನ್ನು ಹೇಳಬೇಕೆಂದು ಬಾಯಿ ತೆರೆಯುವುದರಲ್ಲಿದ್ದಳು. ಯಾರೋ ಬಾಗಿಲನ್ನು ಬಡಬಡನೆ ತಟ್ಟಿದಂತೆ ಕೇಳಿಸಿತು.

ಥಾಮಸ್‌ರವರು ಮರೆಯಲ್ಲಿ ನಿಂತುಕೊಂಡರು. ನಳಿನಿ ಬಂದು ಬಾಗಿಲನ್ನು ತೆರೆದಳು.

ಒಳಕ್ಕೆ ಮಜೀದ್ ಓಡಿಬಂದ. ನಳಿನಿಯನ್ನು ಕಂಡು "ರಾರ್ಜ ಸಾಹೇಬರು ಇಲ್ಲವೇ ಅಮ್ಮಾ !" ಎಂದ.

ನಳಿನಿ ಮಜೀದನು ಬಾಯಿ ಬಿಡದಂತಿರಲು ಸನ್ನೆ ಮಾಡಿದಳು. ಆದರೆ ಮಜೀದನಿಗೆ ಅದು ಅರ್ಥವಾಗಲಿಲ್ಲ.

ಮಜೀದನನ್ನು ನೋಡಿ, "ಯಾವ ರಾರ್ಜ ಸಾಹೇಬರನ್ನು ಕೇಳುತ್ತಿರುವೆ ? ನೀನು ಯಾರು ? ಇಲ್ಲಿ ಯಾರೂ ಇಲ್ಲ" ಎಂದಳು.

"ಸುಮ್ಮನೆ ಗಲಾಟೆ ಮಾಡಬೇಡಿ ನರ್ಸಮ್ಮ, ಅರ್ಜೆಂಟಾಗಿ ತಾವೂ ಮತ್ತು ರಾರ್ಜ ಇಬ್ಬರೂ ರಹಸ್ಯ ಮಂದಿರಕ್ಕೆ ಬರಬೇಕೆಂದು ರಜಾಕ್ ಹೇಳಿ ಕಳುಹಿಸಿದರು. ಶಾಂತಮ್ಮನಿಗೆ ಛಳಿಜ್ವರ. ಬೀಬೀಜಾನ್ ಕೋಪಮಾಡಿ ಕೊಂಡು ಶಾಂತಮ್ಮನನ್ನು ಕೊಲೆಮಾಡುವುದಾಗಿ ತೀರ್ಮಾನಿಸಿದ್ದಾಳೆ. ದಯವಿಟ್ಟು ಜಾಗ್ರತೆ ಬನ್ನಿ" ಎಂದನು ಮಜೀದ್. ಅವನು ರಹಸ್ಯ ಮಂದಿರದಿಂದ ಓಡಿಬಂದವನಂತೆ ಕಾಣುತ್ತಿದ್ದನು. ಶ್ವಾಸಗಳನ್ನು ರಭಸ ದಿಂದ ಬಿಡುತ್ತಿದ್ದನು. ಮಜೀದನ ಬಾಯಿ ಮುಚ್ಚಿಸಲು ನಳಿನಿಯಿಂದ ಸಾಧ್ಯವಾಗಲಿಲ್ಲ.

"ಆಗಲಿ. ಹೋಗು ಬರುತ್ತಾರೆಂದು ಹೇಳಿಬಿಡು" ಎಂದು ಹೇಳಿ ಕಳುಹಿಸಿದಳು. ಮಜೀದನು ಸಲಾಂ ಹೊಡೆದು ಬಾಗಿಲವರೆಗೂ ಹೋದನು.

ಥಾಮಸ್‌ರವರು ಮಜೀದನನ್ನು ಹಿಡಿಯಲು ಯೋಚಿಸಿದರು. ಅಷ ರಲ್ಲಿ ರಜಾಕ್ ಎದುರಿಗೆ ಬಂದ. ರಜಾಕ್ ಎಂದೂ ನಳಿನಿ ಮನೆಗೆ ಪ್ರವೇಶಿ ಸಿರಲಿಲ್ಲ. ತಲೆಗೆ ಮಫ್ಲರ್ ಸುತ್ತಿಕೊಂಡಿದ್ದ. ನಳಿನಿ ಮನೆಯೊಳಗೆ ಬಂದ ಆತನನ್ನು ನೋಡಿ ಬೆಚ್ಚಿಬಿದ್ದಳು. ಥಾಮಸ್‌ರವರು ಮರೆಯಲ್ಲಿ ನಿಂತು ರಜಾಕ್‌ನನ್ನು ನೋಡುತ್ತಿದ್ದರು. ಸೊಂಟದಲ್ಲಿದ್ದ ರಿವಾಲ್ವರನ್ನು ಕೈಗೆ ತೆಗೆದುಕೊಂಡರು.

ರಜಾಕನು ಮಜೀದನಹಿಂದೆಯೂ ಮತ್ತು ನಳಿನಿಯ ಮುಂದುಗಡೆ ಮಧ್ಯೆ ನಿಂತಿದ್ದ ಆತನಮೇಲೆ ಗುಂಡು ಹಾರಿಸಿದರೆ ಒಂದುವೇಳೆ ಗುಂಡು ತಪ್ಪಿ ನಳಿನಿಯಮೇಲೆಯೋ ಅಥವಾ ಮಜೀದನ ಮೇಲೆಯೋ ಬಿದ್ದರೆ ವೃಥಾ ಬೇರೊಬ್ಬರ ಕೊಲೆಯಾಗುತ್ತದಲ್ಲಾ ಎಂದು ನೆನೆದು ರಜಾಕನು ಕದಲುವ ಜಾಗಕ್ಕಾಗಿ ಹೊಂಚುಹಾಕುತ್ತಿದ್ದರು.

"ನಳಿನಿ, ಈಗ ನನ್ನೊಂದಿಗೆ ಹೊರಟುಬಾ. ಈ ರಾತ್ರಿ ನಾವು ಎಲ್ಲರೂ ಬೇರೆ ದೂರದೇಶದಕಡೆ ಪ್ರಯಾಣ ಸಾಗುವಂತೆ ತೀರ್ಮಾನ ಮಾಡಿ ಕೊಂಡಿದ್ದೇವೆ. ರಾರ್ಜ ಎಲ್ಲಿ?" ಎಂದು ಅಧಿಕಾರ ಧೋರಣೆಯಿಂದ ಕೇಳಿದನು ರಜಾಕ್.

ರಜಾಕ್ ಆಡಿದ ಮಾತುಗಳು ನಳಿನಿಯ ಕಿವಿಗೆ ಕಠೋರವಾಗಿತ್ತು. ಕಸಾಬುಗಾರನನ್ನು ನಂಬಲು ನಾನೇನು ಕುರಿಯಲ್ಲ ಎಂದುಕೊಂಡಳು. ರಜಾಕನೊಂದಿಗೆ ಮಾತನಾಡಲು ಇಷ್ಟಪಡಲಿಲ್ಲ. ರಜಾಕನ ಪಕ್ಕದಲ್ಲಿ

ನಿಂತಿದ್ದ ಮಜೀದನಿಗೆ ಸ್ವಲ್ಪ ಸಂದೇಹವಾಯಿತು. ಮರೆಯಾಗಿ ನಿಂತಿದ್ದ ಥಾಮಸ್‌ರವರು ಪಕ್ಕದಲ್ಲಿ ಟೇಬಲ್ಲಿನಮೇಲೆ ಟಾಯಿಲೆಟ್ ಸಾಮಾನುಗಳ ಸೆಟ್ ಇತ್ತು. ಥಾಮಸ್‌ರವರು ಸ್ವಲ್ಪ ಕದಲಿದರು. ಟಾಯಿಲೆಟ್ ಸೆಟ್ಟಿನಲ್ಲಿದ್ದ ಪೌಡರ್ ಬಾಕ್ಸ್ ಕೆಳಗೆ ಧೊಪ್ಪನೆ ಬಿತ್ತು. ಮಜೀದನು ಗಮನಿಸಿದ.

ಥಾಮಸ್‌ರವರು ಕೆಳಗೆಬಿದ್ದ ಪೌಡರ್ ಬಾಕ್ಸನ್ನು ಟೇಬಲ್ಲಿನಮೇಲೆ ತೆಗೆದಿಡುವುದರಲ್ಲಿದ್ದರು. ಮಜೀದನು ರಜಾಕನಬಳಿ "ಒಳಗೆ ಯಾರೋ ಸೇರಿಕೊಂಡಿದ್ದಾರೆಂದು ಕಾಣುತ್ತೆ" ಎಂದ.

ರಜಾಕನು ಥಟ್ಟನೆ ಒಳಗಡೆ ಪ್ರವೇಶಿಸಿ ನಾಲ್ಕುಕಡೆಯೂ ನೋಡಿದ. ಥಾಮಸ್‌ರವರು ಟೇಬಲ್ಲಿನಮೇಲೆ ಪೌಡರ್ ಬಾಕ್ಸ್‌ನ್ನು ತೆಗೆದಿಡುವುದರಲ್ಲಿದ್ದರು.

ಥಾಮಸ್‌ರವರನ್ನು ನೋಡಿದನು ರಜಾಕ್. ಫಪ್ಪನೆ ಮರೆಮಾಚಿಕೊಂಡು ಓಡಲು ಪ್ರಯತ್ನಪಟ್ಟನು ರಜಾಕ್. ಅಷ್ಟರಲ್ಲಿ ಥಾಮಸ್‌ರವರು ರಿವಾಲ್ವರಿನಿಂದ ಗುಂಡು ಹಾರಿಸಿದರು. ಹಾರಿಸಿದ ಗುಂಡು ತಲೆಗೂದಲಿಗೆ ತಗುಲಿ ಹಾರಿತು. ರಜಾಕ್ ಪಕ್ಕದಲ್ಲಿ ಡ್ರಾಯರ ಮರೆಯಲ್ಲಿ ಕೂತುಕೊಂಡು ಮಜೀದನು ಸೊಂಟದಲ್ಲಿದ್ದ ಬಾಕುವನ್ನು ತೆಗೆದು ಥಾಮಸ್‌ರವರ ಬೆನ್ನಿಗೆ ಹೊಡೆಯುವುದರಲ್ಲಿದ್ದ. ಅದನ್ನು ನಳಿನಿಯೇ ನೋಡಿಕೊಂಡಳು. ಆ ದೃಶ್ಯವನ್ನು ಆಕೆ ನೋಡಿಕೊಂಡಿರಲು ಸಾಧ್ಯವಾಗಲಿಲ್ಲ. ಕಿರ್ರನೆ ಕಿರುಚಿದಳು.

ಥಾಮಸ್‌ರವರು ಥಟ್ಟನೆ ನಳಿನಿಯ ಕಡೆಯೂ ಹಿಂದುಗಡೆಯೂ ನೋಡಿದರು. ಮಜೀದ್ ಬಾಕುವನ್ನು ಥಾಮಸ್‌ರವರ ಎದೆಗೆ ಗುರಿಯಿಟ್ಟು ಎಸೆದ. ಥಾಮಸ್‌ರವರು ಸರಿದರು. ಬಾಕು ತೋಳನ್ನು ಕಚ್ಚಿಕೊಂಡಿತು. ಬಲಗೈಲಿದ್ದ ರಿವಾಲ್ವರನ್ನು ಎಡಗೈಲಿ ತೆಗೆದುಕೊಂಡು ಮಜೀದನ ಮೇಲೆ ಗುಂಡು ಹಾರಿಸಿದರು.

ಮಜೀದನ ಕಾಲು ಕುಂಟಾಯಿತು. ಮಜೀದನು ಮೂರ್ಛೆಬಿದ್ದ. ಅವನು ಸ್ಮೃತಿ ತಪ್ಪಿ ಧೊಪ್ಪನೆ ಬಿದ್ದ.

ನಳಿನಿಯು ಬಾಗಿಲನ್ನು ತೆರೆದು ಬೀದಿಯಲ್ಲಿ ಓಡಾಡುತ್ತಿದ್ದ ಜನರನ್ನು ಬಳಿ "ಕೊಲೆ, ಕೊಲೆ, ಕೊಲೆ" ಎಂದು ಅರಚಿದಳು.

ಬೀದಿಯಲ್ಲಿ ಓಡಾಡುತ್ತಿದ್ದ ಜನಗಳು ಗುಂಪಾಗಿ ಬಂದು ಮನೆಯೊಳಗೆ

ನುಗ್ಗಿದರು. ರಜಾಕನನ್ನೂ ಮತ್ತು ಕಾಲಿಗೆ ಗಾಯಗೊಂಡ ಮಜೀದನನ್ನೂ ಹಿಡಿದರು. ಥಾಮಸ್‌ರವರ ತೋಳಿಗೆ ಅರ್ಧಭಾಗ ಪ್ರವೇಶಿಸಿದ್ದ ಚಾಕನ್ನು ತೆಗೆದರು.

ಈ ದ್ರೋಹಿಯನ್ನು ಸ್ಟೇಷನ್‌ಗೆ ಕರೆದುಕೊಂಡುಹೋಗಿ ಎಂದರು ಥಾಮಸ್.

ಪೋಲೀಸರನೇಕರು ಅಲ್ಲಿ ಬಂದು ಸೇರಿದರು. ಇಬ್ಬರು ಪೋಲೀಸರು ರಜಾಕ್ ಮತ್ತು ಮಜೀದನನ್ನು ಪೋಲೀಸ್ ವ್ಯಾನಿನಲ್ಲಿ ಕುಳ್ಳಿರಿಸಿಕೊಂಡರು. ಥಾಮಸ್‌ರವರು ಆ ಗುಂಪಿನಿಂದ ಹೊರಬಂದು ವ್ಯಾನಿನಲ್ಲಿ ಕುಳಿತುಕೊಳ್ಳಲು ಪ್ರಯತ್ನಿಸಿದರು. ಆದರೆ ಅವರು ಯಾವ ವಸ್ತುವನ್ನೋ ಮರೆತಂತಿತ್ತು. ಆ ಮರೆತ ವಸ್ತುವೇ ನಳಿನಿ....

"ನಳಿನಿ ಎಲ್ಲಿ.... ನಳಿನಿ ಎಲ್ಲಿ" ಎಂದು ಕೂಗಿ ಹುಡುಕಾಡಿದರು. ನಳಿನಿ ಅಲ್ಲಿ ಕಾಣಿಸಲಿಲ್ಲ

ಆಸ್ಪತ್ರೆಯ ಕಡೆ ಹೋಗಿರಬೇಕು ಎಂದು ಆಸ್ಪತ್ರೆ ಕಡೆ ಇಬ್ಬರು ಪೋಲೀಸರನ್ನು ಕಳುಹಿಸಿದರು ಥಾಮಸ್. ವ್ಯಾನು ಪೋಲೀಸ್ ಸ್ಟೇಷನ್‌ಗೆ ಹೊರಟಿತು. ರಜಾಕ್ ಮತ್ತು ಮಜೀದನನ್ನು ರಿಮ್ಯಾಂಡಿನಲ್ಲಿಟ್ಟರು. ರಜಾಕ್ ಮತ್ತು ಮಜೀದ್ ಬಂದ ವಿಷಯವು ರಾಜ್‌ಗೆ ತಿಳಿಯಿತು.

ಆದರೂ ಮೂವರನ್ನೂ ಮೂರು ಕೋಣೆಯಲ್ಲಿ ಹಾಕಿದ್ದರು.

ಥಾಮಸ್‌ರವರು ಅಲ್ಲಿ ನಿಲ್ಲಲಿಲ್ಲ. ಆ ಮೂವರನ್ನು ಜಾಗ್ರತೆಯಾಗಿ ನೋಡಿಕೊಳ್ಳುವಂತೆ ಹೇಳಿ ಆಸ್ಪತ್ರೆಯ ಕಡೆ ವ್ಯಾನಿನಲ್ಲಿ ಹೋದರು. ನಳಿನಿಯು ಅಲ್ಲೂ ಕಾಣಿಸಲಿಲ್ಲ.

ಪುನಃ ಮನೆಗೆ ಬಂದು ನೋಡಿದರು. ಮನೆಯು ತೆರದ ಬಾಗಿಲುಗಳಿಂದಿತ್ತು. ಆ ಮನೆಯಲ್ಲಿ ಯಾರೂ ಗಮನಿಸುವವರೇ ಇರಲಿಲ್ಲ. ಮನೆಯು ರುದ್ರಕಳೆಯನ್ನು ಹೊಂದಿತ್ತು. ಮನೆಯ ಒಂದೊಂದು ಕೋಣೆಯನ್ನೂ ಪರೀಕ್ಷಿಸಿದರು.

ಒಬ್ಬ ಕಾನ್ಸ್ಟೇಬಲ್ ಓಡಿಬಂದು,

"ಸಾರ್. ನಳಿನಿ ಇಲ್ಲಿ ಕುರ್ಚಿಯಮೇಲೆ ಕುಳಿತಿದ್ದಾರೆ" ಎಂದ.

ಪಕ್ಕದ ಕೋಣೆಯೊಳಕ್ಕೆ ಹೋದರು ಥಾಮಸ್. "ನಡಿ. ನಳಿನಿ. ದಯಮಾಡಿಟ್ಟು ನೀವು ಸ್ಟೇಷನ್ನಿನವರೆಗೂ ಬರಬೇಕಾಗುತ್ತದೆ" ಎಂದರು.

ನಳಿನಿ ಮಾತನಾಡಲಿಲ್ಲ. ಕೋಣೆಯೊಳಕ್ಕೆ ಪ್ರವೇಶಿದರು ಥಾಮಸ್. "ಸುಮ್ಮನೆ ನಡೆಯಿರಿ. ನಿಮಗೆ ಅವರಿಂದ ಆಗುವ ತೊಂದರೆಯೇನೂ ಇಲ್ಲ. ವೃಥಾ ನೀವು ಈ ಸಮಯದಲ್ಲಿ ತೊಂದರೆ ಕೊಡಬೇಡಿ. ನೀವು ನನ್ನ ಸಹೋದರಿ ಎಂದು ನೆನೆದು ಹೇಳುತ್ತಿದ್ದೇನೆ" ಎಂದರು.

ನಳಿನಿ ಥಾಮಸ್‌ರವರನ್ನು ದೃಷ್ಟಿಸಿ ನೋಡುತ್ತಿದ್ದಳು. ಥಾಮಸ್‌ರವರನ್ನು ದುರದುರನೆ ನೋಡುತ್ತಿದ್ದಳು. ಆಕೆಯ ನೋಟವು ಥಾಮಸ್‌ರವರನ್ನು ನೋಡುತ್ತಿದ್ದಂತಿತ್ತೇ ವಿನಃ ಆಕೆ ನೋಡುತ್ತಿರುವುದು ಆಕೆಗೆ ಅರಿವೇ ಆಗುತ್ತಿರಲಿಲ್ಲ.

"ಏಕೆ ಹೀಗೆ ನೋಡುತ್ತೀರಿ ನಳಿನಿ. ಸುಮ್ಮನೆ ಏಳಿ" ಎಂದರು ಥಾಮಸ್.

ಥಾಮಸ್‌ರವರನ್ನು ನೋಡುತ್ತಾ ಇರುವ ಹಾಗೆಯೇ ನಳಿನಿ ಒಮ್ಮೆ ಒಂದು ಕಿರುನಗೆಯನ್ನು ನಕ್ಕಳು. ಆದರೆ ಯಾವ ಮಾತನ್ನೂ ಆಡಲಿಲ್ಲ.

ನಳಿನಿಯ ಹಣೆಯೆಲ್ಲವೂ ಬೆವರಿನ ಹನಿಗಳು ಮುತ್ತು ಮುತ್ತಾಗಿ ನಿಂತಿತ್ತು. ಕೆಲವು ಹನಿಗಳು ಉದುರುತ್ತಿತ್ತು.

ಪಕ್ಕಕ್ಕೆ ಹೋದರು ಥಾಮಸ್.

ನಳಿನಿ ತಬ್ಬಿಬ್ಬಾಗಿದ್ದಳು. ಎರಡು ಬಾರಿ ಬಿಕ್ಕಳಿಕೆಗೊಂಡಳು. ಥಾಮಸ್‌ರವರಿಗೆ 'ಈಕೆ ನನ್ನನ್ನು ಏಮಾರಿಸಲು ಹೂಡಿರುವ ತಂತ್ರವೇ ಇರಬೇಕು' ಎಂದುಕೊಂಡು ನಳಿನಿಯನ್ನು ಎದ್ದೇಳುವಂತೆ ಘರ್ಜಿಸಿದರು.

ಪುನಃ ಮತ್ತೊಂದು ಬಾರಿ ಎದುರಿಗಿದ್ದ ಕೃಷ್ಣನ ಪಟವನ್ನು ನೋಡುತ್ತಾ ತುಂಬು ಮುಖದಿಂದ ನಕ್ಕಳು. ಅವಳ ಮುಖವು ಚಂದ್ರನ ಪ್ರಕಾಶದಂತೆ ಹೊಳೆಯುತ್ತಿತ್ತು.

ಮರುಕ್ಷಣದಲ್ಲೇ ಕುರ್ಚಿಯಿಂದ ಕೆಳಗುರುಳಿದಳು. ಥಾಮಸ್‌ರವರು ದಿಗ್ಭ್ರಾಂತರಾದರು. ನಳಿನಿಯನ್ನು ಎತ್ತಲು ಪ್ರಯತ್ನಿಸಿದರು. ನಳಿನಿಯ ಕುತ್ತಿಗೆಯು ಜೋಲಾಡುತ್ತಿತ್ತು. ಕೈಕಾಲು ತಣ್ಣಗಾಗುತ್ತಾ ಬಂದಿತು. ಕಣ್ಣುಗಳು ಆಳವನ್ನು ಹುಡುಕುತ್ತಿತ್ತು. ಬಾಯಿಂದ ಒಂದೇ ಸಮನೆ ಜೊಲ್ಲು ಸುರಿಯುತ್ತಿದ್ದುದು ನಿಂತಿತು.

ಪಕ್ಕದಲ್ಲಿದ್ದ ಕಾನ್ಸ್ಟೇಬಲ್ ಸ್ವಲ್ಪ ನೀರನ್ನು ತಂದು ಕುಡಿಸಿದ. ನೀರು ಬಾಯೊಳಗೆ ಹೋಗಲಿಲ್ಲ. ಹಾಗೆಯೇ ಹೊರಗಡೆ ಬಂದು ಚೆಲ್ಲಿಹೋಯಿತು.

ಡಾಕ್ಟರರನ್ನು ಕರೆದುಕೊಂಡು ಬರಲು ವ್ಯಾನನ್ನು ತೆಗೆದುಕೊಂಡು ಓಡಿದರು. ಡಾಕ್ಟರು ಬಂದು ನಳಿನಿಯನ್ನು ಪರೀಕ್ಷಿಸಿ 'ನಳಿನಿಯನ್ನು ನಂಬ ಬೇಡಿ. ನಳಿನಿ ಹಾರಿಹೋದಳು. ಈ ನರಲೋಕವನ್ನು ಬಿಟ್ಟು ಅಮರ ಲೋಕಕ್ಕೆ ಹೋದಳು' ಎಂದರು.

ನಳಿನಿಯನ್ನು ಮಂಚದ ಮೇಲೆ ಮಲಗಿಸಲಾಯಿತು.

ಟೇಬಲಿನ ಮೇಲೆ ಒಂದು ಕಾಗದವಿತ್ತು. ಅದನ್ನು ತೆಗೆದು ನೋಡಿ ದರು ಥಾಮಸ್. ಅದರಲ್ಲಿ ಹೀಗಿತ್ತು.

ಪೋಲೀಸ್ ವರ್ಗದ ಮುಖ್ಯಾಧಿಕಾರಿ ಮತ್ತು ಪತ್ತೇದಾರರಿಗೆ—

"ನನ್ನನ್ನು ನಾನೇ ಕೊಲೆಮಾಡಿಕೊಂಡೆ ಎಂದರೆ ಅದರಲ್ಲಿ ತಪ್ಪೇನೂ ಇಲ್ಲ. ಮೊದಲು ಇನ್‌ಸ್ಪೆಕ್ಟರ್ ಬಜ್ಜಯ್ಯನವರನ್ನು ಬಿಡುಗಡೆಮಾಡಿಕೊಳ್ಳಿರಿ. ಅವರು ರಜಾಕನ ರಹಸ್ಯ ಮಂದಿರದಲ್ಲಿ ಕೊಳೆತು ಸಾಯುತ್ತಿದ್ದಾರೆ" ಎನ್ನು ವಷ್ಟು ಮಾತ್ರ ಓದಿದರು. ಇನ್‌ಸ್ಪೆಕ್ಟರ್ ಬಜ್ಜಯ್ಯನವರು ಮರಣಕ್ಕೀಡಾಗಲಿ ದ್ದಾರೆ ಎಂದು ತಿಳಿದದ್ದೇ ಥಾಮಸ್‌ರವರು ನಳಿನಿಯನ್ನು ಆಸ್ಪತ್ರೆಗೆ ಕಳುಹಿ ಸುವಂತೆ ಹೇಳಿ ರಜಾಕನಿರುವ ಕೊಠಡಿಗೆ ಬಂದರು.

ಇನ್‌ಸ್ಪೆಕ್ಟರ್ ಬಜ್ಜಯ್ಯನವರೆಲ್ಲಿದ್ದಾರೆ ರಜಾಕ್ ?" ಎಂದು ಕೇಳಿದರು.

ರಜಾಕ್ ಬಾಯಿಬಿಡಲಿಲ್ಲ.

ಹೊಡೆದು ನೋಡಿದರು. ಬಡಿದು ಹಾಕಿದರೂ ಆತನ ಬಾಯಿಂದ ಒಂದು ಮಾತೂ ಹೊರಬರಲಿಲ್ಲ.

ಮಜೀದನು ಇರುವ ಕೋಣೆಗೆ ಹೋಗಿ ನೋಡಿ, ಆತನ ಬಳಿ ವಿಷಯ ವನ್ನು ಕೇಳಿದರು.

ಮಜೀದನೂ ಸಹ ಹೇಳಲು ನಿರಾಕರಿಸಿದ. ಲಾಠಿಯೇಟು ಬಿದ್ದ ನಂತರ ರಹಸ್ಯಮಂದಿರದಲ್ಲಿರುವ ಇನ್‌ಸ್ಪೆಕ್ಟರ್ ಬಜ್ಜಯ್ಯನವರನ್ನು ತೋರಿಸು ವಂತೆ ಒಪ್ಪಿಕೊಂಡ. ಮಜೀದನನ್ನು ಜೊತೆಗೆ ಕರೆದುಕೊಂಡು ಥಾಮಸ್ ರವರು ನಡೆದರು.

ಜೊತೆಗೆ ಪೋಲೀಸ್ ವ್ಯಾನೂ ಸಹ ಹೊರಟಿತು. ಸುಮಾರು ನಲವತ್ತು ಪೋಲೀಸರನ್ನೊಳಗೊಂಡಿತ್ತು ಆ ವ್ಯಾನಿನಲ್ಲಿ.

ರಹಸ್ಯ ಮಂದಿರಕ್ಕೆ ಹೋಗುವ ದಾರಿಯನ್ನು ಸೂಚಿಸಿದನು ಮಜೀದ್. ರಹಸ್ಯ ಮಂದಿರದ ಬಳಿ ಪೋಲೀಸ್ ವ್ಯಾನ್ ನಿಂತಿತು. ಜೀಪ್ ಕಾರಿನಲ್ಲಿ

ಹೋಗಿದ್ದ ಪತ್ತೇದಾರ ಥಾಮಸ್ ಮತ್ತು ಇತರ ಪೋಲೀಸರು ಮಜೀದ ನನ್ನು ವ್ಯಾನಿನಿಂದ ಕೆಳಗಿಳಿಸಿದರು.

ಮಜೀದನು ಬಂಡೆಯ ಬಳಿ ಹೋಗಿ ಬಂಡೆಯ ಪಕ್ಕದ ಮೂಲೆ ಯಲ್ಲಿದ್ದ ಒಂದು ಗುಂಡಿಯನ್ನು ಅದುಮಿದನು. ಬಂಡೆಯು ಮೆಲ್ಲನೆ ಎರಡು ಭಾಗವಾಗಿ ಬಾಯಿ ತೆರೆಯಿತು. ಸುಮಾರು ಇಬ್ಬರು ಮಾತ್ರ ಪ್ರವೇಶಿಸುವಂತಿತ್ತು ಆ ಜಾಗ. ಮೊದಲು ಒಬ್ಬ ಪೋಲೀಸಿನವನು ಅದರಲ್ಲಿ ಹೋದನು. ನಂತರ ಮಜೀದನನ್ನು ನಾಲ್ವರು ಪೋಲೀಸರು ಹಿಡಿದು ಕೊಂಡು ಬೆಟ್ಟದ ಮಧ್ಯೆ ಬಿಟ್ಟದ್ದ ಸಂದಿಯಲ್ಲಿ ನಡೆದರು. ಒಳಗಡೆ ಒಂದು ದೊಡ್ಡ ಮನೆಯಂತೆಯೇ ಇತ್ತು.

ನಾಲ್ಕಾರು ಕೋಣೆಗಳು ಮತ್ತು ಅರಮನೆಯಂತೆ ಶೋಭಾಯಮಾನ ವಾಗಿ ಥಳಥಳಿಸುತ್ತಿದ್ದ ಕನ್ನಡಿಗಳೂ, ಮತ್ತು ಆ ಜಾಗದಲ್ಲಿ ಪ್ರತಿಯೊಂದು ವಸ್ತುಗಳೂ ಬೆಲೆಯುಳ್ಳದ್ದೇ ಆಗಿತ್ತು. ಥಾಮಸ್ ಆ ಜಾಗವನ್ನು ಕಂಡು ಬೆರಗಾದರು.

ಮಜೀದನನ್ನು ಕುರಿತು "ಮೊದಲು ಇನ್ಸ್ಪೆಕ್ಟರ್ ಇರುವ ಜಾಗವನ್ನು ತೋರಿಸು" ಎಂದರು ಥಾಮಸ್.

ಮಜೀದನು ಇನ್ಸ್ಪೆಕ್ಟರಿರುವ ಕೊಠಡಿಗೆ ಕರೆದುಕೊಂಡು ಹೋಗುವುದ ರಲ್ಲಿದ್ದನು. ಗುಂಪು ಜನರು ಒಟ್ಟಾಗಿ ಖಾಕಿ ಉಡುಪುಗಳನ್ನು ಧರಿಸಿಕೊಂಡು ಬಂದಿರುವುದನ್ನು ಕಂಡಳು ಬೀಬೀಜಾನ್. ಯಾರೋ ಪೋಲೀಸರು ನುಗ್ಗಿ ದ್ದಾರೆಂದು ತಿಳಿದಳು.

ರಹಮಾನ್ ಖಾನ್ ಸಹಾ ಈ ಗುಂಪನ್ನು ನೋಡಿದ. ಆಗ ಆತನಿಗೆ ರಜಾಕ್ ಒಂದು ಬಾರಿ ಹೇಳಿಕೊಟ್ಟದ್ದ ಮಾತು ಜ್ಞಾಪಕಕ್ಕೆ ಬಂತು. ಬೀಬೀಜಾನ್ ಬಳಿ ಬಂದು,

"ಬೀಬೀಮಾ, ಪೋಲೀಸರು ಗುಂಪಾಗಿ ಬಂದುಬಿಟ್ಟದ್ದಾರೆ. ಇನ್ನು ನಾವು ತಪ್ಪಿಸಿಕೊಳ್ಳುವುದೆಂದರೆ ಸಾಧ್ಯವೇ ಇಲ್ಲ. ಮುಂದೆ ನಿನ್ನ ಅಭಿ ಪ್ರಾಯ ಹೇಗಿದೆ" ಎಂದು ಕೇಳಿದ ರಹಮಾನ್ ಖಾನ್.

"ಮಜೀದ್ ಮಾಡಿರುವ ಕೆಲಸವೇ ಇಷ್ಟು, ಇರಬೇಕೆಂದು ಊಹಿಸು ತ್ತೇನೆ" ಎಂದಳು ಬೀಬೀ.

"ಮತ್ತೆ ಮಜೀದನನ್ನು ಸಫಾ ಮಾಡಿಬಿಡಲೇ ?"

"ಜಾಗ್ರತೆಯಿಂದ ನೋಡು."

"ಥಾಮಸ್ ಜೊತೆಯಲ್ಲಿ ಬಂದಿದ್ದಾನೆಂದು ಕಾಣುತ್ತೆ ಬೀಬೀಮಾ."

"ಅವನಮೇಲೆಯೂ ಗುರಿಯಿಟ್ಟು ಹೊಡೆದುಬಿಡು."

"ಹೊಡೆಯಲು ನಾನು ಅಂಜುವುದಿಲ್ಲ. ಈಗ ಬಂದಿರುವ ಪ್ರತಿಯೊಬ್ಬರ ಕೈಲೂ ಬಂದೂಕ, ಲಾಠಿ, ಕತ್ತಿ, ಕಠಾರಿಗಳಿವೆ. ನಾನು ಗುಂಡು ಹಾರಿಸಿದೆನೆಂದರೆ ಅವರೆಲ್ಲರೂ ಒಟ್ಟುಗೂಡಿ ನಮ್ಮಮೇಲೆ ಗುಂಡಿನ ಸುರಿಮಳೆಯನ್ನೇ ಸುರಿಸಿಬಿಡಬಹುದು" ಎಂದನು.

"ಏನಾದರೂ ಆಗಲಿ ಮಜೀದನನ್ನು ಕೂಗುತ್ತೇನೆ ಬೀಬಿ" ಎಂದು ಬೀಬಿಯಬಳಿ ತಿಳಿಸಿ ಬಂದು ಮರೆಯಲ್ಲಿ ನಿಂತು "ಮ....ಜೀ....ದ್...." ಎಂದು ಕೂಗಿದ" ರಹಮ್ಮಾಖಾ.

ಮಜೀದ್ ಆ ಧ್ವನಿಯನ್ನು ಕೇಳಿಸಿಕೊಂಡ. ಪೋಲಿಸರು ಮಜೀದನು ಬಾಯಿ ತೆರೆಯದಂತೆ ಬಾಯಿಗೆ ಬಟ್ಟೆಯನ್ನು ತುರುಕಿದ್ದರಿಂದ ಆತನು ಮರುಮಾತನಾಡಲು ಆಗಲಿಲ್ಲ.

ಪೋಲೀಸರು ರಹಸ್ಯಮಂದಿರದ ನಾಲ್ಕಾರುಕಡೆ ಹೋಗಿ ಮುತ್ತಿಗೆ ಹಾಕಿದರು. ರಹಮ್ಮಾಖಾ ಮತ್ತು ಬೀಬೀಜಾನಳನ್ನು ಹಿಡಿದುಬಿಟ್ಟರು.

ಮಜೀದನು ಇನ್ಸ್ಪೆಕ್ಟರು ಇರುವ ಜಾಗವನ್ನು ತೋರಿಸಿದ.

ಇನ್ಸ್ಪೆಕ್ಟರ್ ಬಜ್ಜಯ್ಯನವರು ಎಲುಬಿನ ಪಂಜರವಾಗಿಬಿಟ್ಟಿದ್ದರು. ಅವರು ಈಗಲೋ ಆಗಲೋ ಪ್ರಾಣ ಹೋಗುವ ಸ್ಥಿತಿಯಲ್ಲಿದ್ದರು. ಎದುರಿಗೆ ಥಾಮಸ್‌ರವರು ಹೋಗಿ ನಿಂತರೂ ಬಜ್ಜಯ್ಯನವರಿಗೆ ಥಾಮಸ್‌ರವರನ್ನು ಗುರುತಿಸುವಷ್ಟು ತ್ರಾಣವೂ ಇರಲಿಲ್ಲ.

ಇನ್ಸ್ಪೆಕ್ಟರ ಸ್ಥಿತಿಯನ್ನು ನೋಡಿದ ಥಾಮಸ್ ಇನ್ಸ್ಪೆಕ್ಟರನ್ನು ಜೀಪ್ ಕಾರಿನಲ್ಲಿ ಆಸ್ಪತ್ರೆಗೆ ಕರೆದುಕೊಂಡು ಹೋಗುವಂತೆ ಹೇಳಿ ರಹಸ್ಯ ಮಂದಿರದ ಹೊರಗಡೆ ಬರುವುದರಲ್ಲಿದ್ದರು. ಮಜೀದನ ಮೇಲೆ ಎರಡುಬಾರಿ ಗುಂಡು ಹಾರಿತು. ಮಜೀದನು ಅಲ್ಲೇ ಬಿದ್ದುಹೋದನು.

ಇನ್ನು ಒಂದೇ ನಿಮಿಷದಲ್ಲಿ ಥಾಮಸ್‌ರವರು ಇನ್ಸ್ಪೆಕ್ಟರನ್ನು ಎತ್ತಿ ರಹಸ್ಯ ಮಂದಿರದಿಂದ ಹೊರಗೆ ಕಾಲಿಟ್ಟರು. ಒಳಗಿನಿಂದ ಗುಂಡು ಹಾರಿಸಿದವರಾರಿರಬೇಕೆಂದು ಪೋಲೀಸಿನವರು ಪುನಃ ರಹಸ್ಯ ಮಂದಿರದೊಳಗೆ ನುಗ್ಗಿ ಹುಡುಕಾಡಲು ಪ್ರಯತ್ನಿಸಿದರು.

ಕರ್ಣಕಠೋರವಾದ ಒಂದೇ ಒಂದು ಶಬ್ದ ಕೇಳಿಸಿತು. ಬಂಡೆಗಳೆಲ್ಲವೂ ಕುಸಿದುಬಿದ್ದುಬಿಟ್ಟಿತು. ಪ್ರತಿಯೊಂದೂ ನೆಲಮಟ್ಟವಾಯಿತು.

ಪೋಲೀಸರು ಸುಮಾರು ಇಪ್ಪತ್ತು ಇಪ್ಪತ್ತೈದುಮಂದಿ ಮತ್ತು ರಹಸ್ಯ ಮಂದಿರದೊಳಗಿದ್ದ ಸುಮಾರು ಇಪ್ಪತ್ತು ಮಂದಿಯೂ ಬಂಡೆಯ ಕೆಳಗೆ ಸಿಕ್ಕಿ ಪ್ರಾಣತ್ಯಾಗಮಾಡಿದರು. ಜ್ಞಾಪಕ ಚಿನ್ಹೆಗಾಗಿ ಅಲ್ಲಿನ ಒಂದು ಚೂರು ಸಾಮಾನು ಸಹಾ ಸಿಕ್ಕಲಿಲ್ಲ.

ಮಿಕ್ಕ ಪೋಲೀಸರೊಂದಿಗೆ ಥಾಮಸ್ ಸ್ಟೇಷನ್‌ಗೆ ಹಿಂತಿರುಗಿದರು. ಇನ್ಸ್‌ಪೆಕ್ಟರನ್ನು ಆಸ್ಪತ್ರೆಗೆ ಸೇರಿಸಿದರು. ನಂತರ ನಳಿನಿಯು ಬರೆದಿಟ್ಟಿದ್ದ ಚೀಟಿಯು ಜೇಬಿನಲ್ಲಿದೆಯೋ ಅಥವಾ ಗಲಾಟೆಯಲ್ಲಿ ಎಲ್ಲಾದರೂ ಹಾರಿ ಹೋಗಿದೆಯೋ ಎಂದು ಮುಟ್ಟಿ ನೋಡಿಕೊಂಡು ಚೀಟಿಯನ್ನು ತೆಗೆದು ನೋಡಿ ಅದನ್ನು ಪುನಃ ಜೋಬಿನಲ್ಲಿಟ್ಟುಬಿಟ್ಟರು.

೧೪

ಮಾರನೆಯ ದಿನ ರಾಜ್‌ರವರನ್ನು ಮತ್ತು ರಜಾಕ್‌ನನ್ನು ಕೋರ್ಟಿಗೆ ಹಾಜರ್ಪಡಿಸಿದರು. ಮೊದಲು ನಳಿನಿ ಬರೆದಿಟ್ಟಿದ್ದ ಮರಣದ ಓಲೆಯನ್ನು ಥಾಮಸ್‌ರವರು ನ್ಯಾಯಾಧಿಪತಿಯ ಮುಂದಿಟ್ಟರು. ನ್ಯಾಯಾಧಿಪತಿಯು ನಳಿನಿ ಬರೆದಿಟ್ಟಿದ್ದ ಕಾಗದವನ್ನು ಓದುವಂತೆ ಕೈಕೆಳಗಿನ ಗುಮಾಸ್ತೆ ಬಳಿ ತಿಳಿಸಿದರು.

ನಳಿನಿ ಬರೆದ ಕಾಗದದಲ್ಲಿ ಹೀಗಿತ್ತು. ಗುಮಾಸ್ತರು ಓದಲು ಮೊದಲಾದರು.

"ಪೋಲೀಸ್ ಅಧಿಕಾರಿಗಳಿಗೂ ಮತ್ತು ಪತ್ತೇದಾರ ಥಾಮಸ್‌ರವರಿಗೂ ನನ್ನ ವಂದನೆಗಳು. ನಾನು ಆತ್ಮಹತ್ಯ ಮಾಡಿಕೊಂಡು ಸಾಯಬೇಕಾದ ಪ್ರಮೇಯವೇನೆಂಬುದನ್ನು ತಮ್ಮ ಮುಂದಿಡಲು ನಾನು ಇಷ್ಟಪಟ್ಟಿದ್ದೇನೆ."

"ಇಷ್ಟು ಚಿಕ್ಕ ವಯಸ್ಸಿನಲ್ಲಿಯೇ ನಾನು ನನ್ನ ಆತ್ಮಹತ್ಯಮಾಡಿಕೊಂಡಿರುವುದು ತಮ್ಮೆಲ್ಲರಿಗೂ ಆಶ್ಚರ್ಯವೇ ಇರಬೇಕು. ಆದರೂ ಪರವಾಯಿಲ್ಲ. ನಾನು ನನ್ನ ನೀಚತ್ವದ ಕಾರ್ಯವನ್ನು ಮರೆಮಾಚದೆ ತಮ್ಮ ಮುಂದಿಡುತ್ತೇನೆ. ಸರಿಯಿದ್ದರೆ ನನ್ನ ಶೋಕವನ್ನು ಕೇಳಿ ಒಂದು ತೊಟ್ಟು ಕಣ್ಣೀರನ್ನು ಸುರಿಸಿ. ಸರಿಬೀಳದಿದ್ದಲ್ಲಿ ಮನಃಪೂರ್ವಕವಾಗಿ ದೂಷಿಸಿರಿ. ನಾನು ಸಮ್ಮತಿಸುತ್ತೇನೆ."

"ನಾನು ಆತ್ಮಹತ್ಯಮಾಡಿಕೊಳ್ಳಲು ಮುಖ್ಯ ಕಾರಣ—ಶೇಷಾದ್ರಿಪುರದ ವಾಸಿ ದಿವಂಗತ ರಾಮರಾಯರ ಮಗ ರಾರ್ಜರವರಿಂದ.

"ರಾರ್ಜ ತನ್ನ ಆಸ್ತಿಪಾಸ್ತಿಯು ತನ್ನ ಮಲತಾಯಿಯ ಮಕ್ಕಳಿಗೆ ಹಂಚಲ್ಪಡಬೇಕಾಗುತ್ತದೆಂಬ ದುರಭಿಪ್ರಾಯದಿಂದ ತನ್ನ ತಂದೆ ರಾಮರಾಯರಿಗೆ ವಿಷಹಾಕಿಕೊಲ್ಲಲು ಪ್ರಯತ್ನಿಸಿದರು. ಅದಕ್ಕೆ ಸಹಕರಿಸಲು ನನ್ನ ನೆರವನ್ನು ಕೇಳಿದರು. ಲೋಕವನ್ನೇ ಅರಿಯದ ಅಮಾಯಕಳಾದ ನಾನು ಅವರ ಮಾತಿಗೆ ಸಮ್ಮತಿಸಿ ರಾಜಾರಾಯರುಕೊಟ್ಟ ವಿಷದ ಪುಡಿಯನ್ನು ರಾಮರಾಯರಿಗೆ ಹಾಲಿನಲ್ಲಿ ಬೆರೆಸಿ ಕುಡಿಸಿದೆ."

"ನಾನು ಏಳು ವರ್ಷದ ಬಾಲಕಿಯಾಗಿದ್ದಾಗ ನನ್ನನ್ನು ಕರೆದುಕೊಂಡು ಹೊರಗೆ ಕಾಲಿಟ್ಟಳು. ನಾನು ಹೇಗೋ ಲಂಗವನ್ನು ಉಟ್ಟುಕೊಳ್ಳುತ್ತಿದ್ದವಳು ಹೇಗೋ ಸೀರೆಯನ್ನುಡಲು ಪ್ರಾರಂಭಿಸಿದೆ. ಆಗ ನನಗೆ ಹದಿನಾಲ್ಕು ವರ್ಷ. ಎಸ್. ಎಸ್. ಎಲ್. ಸಿ. ಪರೀಕ್ಷೆಯಲ್ಲಿ ಶೇರ್ಗಡೆಯಾದೆ."

"ನಮ್ಮ ತಾಯಿ ದುಡಿದು ದುಡಿದು ದಣಿದು ಹೋಗಿದ್ದರು. ನನ್ನ ಮುಂದಿನ ವಿದ್ಯಾಭ್ಯಾಸವನ್ನು ಮುಂದುವರಿಸಲು ಅವರಿಗೆ ಶಕ್ತಿಯುಂಟಾಗಲಿಲ್ಲ. ನಾನು ಸಹಾ ಅವರನ್ನು ಅತಿ ಕಷ್ಟಕ್ಕೀಡು ಮಾಡಲು ಇಷ್ಟವಿರಲಿಲ್ಲ."

"ನಮ್ಮ ತಾಯಿ ಖಾಯಿಲೆ ಬಿದ್ದರು. ಅವರು ಪರರೊಬ್ಬರ ಮನೆಯಲ್ಲಿ ಕೆಲಸ ಮಾಡುತ್ತಿದ್ದವರು. ಅವರ ಮನೆಯಲ್ಲೇ ಅವರು ಹಾಕಿದ ಕೂಳನ್ನು ನುಂಗಿ ನಾಯಿಯಂತೆ ಬಾಗಿಲು ಕಾಯುತ್ತಿದ್ದೆವು. ಅವರೊಬ್ಬ ಇಂಜಿನಿಯರ್. ಅವರಿಗೆ ಬೇರೆ ಊರಿಗೆ ವರ್ಗವಾಯಿತು.

"ನನ್ನತಾಯಿ ಹಾಸಿಗೆಯಿಂದೇಳಲು ಶಕ್ತಿಯಿಲ್ಲದವರಾದರು. ನಾನು ಬಾಹ್ಯ ಪ್ರಪಂಚದ ಕಷ್ಟವನ್ನು ಅರಿತಿರಲಿಲ್ಲ. ಆದರೂ ಆಗ ನನಗಿದ್ದ ಒಂದೇ ಒಂದು ಆಸ್ತಿಯೆಂದರೆ ನಾನು ಓದಿ ಮುಗಿಸಿದ್ದ ಹಳೆಯ ಪುಸ್ತಕಗಳು. ಅದನ್ನು ಮಾರಿ ತಾಯಿಯನ್ನು ಉಪಚರಿಸಿದೆ. ಉಪಯೋಗವಾಗಲಿಲ್ಲ.

"ನನ್ನ ತಾಯಿಯ ಪ್ರಾಣವನ್ನು ಉಳಿಸಬೇಕೆಂಬ ಅಭಿಪ್ರಾಯದಿಂದ ಡಾಕ್ಟರರ, ನರ್ಸ್‌ಗಳ, ಮೆಡಿಕಲ್ ಆಫೀಸರ, ವಾರ್ಡ್ ಜವಾನುರುಗಳ ಕಾಲನ್ನು ಹಿಡಿದೆ, ಕೆಂಜಿದೆ, ಅವರ ಕಾಲಿನಮೇಲೆ ಹೊರಳಾಡಿದೆ. ಅವರೂ ಸಹಾ ಅವರ ಕೈಲಾದಷ್ಟು ಉಪಚರಿಸಿದರು ನನ್ನ ಒತ್ತಾಯದಿಂದ" ಆದರೆ ನನ್ನ ತಾಯಿಯ ವಿಧಿ ಬೇರೆ ರೀತಿಯಲ್ಲಿತ್ತು.

"ಒಂದು ದಿನ ರಾತ್ರಿ ಹನ್ನೆರಡು ಘಂಟೆಯ ಸಮಯ. ನನ್ನ ತಾಯಿಯ ಸ್ಥಿತಿ ಚಿಂತಾಜನಕವಾಯಿತು. ತಾಯಿಯ ಬಾಯಿ ತಿರುಗದ ಹಾಗೆ ತೊದಲಲಾರಂಭಿಸಿದರು. ಕೈಕಾಲು ತಣ್ಣಗಾಗುತ್ತಾ ಬಂದಿತು. ಅದನ್ನು ನೋಡಿ ನನ್ನಿಂದ ಸಹಿಸಲಾಗಲಿಲ್ಲ. ಅಲ್ಲಿದ್ದ ವಾರ್ಡ್ ಡಾಕ್ಟರನ್ನು ಎಚ್ಚರಗೊಳಿಸಿ ನನ್ನ ತಾಯಿಯ ಸ್ಥಿತಿಯನ್ನು ವಿವರಿಸಿದೆ. ಅವರು ಆರಾಮವಾಗಿ ಲೋಕವನ್ನೇ ಮರೆತು ನಿದ್ರಿಸುತ್ತಿದ್ದವರು ನನ್ನ ವಿಜ್ಞಾಪನೆಯನ್ನು ವಿಚಾರಿಸಲಿಲ್ಲ. ವಿಪರೀತ ಘರ್ಜಿಸಿ ನನ್ನನ್ನಟ್ಟಿಸಿದರು. ತಾಯಿಯ ಎರಡು ಕಣ್ಣಲ್ಲಿ ಒಂದೇ ಸಮನೆ ನೀರು ಹರಿಯುತ್ತಲೇ ಇತ್ತು. ಪ್ರಜ್ಞೆಯೇ ಇರಲಿಲ್ಲ."

"ಅಲ್ಲಿಂದ ಓಡಿ ಡ್ಯೂಟಿ ಡಾಕ್ಟರ ಬಳಿ ಹೋಗಿ ನನ್ನ ತಾಯಿಯ ಸ್ಥಿತಿಯನ್ನು ವಿವರಿಸಿದೆ. ಅವರು 'ನಡಿಯಿರಿ ಬರುತ್ತೇನೆ' ಎಂದು ಹೇಳಿದರು. ವಾರ್ಡಿನ ನಂಬರನ್ನು ಗುರ್ತಿಸಿಕೊಂಡರು

"ಅವರು ಬರಲು ತುಂಬಾ ಹೊತ್ತಾಯಿತು. ಅಷ್ಟರಲ್ಲಿ ಮತ್ತೊಂದು ಬಾರಿ ನಾನೇ ಅವರನ್ನು ಭೇಟಿ ಮಾಡಿದೆ. ಅವರು ನನ್ನ ತಾಯಿಯನ್ನು ಚಿಕಿತ್ಸೆಮಾಡಲು ಬಂದರು. ಆಸ್ಪತ್ರೆಯ ಸ್ಟೋರಿನಲ್ಲಿದ್ದ ಇಂಜಕ್ಷನ್ ಟ್ಯೂಬನ್ನು ತಂದು ಇಂಜಕ್ಷನ್ ಮಾಡಿದರೂ ಅವರು ಮಾತ್ರವಲ್ಲದೆ ಅವರ ಸ್ನೇಹಿತರನೇಕರು ಡಾಕ್ಟರುಗಳನ್ನು ಕರೆದು ತಂದು ತೋರಿಸಿದರು. ಔಷಧಿಗಳನ್ನು ಕುಡಿಸಿದರು. ಬಹಳ ಕಷ್ಟಪಟ್ಟರು. ಅಂದು ಅವರು ಅವರ ಸ್ವಂತ ಹೆತ್ತ ತಾಯಿಯಂತೆ ಭಾವಿಸಿ ನನ್ನ ತಾಯಿಯನ್ನು ಉಪಚರಿಸಿದರು. ಕೊನೆಗೆ ನನ್ನ ತಾಯಿಯು ಬೆಳಿಗ್ಗೆ ಐದು ಘಂಟೆ ಸಮಯದಲ್ಲಿ ಯಮನ ರಾಜ್ಯಕ್ಕೆ ಯಾತ್ರೆ ಬೆಳೆಸಿದರು.

"ನಾನು ತಾಯಿ ಸತ್ತು ಹೋದಳಲ್ಲಾ. ನನ್ನ ಗತಿ ಮುಂದೇನಾಗಬೇಕಾಗಿದೆಯೋ ಎಂಬುದಾಗಿ ನನ್ನ ಜೀವನದ ಒಂದೊಂದು ಅಂಶವನ್ನೂ ವರ್ಣಿಸಿ ವರ್ಣಿಸಿ ಅಳುತ್ತಿದ್ದೆ. ನೆರೆದಿದ್ದ ಡಾಕ್ಟರಿಗೆ ಮತ್ತು ಡ್ಯೂಟಿ ಡಾಕ್ಟರಿಗೂ ನನ್ನ ಜೀವನದ ಬಗ್ಗೆ ಸೂಕ್ಷ್ಮ ಪರಿಚಯವಾಯಿತು. ನನ್ನ ತಾಯಿಯನ್ನು ಮಣ್ಣಿನೊಳಗೆ ಅಡಕಮಾಡಿಬಿಟ್ಟರು. ಮಣ್ಣಿನಬಿದ್ದು ಹೊರಳಾಡಿದೆ. ತಲೆ ಚಚ್ಚಿಕೊಂಡೆ—ನನ್ನ ತಲೆಗೆ ಗಾಯವಾಗಿ ನೈಸುಸ್ತಾಯಿತೇ ವಿನಃ ತಾಯಿಯ ಮುಖವು ಮತ್ತೊಮ್ಮೆ ನನ್ನ ಕಣ್ಣಿಗೆ ಕಾಣಿಸಲಿಲ್ಲ."

"ಡ್ಯೂಟಿ ಡಾಕ್ಟರು ನನ್ನನ್ನು ಅವರ ಮನೆಯಲ್ಲೇ ಇರುವಂತೆ ಹೇಳಿ ಅವರ ಮನೆಗೆ ಕರೆದುಕೊಂಡುಹೋಗಿ ನನ್ನನ್ನು ಇಟ್ಟುಕೊಂಡರು. ಅವರ ಮನೆಯಲ್ಲಿ ಮತ್ತು ಅವರ ತಾಯಿಯ ವಿನಃ ಮತ್ತಾರು ಇರಲಿಲ್ಲ.

"ಒಂದುದಿನ ಅವರಿಗೆ ಕಾಫಿ ಕೊಟ್ಟುಬರಲು ಮಹಡಿಯಮೇಲೆ ಹೋದೆ—ಅವರು ನನ್ನ ಕೈಯನ್ನು ಹಿಡಿದುಕೊಂಡು ಎಷ್ಟು ಅಂದವಾಗಿದೆ ಈ ಕೈ" ಯೆಂದು ವರ್ಣಿಸಿದರು. ಪುಷ್ಪವತಿಯಾಗಿ ಸುಮಾರು ಒಂಭತ್ತು ತಿಂಗಳಾಗಿದ್ದ ನಾನು ಯೌವನದ ದುಡುಕಿನಲ್ಲಿ ಹೆಜ್ಜೆಯಿಟ್ಟು ಪೇಚಾಡುತ್ತಿದ್ದೆ ಅವರ ಇಷ್ಟಕ್ಕೊಳಗಾದೆ. ಅವರು ನನನ್ನು ಚಪ್ಪರಿಸಿ ಚಪ್ಪರಿಸಿ ರುಚಿ ನೋಡಿದರು.

"ಅದಾದನಂತರ ಪ್ರತಿದಿನವೂ ನಮ್ಮಿಬ್ಬರ ಮನ್ಮಥಲೀಲೆಯ ಭಜನೆಯು ನಡೆಯುತ್ತಲೇ ಇತ್ತು. ಒಂದು ದಿನ ಅವರು ಮನೆಗೆ ಬರಲು ಬಹಳ ಹೊತ್ತಾಯಿತು. ಅರ್ಧಘಂಟೆಯಾದನಂತರ ಅವರ ಹೆಣವನ್ನು ಮನೆಯ ಮುಂದೆ ತಂದು ಜಗುಲಿಯಮೇಲೆ ಕೂಡಿಸಿದರು.

"ವಿವರಿಸಿದುದಕ್ಕೆ ಸಿಕ್ಕಿದ ಸುದ್ಧಿ—ಅವರು ಮಲಯಾಳಿಯೊಬ್ಬಳ ಪ್ರೀತಿಗೆ ಪಾತ್ರರಾಗಿದ್ದರೆಂದೂ, ಆ ಮಲಯಾಳಿ ಹೆಂಗಸಿಗೆ ನಾಲ್ಕಾರು ಧಗಡ್‌ಗಳು ಇದ್ದರೆಂದೂ ಅವರೇ ಇವರನ್ನು ಕೊಲೆ ಮಾಡಿದರೆಂದು ವ್ಯಕ್ತವಾಯಿತು. ಅವರು ಅಗ್ನಿಯಲ್ಲಿ ಭಸ್ಮವಾದರು. ಅವರತಾಯಿ ಅವರ ಮಗಳ ಊರಿಗೆ ಹೊರಟು ಹೋದರು. ನಾನು ಪುನಃ ಬೀದಿಯಲ್ಲಿ ಬಿದ್ದೆ.

"ಹದಿನೈದು ದಿನಗಳಿಂದ ನಾನು ಡ್ಯೂಟಿ ಡಾಕ್ಟರೊಂದಿಗೆ ಕಲೆತು, ಬೆರತು, ಮರೆದೆನಾದುದರಿಂದ ಬೀದಿಯಲ್ಲಿ ಓಡಾಡುವ ಶೃಂಗಾರ ರೂಪಸರನ್ನು ಕಂಡು ನನ್ನ ಮನಸ್ಸು ಬಯಸುತ್ತಿತ್ತು. ಅವರೂ ನನಗೆ ಅವರೇ ಕಣ್ಣನ್ನೆ ಮಾಡಿ ಕರೆಯುತ್ತಿದ್ದರು.

"ನಾನು ಅವರ ಮನಸ್ಸನ್ನು ತೃಪ್ತಿಪಡಿಸುತ್ತಿದ್ದೆ. ಅವರು ನನ್ನನ್ನು ಮುದ್ದಿಸಿ ನಾಲ್ಕಾರು ಹಣವನ್ನು ಕೈಗೆ ಕೊಟ್ಟು ಹೋಗುತ್ತಿದ್ದರು.

"ನಾನು ಚಿಕ್ಕದಾದ ಒಂದು ರೂಮನ್ನು ಮಾಡಿಕೊಂಡೆ. ಕಾಲೇಜ್ ಓದುವ ಯುವಕರು ಮೆಲ್ಲನೆ ಮರ್ಯಾದೆಯಿಂದ ಬಂದು ನನ್ನನ್ನು ಮುಟಿ ಅಗಲುತ್ತಿದ್ದರು.

"ಹೀಗೆಯೇ ಕಾಲ ಕಳೆದರೆ ನನ್ನ ಗತಿ ಏನಾಗಬೇಕೆಂದು ತಿಳಿದು

ಪುನಃ ಎಲ್. ಎಂ. ಪಿ. ಓದಲು ಮೊದಲಾದೆ.

"ನನಗೆ ವರಮಾನಕ್ಕೆ ಏನೂ ಕೊರತೆಯಿರಲಿಲ್ಲ. ಹೆಚ್ಚು ಹಣಕ್ಕಾಗಿ ಹಾತೊರೆಯುತ್ತಿರಲಿಲ್ಲ. ಸರಿಯಾದ ಒಂದಿಬ್ಬರನ್ನು ಗುರ್ತಿಸಿಕೊಂಡೆ. ಅವರು ನನ್ನ ಜೀವನವನ್ನು ಸ್ವರ್ಗದಂತೆ ನಡೆಸುತ್ತಿದ್ದರು. ನಾನು ಎಲ್. ಎಂ. ಪಿ. ಓದನ್ನು ಮುಗಿಸಿದೆ.

"ಎಲ್. ಎಂ. ಪಿ. ಮುಗಿಸಿದ ಮೇಲೆ ನಾನು ಆಸ್ಪತ್ರೆಯಲ್ಲಿ ನರ್ಸ್ ಕೆಲಸಕ್ಕೆ ಸೇರಿದೆ. ಅದೂ ನನ್ನ ದುರದೃಷ್ಟವೇ ಎಂದುಕೊಂಡೆ.

"ನಾವಿಬ್ಬರೂ ಪ್ರೇಮಿಗಳಾದೆವು. ಒಂದೇ ಕಡೆ ಒಂದು ಮನೆ ಗೊತ್ತುಮಾಡಿಕೊಂಡು ಕಾಲ ಕಳೆಯುತ್ತಿದ್ದೆವು. ವಯಸ್ಸಿಗೆ ಬಂದ ನಾವಿಬ್ಬರು ಹೀಗೆ ಕಾಲ ಕಳೆದರೆ ಊರಿನ ಜನರ ಅಪಹಾಸ್ಯಕ್ಕೆ ಪಾತ್ರರಾಗುವೆ ವೆಂದು ತಿಳಿದು ರಿಜಿಸ್ಟರ್ ಮದುವೆ ಮಾಡಿಕೊಂಡೆವು.

"ಷಣ್ಮುಗಂ ಆಗಾಗ ನನ್ನನ್ನು ಹೆದರಿಸಿ ಬೆದರಿಸುತ್ತಿದ್ದ. "ನೀನೇನು ಅಲಂಕಾರವಾಗಿದ್ದೀ. ಅಪ್ಸರೆಯಂತಹ ಸುಂದರಿಯರೆಲ್ಲಾ ನನ್ನ ಕಾಲಿನ ಮೇಲೆ ಬಂದು ಬೀಳುತ್ತಿದ್ದಾರೆ. ನಾನು ಅವರನ್ನು ಬಿಟ್ಟು ನಿನ್ನಂತಹ ದರಿದ್ರಳನ್ನು ಕೈ ಹಿಡಿದೆನಲ್ಲಾ" ಎಂದು ಬೊಗಳಲು ಪ್ರಾರಂಭಿಸಿದ.

"ಕೊನೆಗೆ ಒಂದು ದಿನ (ಅಂದರೆ) ರಾಮರಾಯರಿಗೆ ಆಸ್ಪತ್ರೆಗೆ ಸೇರಿಸಿದ ಎರಡು ತಿಂಗಳ ನಂತರ ರಾರ್ಜ ನನ್ನ ಬಳಿ ಒಂದು ಆಸೆಯ ಮಾತುಗಳನ್ನಾಡಿ ಪಶು ಬಲೆ ಬೀಸಿದ. 'ನನ್ನ ಮಾತು ಕೇಳಿದರೆ ನಿನಗೆ ರಾಣಿಯಾಗಿಸು ತ್ತೇನೆ. ನನ್ನ ಮಾಳಿಗೆ ಮನೆಯಲ್ಲಿ ನಿನಗೊಂದು ಉತ್ತಮ ಕೋಣೆಯೊಂದ ನ್ನೇರ್ಪಡಿಸಿಕೊಟ್ಟು ನಿನ್ನನ್ನು ಅರಗಿಣಿಯಂತೆ ಲಾಲಿಸುತ್ತೇನೆ. ನನ್ನ ರಾಣಿ ಮೋಹಿನೀ, ರಂಭಾ, ತಿಲೋತ್ತಮ, ನಕ್ಷತ್ರವೇ ಎಂಬುದಾಗಿ ನನ್ನನ್ನು ಉಬ್ಬಿಸಿದನು."

"ಷಣ್ಮುಗಂ ನನ್ನನ್ನು ಕೈಬಿಡುವ ಮುನ್ನ ಬೇರೊಬ್ಬನನ್ನು ಕೈಹಿಡಿಯ ಬೇಕಾದದ್ದು ನನ್ನ ಜೀವನದ ಕರ್ತವ್ಯವಲ್ಲವೇ ? ಅದನ್ನು ನೆನೆದು ರಾರ್ಜ ಮಾತುಗಳಿಗೆ ಮನಸೋತೆ. ತಮಗೆ ನನ್ನಿಂದಾಗಬೇಕಾದ ಕರ್ತವ್ಯವೇ ನೆಂದು ಪ್ರಶ್ನಿಸಿದೆ.

ಅವರು "ಈ ಪುಡಿಯನ್ನು ನನ್ನ ತಂದೆಯವರಿಗೆ ಕುಡಿಸಬೇಕು" ಎಂದು ಹೇಳಿ ನನ್ನ ಕೈಗೆ ಒಂದು ಪೊಟ್ಟಣವನ್ನು ಕೊಟ್ಟರು. ಅದನ್ನು ನಾನ

ಬಿಚ್ಚಿ ನೋಡಿದೆ. ಆ ಪೊಟ್ಟಣದಲ್ಲಿ ಬಿಳೀ ಪುಡಿ ಇತ್ತು. ಅದರಲ್ಲಿ ಅರ್ಧ ತೆಗೆದು ಒಂದು ಭಾಗವನ್ನು ಹಾಲಿನಲ್ಲಿ ಕಲಸಿ ರಾಮರಾಯರಿಗೆ ಕುಡಿಸಿದೆ. ಬಹಳವಾಗಿ ರೋಗದಿಂದ ಕೃಷಿಹೊಂದಿದ್ದ ಅವರು ಅತಿ ಬೇಗನೆ ಸತ್ತರು.

"ವಿಷಯವನ್ನು ರಾರ್ಜ ಬಳಿ ತಿಳಿಸಿದೆ. ನನ್ನನ್ನು ಕೊಂಡಾಡಿದರು."

"ಅನಂತರ ಅವರು ನನ್ನನ್ನು ಮಾತಾಡಿಸಿದ ಅಭಿಮಾನ, ಉಪಚಾರದ ಮಾತುಗಳು, ಇವೆಲ್ಲವನ್ನೂ ಸ್ವಲ್ಪ ಕಡಿಮೆಮಾಡಿಕೊಂಡರು. ನನಗೂ ಭಯ ವಾಯಿತು."

"ಆಸ್ಪತ್ರೆಯವರು ರಾಮರಾಯರ ಕೊಲೆಯನ್ನುದ್ದೇಶಿಸಿ ವಿಚಾರಮಾಡಿ ನನ್ನ ಗಂಡ ಷಣ್ಮುಗಂನನ್ನು ತಪ್ಪಿತಸ್ಥನೆಂದು ಊಹಿಸಿ ಅವರನ್ನು ಪೋಲೀಸರ ವಶ ಮಾಡಿದರು."

"ರಾರ್ಜ ನನ್ನ ಕೈಬಿಡುವವನಲ್ಲ. ದೊಡ್ಡ ಸಾಹುಕಾರ. ರಾಣಿಯಂತೆ ಮೆರೆಯಬಹುದೆಂಬ ದುರಾಸೆಯಿಂದ ಗುಟ್ಟನ್ನು ಬಿಡಲಿಲ್ಲ. ಷಣ್ಮುಗಂನನ್ನು ಪೋಲೀಸರಿಗೆ ಬಲಿಕೊಟ್ಟೆ."

"ರಾರ್ಜ ತನ್ನ ಹೆಂಡತಿ ಶಾಂತ—ರಾಮರಾಯರನ್ನು ಕೊಲ್ಲಲು ಕಾರಣಕರ್ತಳೆಂದೂ ಅದಕ್ಕೆ ಷಣ್ಮುಗಂ ಸಹಕರಿಸಿದನೆಂದೂ, ಅವಳು ಬರೆದ ಹಾಗೆಯೇ ಒಂದು ಕಾಗದವನ್ನು ಬರೆದಿಟ್ಟು ಅದನ್ನು ಪತ್ತೇದಾರ ಥಾಮಸ್ ರವರಿಗೆ ತೋರಿಸಿ, ಅವರು ನಂಬುವಂತೆ ಮಾಡಿಸಿ ಪುನಃ ಶಾಂತಳನ್ನೂ ಥಾಮಸ್‌ರವರನ್ನೂ ಅವರ ಮನೆಗೆ ಕರೆದುಕೊಂಡು ಬರುವ ಮೊದಲೇ ತನ್ನ ಸೂಳೆ ಬೀಬಿಜಾನಳ ಅಣ್ಣ ರಜಾಕ್‌ನ ರಹಸ್ಯ ಮಂದಿರಕ್ಕೆ ಕಳುಹಿಸಿದ. ಥಾಮಸ್‌ರವರು ಆ ವಿಷಯವನ್ನು ನಂಬಿ ನರಿಯಂತಿದ್ದವರು ಕುರಿಯಾದರು.

"ನಾನು ವಿಷಹಾಕುವಾಗ ಓರೆಗಣ್ಣಿನಿಂದ ನೋಡುತ್ತಿದ್ದ ವಾರ್ಡ್ ಬಾಯ್ ಬಾಷಾ ನನ್ನನ್ನು ರುಚಿನೋಡಬೇಕೆಂದೂ, ಹಾಗೆ ನಾನು ಅವನಿಗೆ ಆಸ್ಪದ ಕೊಡದಿದ್ದರೆ ರಹಸ್ಯವನ್ನು ಪರಸ್ಯ ಮಾಡುವುದಾಗಿ ನನ್ನಬಳಿ ಕೆಣಕುತ್ತಿದ್ದ. ನಾನು ಅವನಿಗೆ ಒಂದೂ ಸರಿಯಾದ ಉತ್ತರವನ್ನು ಕೊಡುತ್ತಿರಲಿಲ್ಲ, ಮೌನವನ್ನಾಚರಿಸುತ್ತಿದ್ದೆ ಅವನಲ್ಲಿ.

"ಒಂದುದಿನ ರಜಾಕನ ರಹಸ್ಯ ಮಂದಿರಕ್ಕೆ ರಾರ್ಜನನ್ನನ್ನು ಕರೆದುಕೊಂಡು ಹೋದರು. ಸಮಯವನ್ನು ಕಾದಿದ್ದ ರಜಾಕನೂ ನನ್ನನ್ನು ಹಿಸುಕಿ ಹಿಂಡಿಹಾಕಿದನು ಪ್ರೇಮದ ದೆಸೆಯಿಂದ.

"ರಜಾಕನ ಕೈವಾಡ ನನ್ನ ಮೇಲಾಯಿತು. ನಂತರ ಒಂದರೆಕ್ಷಣವ
ಅಲ್ಲಿ ನಿಲ್ಲದಂತೆ ಕಷ್ಟಪಟ್ಟು ರಾಜ್ಜನನ್ನು ಹೊರಗೆ ಕರೆದುಕೊಂಡು ನನ್ನನು
ಯನ್ನು ಸೇರಿದೆ.

"ನನ್ನನ್ನು ರಜಾಕನು ಅದುಮುವಾಗ ಅವನು ಹೇಳಿದಮಾತು "ರಾ
ನಳಿನಿ, ನೀನಿದ್ದಿಯೆಂದು ತಿಳಿದೇ ಶಾಂತಳನ್ನು ಕಾಬೂಲ್ ಖಂದಾರಿನಿಂ
ಬಂದಿದ್ದ ಪಠಾಣನೊಬ್ಬನಿಗೆ ಮಾರಿದೆ. ಅವಳು ಈಗ ಇಲ್ಲಿಲ್ಲ. ಪಠಾಣನ
ಕರೆದುಕೊಂಡು ಹೋದ. ನೀನು ನನ್ನ ಮಾತನ್ನಾಲಿಸಿ ನನ್ನಲ್ಲಿಯೇ ಇದ
ಬಿಟ್ಟರೆ ನೀನೆ ನನ್ನ ಪಟ್ಟದರಾಣಿ" ಎಂದು ವಿಷಯ ತಿಳಿಸಿದ. ಆಗ ನಾನ
ಅವನನ್ನು ಗುಂಡಿನೇಟು ಬಿದ್ದು ಸಾಯುತ್ತಿ ಎಂದು ಶಾಪಕೊಟ್ಟೆ.

"ನಂತರ ಥಾಮಸ್‌ರವರ ಮುಂಜಾಗರೂಕತೆಯಿಂದ ನನ್ನನ
ಗುಮಾನಿಯಮೇಲೆ ವಿಚಾರಿಸಿದರು. ಸಮಯಕ್ಕೆ ತಕ್ಕಂತೆ ಮಜೀದ್—
ಬಂದು ಮಾತನಾಡಿಸಿದ. ಅರೆಕ್ಷಣದಲ್ಲಿಯೇ ರಜಾಕನೂ ಬಂದ.

"ಪತ್ತೇದಾರರಿಗೂ ರಜಾಕನಿಗೂ ಗಲಭೆಯಾಯಿತು. ಬೀದಿಯ
ಬಾಗಿಲನ್ನು ತೆಗೆದು ಬೀದಿಯಲ್ಲಿ ನಡೆಯುತ್ತಿದ್ದ ಜನರನ್ನು ಕೂಗಿದೆ
ಬೀದಿಯ ಜನರು ಮನೆಗೆ ಬಂದರು. ನಾನು ನನ್ನ ಕೆಲಸಕ್ಕೆ ಮೊದಲಾದೆ

"ರಾಜ್ಜ ರಾಮರಾಯರಿಗೆ ವಿಷಕೊಡಲು ಕೊಟ್ಟ ವಿಷದಪುಡಿಯ
ಅರ್ಧಭಾಗವು ನನ್ನಲ್ಲಿತ್ತು. ಅದು ನನ್ನಲ್ಲಿದ್ದದ್ದೂ ಒಂದು ಒಳ್ಳೆಯದೆ
ಎಂದು ಭಾವಿಸುತ್ತೇನೆ. ನಂತರ ನಾಲ್ವರ ಕೈಲಿ ಸಿಕ್ಕಿ ನಾಚಿಕೆಯಿಂದ ತ
ತಗ್ಗಿಸಿ ನಾಲ್ವರಲ್ಲಿ ದೂಷಿಸಿಕೊಂಡು ಸಾಯುವ ಬದಲಾಗಿ ಯಾರ ಕಣ್ಣಿಗ
ಬೀಳದಂತೆ ನಾನು ಸಾಯಬೇಕೆಂದು ನನ್ನ ಮನಸ್ಸು ನನಗೆ ಸಲಹೆಕೊಟ್ಟಿತ
ನಾನು ಆ ವಿಷದ ಪುಡಿಯನ್ನು ಅಮೃತವೆಂದು ಸವಿದೆ.

"ಈಗ ಹೇಳಿ ಲೋಕದ ರೀತಿ ನೀತಿಗಳನ್ನರಿತಿರುವ ಸಹೋದರ ಸಹೋ
ದರಿಯರೇ ನಾನು ಮಾಡಿದ ಅನ್ಯಾಯವೇನಿದೆ. ಅತಿ ಆಸೆಬಿದ್ದು ಶ್ರೀಮಂ
ಕುಟುಂಬದ ದೊಡ್ಡ ತಲೆಯನ್ನು ವಿಷಹಾಕಿ ಕೊಂದೆಯಲ್ಲಾ ಎಂದು ಬಯ
ತ್ತೀರೇ ? ಬಯ್ಯಲಾದರೂ ನಿಮಗೆ ಬಾಯಿಬರುತ್ತದೆಯೇ ? ಆಗ ನನ್ನ ಸ್ಥಿ
ಹೇಗಿತ್ತು. ನೀವೇ ನೆನೆದು ನೋಡಿರಿ ! ನನ್ನ ಸ್ಥಿತಿಯಲ್ಲಿ ಆಗ ನೀವ
ಇದ್ದಿದ್ದರೆ ಏನುಮಾಡುತ್ತಿದ್ದಿರಿ ?

"ನಾನು ಮಾಡಿದ್ದೇನೋ ತಪ್ಪೇ ಇರಬಹುದು. ಅದಕ್ಕಾಗಿ ದೂ

ಸಿದರೂ ನಾನು ಲಕ್ಷ್ಯದಲ್ಲಿಡುವುದಿಲ್ಲ. ನಾನು ವಿಷವನ್ನು ಕೊಡಲು ಮುಖ್ಯ ಕಾರಣಕರ್ತರಾರು? ಎಂಬುದನ್ನು ಊಹಿಸಿನೋಡಿರಿ. ನಿಮಗೆ ವ್ಯಕ್ತವಾಗುತ್ತದೆ.

"ಲೋಕದ ಜನಗಳೇ—ಹಣದಿಂದ ಮೆರೆಯುತ್ತಿರುವ ಹೆಣಗಳೇ, ನಿಮಗೆ ಕೇಳುತ್ತಿದ್ದೇನೆ. ಅಣು ಅಣುವಾಗಿ ಕ್ಷೀಣಿಸುತ್ತಿರುವ ಈ ಜೀವವು ಸಂಪೂರ್ಣವಾಗಿ ಹೋಗುವುದರೊಳಗಾಗಿ ನಿಮ್ಮನ್ನು ದೂಷಿಸದೆ ನಾನು ಪ್ರಾಣಬಿಡಲಾರೆ,"

"ಕೊನೇದಾಗಿ ನಾನು ನಾಡಿನ ನಾಗರೀಕ ತರುಣರಲ್ಲಿ ಬೇಡಿಕೊಳ್ಳುತ್ತಿದ್ದೇನೆ. ನಾನೊಬ್ಬ ನರ್ಸ್. ನನಗೆ ರಾಜ್ ಮಾಡಿದ ದ್ರೋಹದಂತೆ ನೀವ್ಯಾರೂ ಬೇರೆ ನರ್ಸನ್ನು ಅಪಘಾತಕ್ಕೆ ಗುರಿಮಾಡದಿರಿ.

"ಇಂದು ನರ್ಸ್ ನಳಿನಿಯ ಜೀವವು ಹಸಿವು, ಬಾಯಾರಿಕೆಯಿಂದಲೂ ಸಾಯುವ ಸಮಯದಲ್ಲಿ ನೀರನ್ನು ಬಿಡಲು ಯೋಗ್ಯತೆಯಿಲ್ಲದವಳಾಗಿ ಪ್ರಾಣ ಬಿಡುತ್ತಿದ್ದಾಳೆ.

"ಇನ್ನು ಮುಂದೆ ಇರುವ ನರ್ಸ್‌ಗಳಿಗೂ, ಆಗಲಿರುವ ನರ್ಸ್‌ಗಳಿಗೂ ಹೀಗೆ ಕುಟಿಲ ತಂತ್ರದ ಆಸೆಯನ್ನು ತೋರಿಸಿ ಅವರು ಆತ್ಮಹತ್ಯೆಗೆ ಗುರಿಯಾಗುವಂತೆ ಮಾಡಬೇಡಿ."

'ಇತಿ ನರ್ಸ್ ನಳಿನಿ.'

ಎಂದು ಕಾಗದದಲ್ಲಿ ಬರೆದಿದ್ದುದನ್ನು ಓದಿದನು ಲಾಯರ್ ಗುಮಾಸ್ತ.

ಕೋರ್ಟಿನಲ್ಲಿದ್ದವರೆಲ್ಲರೂ ಕಣ್ಣೀರ್ಗರೆಸಿದರು. ರಜಾಕನು ಶಾಂತಳನ್ನು ಪಠಾಣನಿಗೆ ಮಾರಿದ ಎಂಬ ಘಟ್ಟವು ಬರುವಾಗಲಂತೂ ರಾಜ್ ಎದ್ದು ಪೋಲೀಸರ ಹಿಡಿತದಿಂದ ಬಿಡಿಸಿಕೊಂಡು ರಜಾಕನನ್ನು ಹೊಡೆಯಲು ಹಾತೊರೆದ. ಆತುರ ಪಟ್ಟ. ಪೋಲೀಸರು ಆತನನ್ನು ತಡೆದರು.

ರಾಜ್‌ನನ್ನು ವಿಚಾರಣೆಗೆ ತೆಗೆದುಕೊಂಡರು. ಬಾರಿನಲ್ಲಿ ನಿಲ್ಲಿಸಿದರು.

ಸರ್ಕಾರದ ಲಾಯರು ರಾಜ್‌ನನ್ನು ಕುರಿತು,

"ರಾಮರಾಯರ ಕೊಲೆಗೆ ಕಾರಣಕರ್ತರಾರು?" ಎಂದು ಕೇಳಿದರು.

"ನಾನೇ ಸ್ವಾಮಿ! ಮಿಕ್ಕ ವಿಷಯವೆಲ್ಲವೂ ನಳಿನಿಯು ಬರೆದಿಟ್ಟಿರುವ ಕಾಗದದಂತೆಯೇ! ಹೆಚ್ಚು ನನ್ನನ್ನು ಪ್ರಶ್ನಿಸಬೇಡಿ. ತಪ್ಪಿತಸ್ಥನು ನಾನೇ" ಎಂದು ಒಪ್ಪಿಕೊಂಡನು.

ರಜಾಕನ ವಿಚಾರಣೆಯಲ್ಲಿ ರಜಾಕನು "ತಾನು ನಿರಪರಾಧಿಯೆಂದು ತನಗೂ ರಾರ್ಜಗೂ ಸಂಬಂಧವಿಲ್ಲವೆಂದೂ ವಾಕ್ಚಾತುರ್ಯವನ್ನುಪಯೋಗಿ ವಿಫಲನಾದನು.

ನ್ಯಾಯಾಧೀಶರು ರಜಾಕನಿಗೂ, ರಾರ್ಜಗೂ ಶಿಕ್ಷೆಯನ್ನು ವಿಧಿಸಿದರ

ನಳಿನಿಯ ಶೋಕ ಜೀವನ ಕಥೆಯನ್ನು ಕೇಳಿದನಂತರ ಥಾಮಸ್ ಬಿಕ್ಕಿ ಬಿಕ್ಕಿ ಅಳಲು ಮೊದಲಾದರು. ಕಾರಣ ನಳಿನಿ ಥಾಮಸ್‌ರ ತಂ ಯಾಗಿದ್ದಳು. ನಳಿನಿಯ ಜೀವನದ ಕಥೆಯು ಓದುವುದನ್ನು ಕೇಳಿದ ನಂತ ನಳಿನಿ ತನ್ನ ಸಹೋದರಿಯೇ ಎಂಬುದು ನಿರ್ಧಾರವಾಯಿತು ಥಾಮಸ್ ರವರಿಗೆ.

ಪೋಲೀಸರು ರಾರ್ಜ ಮತ್ತು ರಜಾಕನನ್ನು ಸೆರೆಮನೆಗೆ ಕರೆದುಕೊಂ ಹೋದನಂತರ ಥಾಮಸ್‌ರು ನಳಿನಿಯ ಭೌತಿಕ ಶರೀರದ ಬಳಿ ಓಡಿದ

ಆಸ್ಪತ್ರೆಯಲ್ಲಿ ನಳಿನಿಯ ಭೌತಿಕ ಶರೀರವೂ ಇರಲಿಲ್ಲ. ಸ್ಮಶಾನ ಹೋಗಿದೆಯೆಂದು ಹೇಳಿದರು ಆಸ್ಪತ್ರೆಯವರು.

ಸ್ಮಶಾನಕ್ಕೆ ಓಡಿದರು ಥಾಮಸ್‌ರವರು. ನಳಿನಿಯ ಭೌತಿಕ ಶರೀರ ಆಗತಾನೆ ಹಸಿ ಮಣ್ಣಿನಲ್ಲಿ ಕಲೆತುಹೋಗಿತ್ತು.

ಅಂತ್ಯ ಕಾಲದಲ್ಲೂ ನಳಿನಿಯ ಮುಖವನ್ನೂ ನೋಡಲಾಗಲಿಲ್ಲವ ಎಂದು ಥಾಮಸ್‌ರವರ ಗೋಳಿಟ್ಟರು.

ಥಾಮಸ್‌ರವರಿಗೆ ಸರ್ಕಾರದಿಂದ ಗೌರವಾರ್ಥವಾಗಿ ಬೆಳ್ಳಿ ಕೊಲೋಂದನ್ನು ಬಹುಮಾನವಾಗಿ ಕೊಡಲಾಯಿತು.

ನರ್ಸ್ ನಳಿನಿಯ ಕಥೆಯು ಈ ರೀತಿ ಮುಗಿಯಿತಲ್ಲಾ ಎಂಬುದ ನಾಡಿನ ನಾನಾ ಜನರು ರೋಧಿಸುತ್ತಿದ್ದರು.

**ಸಂಪೂರ್ಣಂ**



ಶ್ರೀಮಾನ್ ಬಿ. ಕೆ. ಸುಂದರರಾಜ್‌ರವರಿಂದ ರಚಿತವಾದ "ಪ್ರಿನ್ಸಿಪಾಲ್‌ಕೊಠಿ" ಮತ್ತು "ಮರಣದಂಡನೆ" ಈ ಎರಡು ಚಿಕ್ಕ ಕಾದಂಬರಿಗಳನ್ನು ಓದಿ ನೋಡಿದೆನು ಇವು ಹೆಸರಿಗೆ ಪತ್ತೇದಾರಿ ಕಾದಂಬರಿಗಳಾದರೂ ಇದರಲ್ಲಿ ಹಲವಾರು ಕಟು ಸಮಸ್ಯೆಗಳು ಅಡಕವಾಗಿವೆ. ಧನಮದದಿಂದ ಮಾಡಬಾರದ ಅತ್ಯಾಚಾರಗಳನ್ನು ನಡೆಸುವ ಶ್ರೀಮಂತರನ್ನೂ, ಅಧಿಕಾರಮದದಿಂದ ನೀತಿಯಿಲ್ಲದ ದಬ್ಬಾಳಿಕೆಯನ್ನು ನಡೆಸುವ ಅಧಿಕಾರಿಗಳನ್ನೂ ಈ ಕಾದಂಬರಿಯಲ್ಲಿ ಚಿತ್ರಿಸಿದ್ದಾರೆ. ದುಡ್ಡಿಗಾಗಿ ಮಾಡಬಾರದ ನೀಚಕೃತ್ಯಗಳನ್ನೂ ಮಾಡುವ ಸಮಾಜ ದ್ರೋಹಿ ವ್ಯಕ್ತಿಗಳನ್ನು ಎತ್ತಿ ತೋರಿಸಿದ್ದಾರೆ.

ಈ ಕೃತಿಯು ಇವರ ಪ್ರಥಮ ಪ್ರಯತ್ನವಾದ್ದರಿಂದ ಭಾಷೆ ನಯವಾಗಿರದೆ ಅಲ್ಲಲ್ಲಿ ಸ್ವಲ್ಪ ಕಟುವಾಗಿದೆ. ಇವರು ತರುಣ ಲೇಖಕರಾದ್ದರಿಂದಲೂ ಸಮಾಜದ ಲೋಪದೋಷಗಳನ್ನು ಎತ್ತಿ ಹಿಡಿಯುವುದರಲ್ಲಿ ಉದ್ರೇಕಗೊಂಡ ಭಾವನೆಯುಳ್ಳವರಾದ್ದರಿಂದಲೂ ಹೀಗೆ ಆಗಿದೆ. ಸಾಹಿತ್ಯ ದೃಷ್ಟಿಯಲ್ಲಿ ಕೆಲವರಿಗೆ ಈ ಬರವಣಿಗೆಯು ಅಶ್ಲೀಲವಾಗಿ ಕಂಡುಬರಬಹುದು. ಆದರೆ ಸಮಾಜದಲ್ಲಿ ನಡೆಯುವ ದುಷ್ಕೃತ್ಯಗಳನ್ನು ಇದ್ದಕ್ಕಿದ್ದಂತೆಯೇ ಚಿತ್ರಿಸುವುದು ಪ್ರಗತಿಶೀಲರ ಮತ. ಅಂತೆಯೇ ಶ್ರೀ ಬಿ. ಕೆ. ಸುಂದರರಾಜ್‌ರವರು ಪ್ರಗತಿಶೀಲ ಸಾಹಿತ್ಯಗಳೆಂದರೆ ತಪ್ಪಾಗಲಾರದು.

ಇವರ ಎರಡನೆ ಕುಸುಮವಾದ 'ನರ್ಸ್ ನಳಿನಿ' ಎಂಬ ಕಾದಂಬರಿಯು ಪರಿಪಕ್ವವಾದ ಶೈಲಿಯಲ್ಲಿ ಅನೇಕ ಸಮಾಜ ಲೋಪದೋಷಗಳನ್ನು ಟೀಕಿಸುವ ಕಥೆಯೊಂದಿಗೆ ಆವರಿಸಿಕೊಂಡು ಮುದ್ರಣವಾಗಿದೆ. ಈ ತರುಣ ಲೇಖಕರು ಮುಂದೆಯೂ ಹತ್ತಾರು ರಸಗರ್ಭಿತ ಕಾದಂಬರಿಗಳನ್ನು ಓದುಗರಿಗೆ ಒದಗಿಸುವರೆಂದು ಆಶೆಯಿಂದಿರುವ

—ಒಬ್ಬ ಓದುಗ